॥ ಶ್ರೀಃ ॥

# ಆರ್ಯಧರ್ಮ

ಲೇಖಕ :

ಸಿ. ಎನ್. ಶಾಸ್ತ್ರಿ



ಪ್ರಕಾಶಕ :

ಸಿ. ಎಸ್. ಶಾಸ್ತ್ರಿ, ಅಡ್ವೊಕೇಟ್,

ನಂ. 6, ಸನ್ನಿಧಿ ರಸ್ತೆ, ಬಸವನಗುಡಿ P.O.

ಬೆಂಗಳೂರು—4

[ಬೆಲೆ : ರೂ. ೨–೮–೦

ಈ ಪುಸ್ತಕವನ್ನು

ಸಂಸ್ಕೃತಿ ಪ್ರಸಾರವನ್ನಾರಂಭಿಸಿದ ಮೈಸೂರು ಮುಖ್ಯ ಮಂತ್ರಿಗಳು

**ಶ್ರೀಮಾನ್ ಕೆ. ಹನುಮಂತಯ್ಯನವರು,** ಬಿ.ಎ,ಎಲ್‌ಎಲ್.ಬಿ. ಇವರಿಗೆ

ಕೃತಜ್ಞತಾಪೂರ್ವಕವಾಗಿ ಸಮರ್ಪಿಸಿದ್ದೇನೆ.

# ಮುನ್ನುಡಿ

ಮಾನವರಾಗಿ ಬಾಳಬೇಕಾದರೆ ಮೊದಲು ಅಂತಃಕರಣ ಶುದ್ಧಿಯಿರಬೇಕು, ಆಮೇಲೆ ತದನುಗುಣವಾಗಿ ನಡೆನುಡಿಗಳು ರೂಪಗೊಳ್ಳಬೇಕು, ಅದೇ ಶಿಸ್ತು, ಶಿಕ್ಷೆ, ಸಭ್ಯತೆ, ಸುಜನತೆ. ನಮ್ಮ ಶಾಸ್ತ್ರಕಾರರು ಅಂತಃಕರಣಶುದ್ಧಿಗೆ ಪ್ರಾಧಾನ್ಯವನ್ನು ಕೊಟ್ಟು ತನ್ಮೂಲಕವಾಗಿ ಬಾಹ್ಯವ್ಯಾಪಾರಗಳನ್ನು ಸರಿಪಡಿಸುವ ಕ್ರಮವನ್ನು ಪ್ರತಿ ಪಾದಿಸಿದ್ದಾರೆ. ಶುದ್ಧರಾಗಿ ಬಾಳಿ ಸ್ವಪರಹಿತಗಳನ್ನು ಸಾಧಿಸುವುದಕ್ಕೆ ಅನುಕೂಲ ವಾಗುವಂತೆ ಅವರು ಮಾಡಿಟ್ಟಿರುವ ನಿತ್ಯೋಪಯುಕ್ತವಾದ ನಿಯಮಗಳನ್ನು ಉದ್ಧರಿಸಿ ತೋರಿಸುವುದೇ ಈ ಲೇಖದ ಪ್ರಕೃತವು. ಸ್ಮೃತಿಗಳು ಪುರಾತನಕಾಲ ದವು, ಈ ಕಾಲಕ್ಕೆ ಅನ್ವಯಿಸುವವಲ್ಲ, ಎಂಬ ಪ್ರವಾದವೆದ್ದಿದೆಯಷ್ಟೆ. ನಡವಳಿಕೆ ಗಳು ಕಾಲಾನುಗುಣವಾಗಿರಬೇಕಾದುದು ಸಹಜವಾದುದೇ. ಶ್ರುತಿಸ್ಮೃತ್ಯಾದಿಗಳಲ್ಲಿ ತತ್ತ್ವಗಳೂ ಉಕ್ತವಾಗಿವೆ, ಆ ಕಾಲಕ್ಕೆ ಅನ್ವಯಿಸುವ ನಡವಳಿಕೆಗಳೂ ಅಡಕ ವಾಗಿವೆ. ಪುರಾತನ ಕಾಲದ ನಡವಳಿಕೆಗಳೆಲ್ಲವೂ ಈ ಕಾಲಕ್ಕೆ ಅನ್ವಯಿಸುವುದಿಲ್ಲ. ತತ್ತ್ವಗಳ ಮಾತು ಹಾಗಲ್ಲ, ಅವುಗಳೆಂದಿಗೂ ಮಾಸುವುದಿಲ್ಲವಾಗಿ ಅವು ಸಾರ್ವ ಕಾಲೀನವಾದುವೇ. ಆ ತತ್ತ್ವಗಳನ್ನೂ ತತ್ತ್ವಬೋಧಕಗಳಾದ ನಿಯಮಗಳನ್ನೂ ಸಂಗ್ರಹಿಸಿ ಶಾಸ್ತ್ರಕಾರರು ಏನೇನೋ ಹೇಳಿಬಿಟ್ಟಿದ್ದಾರೆ, ಅದರಿಂದ ಮಾನವನ ಪ್ರಗತಿಗೆ ಪ್ರತಿಬಂಧಕವಾಗುತ್ತದೆ, ಎಂಬ ಆಕ್ಷೇಪವು ನಿರಾಧಾರವೆಂದು ತೋರಿಸು ವುದೇ ಈ ಲೇಖದ ಪ್ರಕೃತ. ಪ್ರಗತಿಯೆಂಬುದು ದ್ವಿಸ್ವಭಾವದ್ದು—ಶ್ರೇಯಸ್ಸೂ ಪ್ರೇಯಸ್ಸೂ ಎರಡೂ ಸಾಮರಸ್ಯದಿಂದ ಬೆಳೆಯುವುದೇ ನಿಜವಾದ ಪ್ರಗತಿ, ಪ್ರೇಯ ಸ್ಸೊಂದನ್ನೇ ಬೆಳೆಸಿಕೊಂಡು ಹೋಗುವುದಲ್ಲ. ಪ್ರೇಯಸ್ಸೊಂದಕ್ಕೇ ಶ್ರಮಿಸುವ ಜನಾಂಗದವರ ಪ್ರಗತಿಯು ಕಡೆಗೆಲ್ಲಿಗೆ ತಲಪುತ್ತದೆಂಬುದು ನಮ್ಮ ಕಣ್ಣೆದುರಿಗೇ ಇದೆ; ತಾವು ತಮ್ಮದು ತಮ್ಮವರು ಎನ್ನುವವರೆಗೂ ನಯ ನೀತಿ, ಪರರೆನ್ನುವ ಸಂದರ್ಭ ಪೊದಗಿದರೆ ಅನೀತಿ ಅವಿನಯ, ಘರ್ಷಣೆಯೊದಗುವ ಸಂಭವವಾದರೆ ಯುದ್ಧ ಹತ್ಯ—ಇವೇ ತಾನೆ. ಮನು ಯಾಜ್ಞವಲ್ಕ್ಯ ಸ್ಮೃತಿಗಳು ಸಮಗ್ರವಾಗಿಯೂ, ಇತರ ಸ್ಮೃತಿಗಳು ಖಂಡವಾಗಿಯೂ, ಶ್ರೇಯಸ್ಸು ಪ್ರೇಯಸ್ಸುಗಳೆರಡನ್ನೂ ಸಾಧಿ ಸುವ ಮಾರ್ಗವನ್ನು ತೋರಿಸಿವೆ. ಪ್ರೇಯಸ್ಸನ್ನು ಕೈಬಿಟ್ಟಿಲ್ಲವೆಂಬುದಕ್ಕೆ ಬೌದ್ಧ ಮತಾವಲಂಬಿಗಳಾದ ವಾಗ್ಭಟರು ತಮ್ಮ ಅಷ್ಟಾಂಗಸಂಗ್ರಹವೆಂಬ ವೈದ್ಯಗ್ರಂಥದಲ್ಲಿ ಸ್ಮೃತಿತತ್ತ್ವಗಳನ್ನು ಸಮರ್ಥಿಸಿರುವುದೊಂದು ನಿದರ್ಶನವೇ ಸಾಕು. ಅವರ ವಚನಗಳನ್ನೂ ಇಲ್ಲಿ ಉದ್ಧರಿಸಿದೆ. ಈ ಸಂಗ್ರಹದಿಂದ ಜನೋಪಕಾರವಾದರೆ ಪರಿಶ್ರಮವು ಸಾರ್ಥಕವಾಯಿತೆಂದುಭಾವಿಸುತ್ತೇನೆ.

ಈ ಪುಸ್ತಕವು ಪ್ರಕಾಶಕ್ಕೆ ಬರಲು ಕಾರಣಕರ್ತರು ನಮ್ಮ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀಮಾನ್ ಕೆ. ಹನುಮಂತಯ್ಯನವರು. ಅವರಿಗೂ, ಉದಾರವಾಗಿ ಸಹಾಯಮಾಡಿದ ಮೈಸೂರು ಸರ್ಕಾರದವರಿಗೂ ಕೃತಜ್ಞನಾಗಿದ್ದೇನೆ. ನನಗೆ ಉತ್ತೇಜನವನ್ನು ಕೊಟ್ಟ ಮಾನ್ಯ ವಿದ್ಯಾಮಂತ್ರಿಗಳಾದ ಶ್ರೀಮಾನ್ ಎ. ಜಿ. ರಾಮ ಚಂದ್ರರಾಯರಿಗೂ ಹಸ್ತಪ್ರತಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ಶಿಫಾರ್ಸು ಮಾಡಿದ ಸಂಸ್ಕೃತಿಪ್ರಸಾರಶಾಖೆಯ ಮಾನ್ಯ ಡೈರೆಕ್ಟರಾದ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ ನವರಿಗೂ ಸಹ ಕೃತಜ್ಞನಾಗಿದ್ದೇನೆ. ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿ ಕೊಟ್ಟ ಕನ್ನಡ ಸಾಹಿತ್ಯ ಪರಿಷತ್ತಿನ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ಸಂಚಾಲಕವರ್ಗದವರಿಗೂ ಶುದ್ಧಾಶುದ್ಧ ಪತ್ರಿಕೆಯನ್ನು ಸಿದ್ಧಪಡಿಸಿಕೊಟ್ಟ ಮಾನ್ಯ ಮಿತ್ರ ಶ್ರೀಮಾನ್ ಬಿ. ಭೀಮಸೇನರಾಯರಿಗೂ ನನ್ನ ಕೃತಜ್ಞತೆಗಳು. ಹಾಗೆಯೇ ಆಗಾಗ ಯುಕ್ತಸಲಹೆಗಳನ್ನಿತ್ತ ಮಾನ್ಯ ಮಿತ್ರರಿಗೂ ನನ್ನ ಕೃತಜ್ಞತೆಗಳು.

ಮನ್ಮಥ ಸಂ. ಆಶ್ವೀ. ಶು. ೧<br>
ಭಾನುವಾರ<br>
ತಾ॥ 16—10—1955

ಇತಿ<br>
ಸಿ. ಎನ್. ಶಾಸ್ತ್ರಿ.

# ವಿಷಯಗಳು

# ಪ್ರಸ್ತಾವನೆ

ನಮ್ಮ ಧರ್ಮಕ್ಕೆ ಸನಾತನಧರ್ಮವೆಂದು ಅನ್ವರ್ಥನಾಮವು. ನಮ್ಮ ನಡೆ
ನುಡಿಗಳೂ, ಆಚಾರವ್ಯವಹಾರಗಳೂ, ಪುರುಷಾರ್ಥಪರಮಾರ್ಥಗಳೂ, ಒಟ್ಟಿನಲ್ಲಿ
ನಮ್ಮ ಜೀವನವೆಲ್ಲವೂ, ಧರ್ಮಮಯವಾದುದು ಸನಾತನತ್ವವೂ ಧರ್ಮತ್ವವೂ
ಇದರ ವೈಶಿಷ್ಟ್ಯಗಳು ಇದು ಯಾವ ಧರ್ಮಾಚಾರ್ಯನ ನಾಮಧೇಯದಿಂದಲೂ
ನಿರ್ವಚನವಾಗಿಲ್ಲ, ಯಾರ ವೈಯಕ್ತಿಕ ಮತದ ಮೇಲೂ ವ್ಯವಸ್ಥಿತವಾಗಿಲ್ಲ; ಶಾಶ್ವತ
ವಾದ ತತ್ತ್ವಗಳ ಆಧಾರದ ಮೇಲೆಯೇ ವ್ಯವಸ್ಥಿತವಾಗಿರುವುದು. ತತ್ತ್ವಗಳಿಗೆ
ಎಂದಿಗೂ ಚ್ಯುತಿಯಿಲ್ಲ ಆದರಿಂದ ತದ್ವಿಶಿಷ್ಟವಾದ ಧರ್ಮವು ಸನಾತನವು, ಸನಾತನ
ವಾದುದರಿಂದ ಸದಾತನವೂ ಇತರ ಮತಗಳು ಸಾಮಾನ್ಯವಾಗಿ ಆಯಾ ಮಹಾ
ಪುರುಷರ ಉಪದೇಶಗಳ ಮೇಲೆ ವ್ಯವಸ್ಥಿತವಾಗಿವೆ; ಆಯಾ ಮತಸ್ಥಾಪನಾಚಾರ್ಯರ
ಹೆಸರಿನಿಂದ ನಿರ್ವಚನವಾಗಿಯೂ ಇವೆ. ಅವುಗಳಲ್ಲಿ ತತ್ತ್ವಗಳಿಲ್ಲವೆಂತಲ್ಲ, ವ್ಯಕ್ತಿ
ಮತವೇ ಪ್ರಧಾನವೆಂದರೆ ಪ್ರಕೃತಕ್ಕೆ ಸಾಕು ಸನಾತನಧರ್ಮವು ವಿಭೂತಿಮತ್ತಾ
ದುದು. ಎಷ್ಟೋ ಮತಗಳು ಹುಟ್ಟಿ ಬೆಳೆದು ಅಳಿದವು; ಎಷ್ಟೋ ಸಂಸ್ಕೃತಿಗಳೂ
ಸಭ್ಯತೆಗಳೂ ನಾಗರಿಕತೆಗಳೂ ಬೆಳಗಿ ತೊಳಗಿ ನಿರ್ನಾಮವಾದವು. ನಮ್ಮಲ್ಲಿಯೂ
ಮೇಧಾವಿಗಳೂ ನ್ಯಾಯವಾದಿಗಳೂ ಮೀಮಾಂಸಕರೂ ಬಹುಸಂಖ್ಯೆಯಲ್ಲಿದ್ದರು;
ಹಾಗೆಯೇ ಮಹಾ ಮಹಾ ಘಟಕರಾದ ನಾಸ್ತಿಕಾದಿ ವಿರೋಧಿಗಳೂ ವಿಶೇಷವಾಗಿ
ದ್ದರು; ಅವರೆಲ್ಲರ ಗ್ರಂಥಗಳೂ ಗ್ರಂಥಭಾಗಗಳೂ ಈಗಲೂ ಅವಶಿಷ್ಟವಾಗಿವೆ;
ಅವರ ಪೂರ್ವಪಕ್ಷ ಸಮಾಧಾನಗಳು ವೇದಾಂತ ಗ್ರಂಥಗಳಲ್ಲಿ ಉದಾಹೃತವಾಗಿವೆ.
ಅಂಥಾ ಘಟಾನುಘಟಕರ ವಿಮರ್ಶೆಗಳಿಗೊಳಗಾಗಿ, ಪೂರ್ವಪಕ್ಷಗಳಿಗೆ ಬಗ್ಗದೆ,
ಅನೀಶ್ವರವಾದ ಹೇತುವಾದ ಯುಕ್ತಿವಾದಗಳಿಗೆ ತುತ್ತಾಗದೆ, ಉಳಿದು ಊರ್ಜಿತ
ವಾಗಿ ಸನಾತನಧರ್ಮವು ಸ್ಥಾಯಿಯಾಗಿದೆ. ಒಳಗೂ ವಿರುದ್ಧ ಮತಗಳು ಹುಟ್ಟಿ
ರಾಷ್ಟ್ರಾದ್ಯಂತವಾಗಿ ಪ್ರಸರಿಸಿ ಸನಾತನಧರ್ಮವನ್ನೇ ಕಬಳಿಸುವ ಸಂದರ್ಭಗಳೂ
ಒದಗಿದವು. ಹೊರಗಿನಿಂದ ಪ್ರಾಪ್ತವಾದ ಆಘಾತಗಳಿಗಂತೂ ಲೆಕ್ಕವೇ ಇಲ್ಲ :—
ಧರ್ಮಗ್ರಂಥಗಳೂ ವಿದ್ಯಾಪೀಠಗಳೂ ವಿಲಯವಾದವು; ಹಲವು ದುರ್ಬಲರೂ
ಸ್ವಧರ್ಮವನ್ನು ತ್ಯಜಿಸಿದರು; ಲಕ್ಷಾಂತರ ಧರ್ಮವೀರರು ಧರ್ಮಕ್ಕಾಗಿ ಬಲಿಯೂ
ಆದರು; ಒಟ್ಟಿನಲ್ಲಿ ಭಾರತೀಯರು ಧರ್ಮಭ್ರಷ್ಟರಾಗಲಿಲ್ಲ. ಕಷ್ಟವು ಹೆಚ್ಚಿದಷ್ಟೂ
ಅವರ ಧೈರ್ಯಸ್ಥೈರ್ಯಗಳು ವೃದ್ದಿಯಾದವು; ವಿರುದ್ದಪ್ರಚಾರವು ಪ್ರಚುರ
ವಾದಷ್ಟೂ ಸ್ವಧರ್ಮದ ವಿಚಾರವೂ ವಿವೇಚನೆಯೂ ಆಸ್ತಿಕತೆಯೂ ವಿವೃದ್ಧ
ವಾಯಿತು. ಧರ್ಮಗ್ರಂಥಗಳಿಗೆ ಉಳಿಗಾಲವಿಲ್ಲದೆ ಧರ್ಮಾಚಾರ್ಯರುಗಳು ವಿಸ್ತಾರ

ವನ್ನು ಪರಿಹರಿಸಿ ಸಣ್ಣಪುಟ್ಟ ಸೂತ್ರಗಳನ್ನು ರಚಿಸಿಟ್ಟರು ; ಅವನ್ನು ಮೇಧಾವಿಗಳಾದ ಶಿಷ್ಯಪ್ರಶಿಷ್ಯರು ಕಂಠಪಾಠ ಮಾಡಿ ಸಜೀವಗ್ರಂಥಗಳಾದರು. ವಿಪುಲವಾದ ವಿದ್ಯಾಲಯಗಳೂ ಮಹಾಮಹಿಮರಾದ ಕುಲಪತಿಗಳೂ ನಿರ್ನಾಮವಾದರೆ ಮನೆ ಮಠಗಳೂ ವನಕಾನನಗಳೂ ಪರ್ಣಶಾಲೆತರುಚ್ಛಾಯೆಗಳೂ ವಿದ್ಯಾಪೀಠಗಳಾದವು ಮಹದಾಶ್ರಯವು ತಪ್ಪಿ ಮೃಷ್ಟಾನ್ನವು ನಷ್ಟವಾದರೆ, ಭಿಕ್ಷಾನ್ನಜೀವಿಗಳಾದರು, ಫಲಮೂಲಾಶಿಗಳಾದರು, ತೃಣಧಾನ್ಯಗಳಿಗೇ ತೃಪ್ತರಾದರು—ಸ್ವಧರ್ಮವನ್ನೂ ತ್ಯಜಿಸಲಿಲ್ಲ, ಧರ್ಮಪ್ರಚಾರವನ್ನೂ ಸಂಕುಚಿತ ಮಾಡಲಿಲ್ಲ.

ಇತ್ತೀಚೆಗೆ ಮತ್ತೊಂದು ಕಷ್ಟತರವಾದ ಆಘಾತವು ಪ್ರಾಪ್ತವಾಯಿತು. ಅದು ಬಲಪ್ರಯೋಗದ ಅಪಚಾರ ಅತ್ಯಾಚಾರವಲ್ಲ; ಉಪಾಯವಾಗಿ ಬುದ್ಧಿಗೆ ವಿರುದ್ಧ ಭಾವವನ್ನು ಕಲ್ಪಿಸಿ ಪದಪ್ರಶಸ್ತಿಗಳ ಪ್ರಲೋಭನದಿಂದ ವೃದ್ಧಿಪಡಿಸಿ ಜನರನ್ನು ಆಕರ್ಷಿಸುವಂಥಾದ್ದು. ಭಯಭೀತಿಗೆ ತಲೆಬಾಗದವರು ಪದಪ್ರಶಸ್ತಿಗಳಿಗೆ ಮಾರು ಹೋದರು. ಈ ವಿಧದ ಪ್ರಲೋಭನಕ್ಕೂ ಕೊನೆಯುಂಟು. ಫಲಪ್ರಾಪ್ತಿ ಪರ್ಯಂತವಾಗಿಯೇ ಅದಕ್ಕೆ ವಿಜಯ. ಫಲಾಗಮವೂ ಪ್ರತ್ಯಾಶೆಯೂ ಕಡಿಮೆಯಾಗುತ್ತಾ ಬಂದಹಾಗೆಲ್ಲ ಅದಕ್ಕೆ ಮರುಳಾಗುವವರೂ ವಿರಳರಾದರು. ಉಪಾಯಗಾರರು ಸಾಮದಾನಗಳನ್ನು ಭೇದಕ್ಕೆ ಪರಿವರ್ತಿಸಿದರು. ಅದಕ್ಕೂ ಮೊದಮೊದಲು ವಿಜಯವಾದರೂ ಕಡೆಗೆ ಚ್ಯುತಿಯಾಯಿತು. ರಾಮಕೃಷ್ಣ ಪರಮಹಂಸರೂ ಸ್ವಾಮಿ ವಿವೇಕಾನಂದರೂ ಮುಂತಾದ ಧರ್ಮವೀರರು ಅವತರಿಸಿ ಧರ್ಮಸಂಸ್ಥಾಪನೆಯನ್ನು ಮಾಡಿದರು.

ಸನಾತನಧರ್ಮದ ಸದಾತನತ್ವಕ್ಕೆ ಸನಾತನಿಗಳ ಪುರುಷಪ್ರಯತ್ನವು ನಿಮಿತ್ತ ಕಾರಣವೇ ಹೊರತು ನಿದಾನಕಾರಣವಲ್ಲ. ಧರ್ಮದ ಗಟ್ಟಿಯಾದ ಅಸ್ಥಿಭಾರವೂ ಅನನ್ಯಸಾಮಾನ್ಯವಾದ ಅದ್ವೇಷವೂ ಸಹನಶೀಲವೂ ಕಾರಣಗಳು. “ಸನಾತನ ಧರ್ಮವು ವಿಕಲ್ಪವನ್ನೈದದ ವಿಭೂತಿಮತ್ತಾದುದು. ಯಾವ ಅನ್ಯಮತವೂ ಇದನ್ನು ಅಲ್ಲಾಡಿಸಲಾರದೆ ಹೋಯಿತು. ಯಾವ ಧರ್ಮವೇ ಆಗಲಿ, ಯಾವ ಮತವೇ ಆಗಲಿ, ಯಾವ ಸಂಸ್ಕೃತಿಯೇ ಆಗಲಿ, ಇದರೊಡನೆ ಸಂಪರ್ಕವನ್ನು ಹೊಂದಿತೆಂದರೆ ಸಾಕು, ಇದು ಅದನ್ನು ಗ್ರಹಿಸಿ ಚರ್ವಿಸಿ ಗುಣರಸವನ್ನು ಹೀರಿ ನೀರಸವಾದ ಸಿಪ್ಪೆಯನ್ನು ಒಗೆದುಬಿಟ್ಟಿದೆ.” ಎಂದು ಸ್ವಾಮಿ ವಿವೇಕಾನಂದರು ನುಡಿದಿದ್ದಾರೆ. “ಸನಾತನಧರ್ಮವು ಬೆಳೆಯುತ್ತಾ ಪ್ರವರ್ಧಮಾನವಾಗುತ್ತಿರುವ ಧರ್ಮವು” ಎಂದೂ ಸಾರವತ್ತಾಗಿ ನುಡಿದಿದ್ದಾರೆ. “ಭಾರತದ ಸಂಸ್ಕೃತಿಯು ಪ್ರಾಚೀನರ ಉಕ್ತಿಯಲ್ಲಿ ಅನಾದಿಯಾಗಿಯೂ, ಅರ್ವಾಚೀನರ ಮಾತಿನಲ್ಲಿ ಪ್ರಾಚೀನಕಾಲದಿಂದಲೂ, ನಡೆದು ಬಂದಿದೆ. ಈ ಆರ್ಯಸಂಸ್ಕೃತಿಯು ಯಾವಾಗಲೂ ಏತರಿಂದಲೂ ತ್ರುಟಿತವಾಗಲಿಲ್ಲ. ಭಾರತದ ಮೇಲೆ ಎಷ್ಟೋ ದಂಡಯಾತ್ರೆಗಳಾದವು. ಇದಕ್ಕೂ ಎಷ್ಟೋ ಜಯ ಪರಾಜಯಗಳೂ ಸಂಭವಿಸಿದವು, ಇಲ್ಲಿಯೂ ಬಲಿಷ್ಠರೂ ಪರಾಕ್ರಮಿಗಳೂ ದುರ್ಬ

ಲರೂ ನಿರ್ವೀರ್ಯರೂ ಇದ್ದರು. ಒಂದೊಂದು ಸಮಯದಲ್ಲಿ ಇದೂ ಐಕಮತ್ಯದ ಅಭೇದ್ಯಪ್ರಭಾವದಿಂದ ಅಜೇಯವಾಗಿದ್ದಿತು. ಒಂದೊಂದು ಕಾಲದಲ್ಲಿ ಅಂತಶ್ಛಿದ್ರಗಳು ಹೆಚ್ಚಿ ದೇಶವು ಛಿನ್ನಚ್ಛಿದ್ರವಾಗಿ ಪರರಿಗೆ ತುತ್ತೂ ಆಯಿತು. ಆದರೂ ಭಾರತೀಯರು ಧರ್ಮದಿಂದ ಚ್ಯುತರಾಗಲಿಲ್ಲ. ಭಾರತಮಾತೆಯ ಕೋಟ್ಯನುಕೋಟಿ ಪ್ರಜೆಗಳು ಜನಿಸಿ ಜೀವಿಸಿ ಲಯವಾದರೂ ಭಾರತಮಾತೆಯು ಮಾತ್ರ ಅಮರಳಾಗಿ ಉಳಿದಿದ್ದಾಳೆ. ಭಾರತದ ಸಂಸ್ಕೃತಿಯು ಯಾವಾಗ ಆರಂಭವಾಯಿತೆಂದು ಯಾವ ಇತಿಹಾಸಪ್ರವೀಣರೂ ನಿರ್ಣಯಿಸಲಾರರು; ಹಾಗೆಯೇ ಈ ಸಂಸ್ಕೃತಿಗೆ ಯಾವಾಗ ನಾಶವೆಂದು ಯಾವ ಭವಿಷ್ಯವಾದಿಯೂ ನುಡಿಯಲಾರನು. ಐತಿಹಾಸಿಕರ ಅಭಿಪ್ರಾಯದ ಪ್ರಕಾರ ಇದು ಐದುಸಹಸ್ರ ವರ್ಷಗಳಿಗಿಂತಲೂ ಪ್ರಾಚೀನವಾದುದು, ಇದರ ಸಾಹಿತ್ಯವು ಏಳು ಸಾವಿರ ವರ್ಷಗಳ ಹಿಂದಣದು. ಕ್ರಿ.ಪೂ. ಮೂರುಸಾವಿರ ವರ್ಷಗಳ ಹಿಂದೆ, ಅಂದರೆ ಈಗ್ಗೆ ಐದುಸಾವಿರ ವರ್ಷಕ್ಕೆ ಮೊದಲು, ಭಾರತಕ್ಕೂ ಬ್ಯಾಬಿಲೋನಿಯಾಕ್ಕೂ ನಡೆಯುತ್ತಿದ್ದ ವಾಣಿಜ್ಯದ ವೈಶಾಲ್ಯದಿಂದ ಈ ದೇಶದ ಅತುಲ ಸಂಪತ್ತೂ ಉನ್ನತ ಸಂಸ್ಕೃತಿಯೂ ವ್ಯಕ್ತವಾಗುವುದು. ದಂಡಯಾತ್ರೆಗಳೂ ಗತಾಽಽಗತವಾಗಿದ್ದವು. ಭಾರತವು ತನ್ನೊಡನೆ ಸಂಧಿಸಿದವರ ಅನುಭವವನ್ನೂ ವೈಶಿಷ್ಟ್ಯವನ್ನೂ ವಿಮರ್ಶಿಸಿ ಗುಣವನ್ನು ಗ್ರಹಿಸಿ ಹೊಸದಾಯಿತು. ಹೀಗೆ ಅದರ ಪ್ರಭಾವವೂ ಪ್ರಾಬಲ್ಯವೂ ಬೆಳೆಯಿತು. ಇಷ್ಟೆಲ್ಲವೂ ಆದರೂ ಭಾರತವು ತನ್ನ ವೈಶಿಷ್ಟ್ಯವನ್ನು ಮಾತ್ರ ಕಳೆದುಕೊಳ್ಳಲಿಲ್ಲ"—ಎಂದು ಕೀರ್ತಿಶೇಷರಾದ ಮಿ|| ಆನೀಬೆಸೆಂಟರೂ, ಮೆ|| ಘೋಷರೂ ಬರೆದಿದ್ದಾರೆ.[1]

ಭಾರತದವರೂ ಉದ್ಯಮದಲ್ಲೂ ಉತ್ಸಾಹದಲ್ಲೂ ಯಾರಿಗೂ ಕಡಿಮೆಯಾಗಿರಲಿಲ್ಲ. ಇವರೂ ದೇಶಾಂತರಗಳಿಗೆ ಹೋಗಿ ವ್ಯಾಪಾರಾದಿಗಳಿಂದ ಧನಾರ್ಜನೆಯನ್ನೂ ಮಾಡಿದರು, ತಮ್ಮ ಸಂಸ್ಕೃತಿಯನ್ನೂ ಪ್ರಚಾರಮಾಡಿದರು. ವಿದ್ಯಾರ್ಜನೆಯ ಅನಂತರ ನಿಯಮವಾಗಿ ದೇಶಾಟನೆಯನ್ನು ಮಾಡುವ ಸಂಪ್ರದಾಯವನ್ನಿಟ್ಟುಕೊಂಡಿದ್ದರು. ಅಂಥಾವರಿಗೆ ವಿದ್ಯಾಸ್ನಾತಕರೆಂದು ಸಂಕೇತ. ಅವರಿಗೆ ಮರ್ಯಾದೆಯೂ ಉತ್ತೇಜನವೂ ಇತ್ತು. ಅವರಲ್ಲಿ ವಿಶೇಷವಾಗಿ ಮುಂದುವರಿದ ಸಾಹಸಿಗಳು ದೇಶಾಂತರಗಳಿಗೂ ಹೋಗಿ ಅಲ್ಲಿನ ವ್ಯುತ್ಪನ್ನರೊಡನೆ ಸಂಧಿಸಿ ಅವರ ವಿಶೇಷ ವಿದ್ಯವನ್ನೂ ಸಂಗ್ರಹಿಸುತ್ತಿದ್ದರು. ಹಾಗೆಯೇ ದೇಶಾಂತರಗಳಿಂದಲೂ ಪರಿಶೀಲಕರೂ ವಿದ್ಯಾರ್ಜನಪರರೂ ಇಲ್ಲಿಗೂ ಬರುತ್ತಿದ್ದರು. ಹೀಗೆ ದೇಶಾಂತರದ ಸುಸಂಸ್ಕೃತರ ಸಂಪರ್ಕವು ಇಲ್ಲಿನವರಿಗೆ ಸದಾ ಇದ್ದೇ ಇತ್ತು. ಭಾರತವು ಅನ್ಯ ಜನಾಂಗದ ಸಂಪರ್ಕವಿಲ್ಲದೆ ಪೃಥಕ್ಕಾಗಿ ಇರಲೇ ಇಲ್ಲ. ಗುಣಗ್ರಹಣಪರವೂ ಸಹನ

---

1 ವಿಸ್ತಾರವನ್ನು ಮಿ|| ಬೆಸೆಂಟರವರ "How India Wrought for Freedom" ಎಂಬ ಗ್ರಂಥದಲ್ಲಿಯೂ, ಮೆ|| ಘೋಷರವರ "Hindu Law" ಗ್ರಂಥದ ದ್ವಿತೀಯ ಭಾಗದ ಐತಿಹಾಸಿಕ ಉಪೋದ್ಘಾತದಲ್ಲಿಯೂ, ನೋಡಬಹುದು.

ಶೀಲಪ್ರಾಯವೂ ಆದ ಭಾರತವು ಈ ಸಂಬಂಧದಿಂದ ದಿನೇ ದಿನೇ ಮುಂದುವರಿಯುತ್ತಿತ್ತು.[2]

ಈ ಪ್ರಕರಣದಲ್ಲಿ ಐತಿಹಾಸಿಕರ ನಿರ್ಣಯವನ್ನೂ ಗಮನಿಸುವುದು ಯುಕ್ತವು:– ಆರ್ಯರೆಲ್ಲರೂ ಮೊದಲು ಮಧ್ಯ ಆಸಿಯಾದ ನಿವಾಸಿಗಳಾಗಿದ್ದರು. ಕಾಲಕ್ರಮೇಣ ಅವರಿಗಲ್ಲಿ ಜೀವನಕ್ಕೆ ತೊಂದರೆಯಾಗಿ ಜೀವನೋಪಾಯವನ್ನು ಅರಸುತ್ತಾ ಕೆಲವರು ಪಶ್ಚಿಮಕ್ಕೂ ಕೆಲವರು ದಕ್ಷಿಣಕ್ಕೂ ಕೆಲವರು ಪೂರ್ವಕ್ಕೂ ಚದುರಿದರು. ಪಶ್ಚಿಮಕ್ಕೆ ಹೋದವರು ಭೂಮಧ್ಯ (ಮೆಡಿಟರೇನಿಯನ್) ಸಮುದ್ರದ ಫಲವತ್ತಾದ ತೀರಪ್ರದೇಶದಲ್ಲಿ ನೆಲೆಸಿ ಗ್ರೀಸ್ ಮ್ಯಾಸಿಡೋನಿಯಾ ರೋಮ್ ಮುಂತಾದ ದೊಡ್ಡ ದೊಡ್ಡ ಆಧಿಪತ್ಯಗಳನ್ನು ರಚಿಸಿಕೊಂಡು ವೈಭವದಿಂದ ಬಾಳಿದರು. ಅವರ ಆಗಿನ ಸಂಸ್ಕೃತಿಯು ಹೇಗಿತ್ತೆಂದು ತಿಳಿಯುವುದಕ್ಕೆ ನೇರವಾದ ಯಾವ ಆಧಾರವೂ ಉಳಿದಿಲ್ಲ. ಗ್ರೀಸಿನ ಸಾಹಿತ್ಯದಿಂದಲೂ ರೋಮಿನ ರಾಜಕೀಯದಿಂದಲೂ ಅಷ್ಟಿಷ್ಟು ಮಾತ್ರ ಊಹಿಸಬಹುದಾಗಿದೆ. ದಕ್ಷಿಣಕ್ಕೆ ನಡೆದವರು ಮೆಸಪೊಟೇಮಿಯಾದಲ್ಲಿಯೂ ಪಾರ್ಸಿಯಲ್ಲಿಯೂ ನೆಲೆಸಿ ಬ್ಯಾಬಿಲೋನಿಯಾ ಅಸ್ಸಿರಿಯಾ ಪರ್ಷಿಯಾ ಮುಂತಾದ ದೊಡ್ಡ ದೊಡ್ಡ ಚಕ್ರಾಧಿಪತ್ಯಗಳನ್ನು ಸ್ಥಾಪಿಸಿ ವೈಭವದಿಂದ ಬಾಳಿದರು. ಬ್ಯಾಬಿಲೋನಿಯಾದ ರಾಜಧಾನಿಯಾದ ಬ್ಯಾಬಿಲೋನ್ ನಗರವು ಯೂಫ್ರಟೀಸ್ ನದಿಯ ಉಭಯ ಪಾರ್ಶ್ವಗಳಲ್ಲಿಯೂ ವಿಸ್ತೃತವಾಗಿ ಪೂರ್ವದ ಕಡೆ ಮೂರೂವರೆ ಮೈಲಿ ಸುತ್ತಳತೆಯ ಅರಮನೆಯೂ ಪಶ್ಚಿಮದ ಕಡೆ ಏಳೂವರೆ ಮೈಲಿ ಸುತ್ತಳತೆಯ ಅರಮನೆಯೂ ನಿರ್ಮಿತವಾಗಿ, ಸುಮಾರು ಇಪ್ಪತ್ತು ಲಕ್ಷ ಕಾರ್ಮಿಕರು ವರ್ಷಗಟ್ಟಳೆ ದುಡಿದು ಅರವತ್ತು ಮೈಲಿ ಉದ್ದದ ಎಂಭತ್ತೇಳಡಿ ಗಾತ್ರದ ಮುನ್ನೂರ ಐವತ್ತಡಿ ಎತ್ತರದ ಕೋಟೆ ಗೋಡೆಯನ್ನು ಕಟ್ಟಿದ್ದರು. ಕೋಟೆಗೆ ಒಂದೊಂದು ದಿಕ್ಕಿಗೆ ಇಪ್ಪತ್ತೈದಿಪ್ಪತ್ತೈದರಂತೆ ಒಟ್ಟು ನೂರು ಹಿತ್ತಳೆ ಗಟ್ಟಿಯ ದಿಡ್ಡೀಬಾಗಿಲುಗಳೂ ಬಾಗಿಲು ಬಾಗಿಲುಗಳಿಗೆ ನೇರವಾಗಿ ಹದಿನೈದು ಹದಿನೈದು ಮೈಲಿ ಉದ್ದದ ರಾಜಮಾರ್ಗಗಳೂ ಇದ್ದವು. ಇವನ್ನು ಕಟ್ಟಿಸಿದ ಮಹಾರಾಣಿ ಸಮಿರಾಮಿಷೆ (ಸೆಮಿರಾಮಿಸ್). ಆಕೆಯೆಂಥಾ ಪ್ರಭಾವಶಾಲಿನಿ ! ಆಕೆಯಾಳಿದ ಚಕ್ರಾಧಿಪತ್ಯವಿನ್ನೆಂಥಾ ಸಂಪದಭ್ಯುದಯ ವಿಶಿಷ್ಟವಾದುದು ! ಆ ಚಕ್ರಾಧಿಪತ್ಯದ ಪ್ರಜಾಕೋಟಿಗಳೆಂಥಾ ನಿಪುಣರು ಭಾಗ್ಯವಂತರು ಮುಂದುವರಿದವರು ! ಎಂಬುದನ್ನಿನ್ನು ಹೇಳಬೇಕಾದುದೇ ಇಲ್ಲ. ಹಾಗೆಯೇ ಅಸ್ಸಿರಿಯಾ ಚಕ್ರಾಧಿಪತ್ಯದ ರಾಜಧಾನಿಯಾದ ನಿನೆವಾ

---

2 ಉದಾಹರಣೆಗಾಗಿ, ವರಾಹಮಿಹಿರಾಚಾರ್ಯರ ಪಂಚಸಿದ್ಧಾಂತ(Five systems of Astranomy)ದಲ್ಲಿ ಅವರು ಭಾರತದ ಸಿದ್ಧಾಂತದ ಜತೆಗೆ ದೂರದೇಶದವರಾದ ಯವನರ(Greeks), ರೋಮಕರ(Romans) ಮುಂತಾದ ಇನ್ನೂ ನಾಲ್ಕು ಸಿದ್ಧಾಂತವನ್ನು ಸಂಗ್ರಹಿಸಿದ್ದಾರೆ, ಮತ್ತು ತಮ್ಮ ಬೃಹಜ್ಜಾತಕದಲ್ಲಿ ಗ್ರೀಸಿನ ಸುಪ್ರಸಿದ್ಧ ಜ್ಯೋತಿಷ್ಕರಾದ ಯವನಾಚಾರ್ಯರ ಮತವನ್ನೂ ವಿಶೇಷವಾಗಿ ಬಳಸಿದ್ದಾರೆ, ಎಂಬುದು ಗಮನಾರ್ಹವು.

(ನಿನ್ನೇವಾ) ನಗರವು ವಿಷಮ ಚತುಷ್ಕೋಣಾಕೃತಿಯಲ್ಲಿ ನಿರ್ಮಿತವಾಗಿ, ಅದರ ದೀರ್ಘಭುಜದ ಅಳತೆಯು ಮೂವತ್ತಾರು ಮೈಲಿ ಉದ್ದವೂ ಎದುರು ಭುಜವು ಇಪ್ಪತ್ತನಾಲ್ಕು ಮೈಲಿಯೂ ವಿಸ್ತಾರವು ಇನ್ನೂರ ಹದಿನಾರು ಚದರಮೈಲಿಯೂ ಉಳ್ಳದ್ದಾಗಿ ಸಾವಿರದ ಐನೂರು ಕೊತ್ತಲುಗಳಿಂದ ಕೂಡಿದ ನೂರು ಅಡಿ ಗಾತ್ರದ ಪ್ರಾಕಾರಭಿತ್ತಿಯ ಕೋಟೆಯಿಂದೊಡಗೂಡಿ ಪ್ರಪಂಚದಲ್ಲೆಲ್ಲಾ ದೊಡ್ಡದಾಗಿತ್ತು. ಬ್ಯಾಬಿಲೋನಿಯೂ ಅಸ್ಸಿರಿಯಾ ಚಕ್ರಾಧಿಪತ್ಯಗಳೆರಡೂ ಸಮಿರಾಮಿಷೆ ಸಾರ್ವಭೌಮಳ ಏಕಾಧಿಪತ್ಯದಲ್ಲಿದ್ದವು. ಆಕೆಯು ಮಿಶ್ರದೇಶ (ಈಜಿಪ್ಟ್) ಈತಿಪ್ರಾಯ (ಈತಿಯೋಪಿಯ) ಪಾರಸಿಕ (ಪರ್ಷಿಯಾ) ದೇಶಗಳನ್ನು ಗೆದ್ದು ತನ್ನ ಆಧಿಪತ್ಯಕ್ಕೆ ಸೇರಿಸಿಕೊಂಡು ಭಾರತದ ಮೇಲೂ ಆಕ್ರಮಣವನ್ನು ಮಾಡಿ ಜಮ್ಮೂವರೆಗೂ ಬಂದು ಅಲ್ಲೊಂದು ಜಯಸ್ತಂಭವನ್ನು ಸ್ಥಾಪಿಸಿ ಅಲ್ಲಿಂದ ಮುಂದಕ್ಕೆ ಬರಲಾರದೆ ಹಿಂತಿರುಗಿ ಹೋದಳಂತೆ. ಅಂಥಾ ಪ್ರತಾಪಶಾಲಿನಿಯನ್ನು ಹಿಂದಕ್ಕಟ್ಟಿದ ಭಾರತ ವಿನ್ನೆಂಥಾ ಪ್ರಭಾವಶಾಲಿಯು ಇಂಥಿಂಥಾ ಚಕ್ರಾಧಿಪತ್ಯಗಳ ಆ ಕಾಲದ ಸಂಸ್ಕೃತಿಯನ್ನೂ ಸಾಹಿತ್ಯವನ್ನೂ ನಾಗರಿಕತೆಯನ್ನೂ ರಾಜಕೀಯವನ್ನೂ ಅರಿಯಲು ನೇರವಾದ ಯಾವ ಆಧಾರವೂ ಅವಶಿಷ್ಟವಾಗಿಲ್ಲ. ಪ್ರಕೃತವೇನೆಂದರೆ ಪಾಶ್ಚಾತ್ಯ ಆರ್ಯರೂ ದಾಕ್ಷಿಣಾತ್ಯ ಆರ್ಯರೂ ಕೇವಲ ಐಹಿಕಾಭ್ಯುದಯದ ಕಡೆಗೇ ಗಮನವನ್ನು ಕೊಟ್ಟರೆಂಬುದರಲ್ಲಿ ಸಂದೇಹವಿಲ್ಲ. ಅಂಥಾ ಅಧ್ಯವಸಾಯದ ಪರಿಣಾಮವಾಗಿ ಅವರ ಸಂಪದಭ್ಯುದಯಗಳೆಲ್ಲವೂ ಅವಶ್ಯಂಭಾವಿಯಾದ ತಾತ್ಕಾಲಿಕ ಭೋಗದಲ್ಲಿಯೂ ವಿತರಣೆಯಲ್ಲಿಯೂ ಕೊನೆಗೆ ವಿನಾಶದಲ್ಲಿಯೂ ಪರಿಸಮಾಪ್ತಿಯಾದವು. ಅವರು ನೈತಿಕ ತಾತ್ತ್ವಿಕ ಆಧ್ಯಾತ್ಮಿಕ ಸಂಸ್ಕೃತಿಗಳಿಗಾಗಿ ಅಷ್ಟಾಗಿ ಶ್ರಮಿಸಲಿಲ್ಲ, ತಮ್ಮ ಧರ್ಮವನ್ನೂ ರಕ್ಷಿಸಿಕೊಳ್ಳಲಿಲ್ಲ. ಈಚೆಗೆ ಸ್ಥಾಪಿತವಾದ ಕ್ರೈಸ್ತಮತವನ್ನು ಪಾಶ್ಚಾತ್ಯರೂ ಮಹಮ್ಮದೀಯ ಮತವನ್ನು ದಾಕ್ಷಿಣಾತ್ಯರೂ ಅವಲಂಬಿಸಿದರು. ಪೌರ್ವಾತ್ಯರು ಮಾತ್ರ ತಮ್ಮ ಧರ್ಮವನ್ನೂ ಸಂಸ್ಕೃತಿಯನ್ನೂ ತ್ಯಜಿಸಲಿಲ್ಲ, ಐಹಿಕ ಸಂಪದಭ್ಯುದಯಗಳನ್ನೂ ಉಪೇಕ್ಷಿಸಲಿಲ್ಲ. ಸುರಿಮಳೆಯಾದ ಹೊರಗಣ ಆಘಾತ ವಿಘಾತಗಳಿಗೂ ತಮ್ಮನ್ನೇ ಕಬಳಿಸುವಂಥಾ ಒಳಗಣ ವಿರುದ್ಧಧರ್ಮಗಳಿಗೂ ಹೆದರದೆ ಎದೆಗೊಟ್ಟು ನಿಂತು ಸ್ವಧರ್ಮವನ್ನು ರಕ್ಷಿಸಿಕೊಂಡರು. ಅದರಿಂದಲೇ ಸನಾತನಧರ್ಮಕ್ಕೆ ಸದಾತನತ್ವವು. ಕಷ್ಟಪಟ್ಟು ಉಳಿಸಿಕೊಂಡುದರಿಂದ ಅದು ನಮಗೆ ಪ್ರಿಯವು. ಶುದ್ಧವಾದ ತತ್ತ್ವಗಳ ಮೇಲೆ ಸುಸ್ಥಿರವಾಗಿರುವುದರಿಂದ ನಮಗೆ ಹಿತವು ಈರ್ಷ್ಯಾಸೂಯರಹಿತವೂ ಸಹನಶೀಲವೂ ಸಮಾಧಾನವಿಶಿಷ್ಟವೂ ಆದುದರಿಂದ ಇದಕ್ಕೆ ಚ್ಯುತಿಯ ಭೀತಿಯಿಲ್ಲ. ವಿನಾಶಕಾಲವು ಒದಗಿದಾಗಲೂ ನಾಶವಾಗದೆ ಉಳಿದುದು ನಿಜವಾಗಿಯೂ ಅಮರವು. ಅದರಿಂದಲೇ ಸರ್ವಥಾ ಪಾಲನೀಯವು. ಅದಕ್ಕಾಗಿ ಇಷ್ಟು ಹೇಳುವುದೇ ಹೊರತು ದುರಭಿಮಾನವಾಗಲೀ ಪರನಿಂದೆಯಾಗಲೀ ವಕ್ತವ್ಯವಲ್ಲ.

ಸನಾತನಧರ್ಮವು ಸ್ಥಿರವಾಗಿದೆಯೋ ? ಅಥವಾ ಲುಪ್ತವಾಗಿದೆಯೋ ? ಸ್ಥಿರವಾಗಿದ್ದರೆ ಜಿಜ್ಞಾಸವೇ ಬೇಕಿಲ್ಲ. ಲುಪ್ತವಾಗಿದ್ದರೆ ಜಿಜ್ಞಾಸದಿಂದ ಉದ್ಧಾರವಾಗುವುದಿಲ್ಲ. ಆದಕಾರಣ ಜಿಜ್ಞಾಸವು ವೃಥಾ ಶ್ರಮವಲ್ಲವೆ ? ಎಂದು ಹೇಳಬಹುದು. ಧರ್ಮವು ಲುಪ್ತವಾಗಿಲ್ಲ. ಧರ್ಮಿಷ್ಠರಿಗೂ ಅಭಾವವಿಲ್ಲ. ಈಗಿನ ಪರಿಸ್ಥಿತಿಯಲ್ಲಿ ಅನೇಕ ಕಾರಣಗಳಿಂದ ನಮ್ಮ ಧರ್ಮಜೀವನದ ಮಟ್ಟವು ಕೆಳಗಿಳಿದಿದೆ. ವೃಥಾ ಸಂದೇಹಗಳು ಪ್ರಾಪ್ತವಾಗಿ ಬುದ್ಧಿಯು ಶಾಖೋಪಶಾಖವಾಗಿ ಪ್ರವರ್ತಿಸುತ್ತಿದೆ—ನಿರ್ಣಯವಿಲ್ಲ ನಿಶ್ಚಯವಿಲ್ಲ. ಇಲ್ಲಿನವರೆಗೂ ಆಳುತ್ತಿದ್ದವರು ಅನ್ಯದೇಶೀಯರು, ಅನ್ಯಮತೀಯರು, ಅನ್ಯಸಂಸ್ಕೃತಿಯವರು, ಅನ್ಯಸಂಪ್ರದಾಯದವರು. ಅವರನ್ನು ನಮ್ಮವರೂ ಅನುಕರಣ ಮಾಡುತ್ತಾ ಬಂದರು. ಅವರಂದುದೇ ನಮ್ಮವರಿಗೆ ವೇದವಾಕ್ಯವಾಯಿತು. ಅವರು ಅಲ್ಲಗಳೆದುದರಲ್ಲಿ ನಮ್ಮವರಿಗೆ ಶ್ರದ್ಧೆಯಿಲ್ಲ. ಅವರಾದರೂ ಆಮೂಲಾಗ್ರವಾಗಿ ವಿಮರ್ಶಿಸಿ ತಿಳಿಸುತ್ತಿದ್ದರೇ ಎಂದರೆ ಅದವರಿಗೆ ಪ್ರಕೃತವೂ ಅಲ್ಲ, ಪ್ರಯೋಜನಕಾರಿಯೂ ಅಲ್ಲ. ತಮ್ಮ ಪ್ರಭುತ್ವವನ್ನು ಊರ್ಜಿತಮಾಡಿಟ್ಟುಕೊಳ್ಳಲು ಭೇದೋಪಾಯಗಳನ್ನು ಪ್ರಯೋಗಿಸುತ್ತಾ ಬಂದರು. ಅದರ ಪರಿಣಾಮವಾಗಿ ನಮ್ಮಲ್ಲಿದ್ದ ಸ್ವಾಭಿಮಾನವೂ ಸ್ವಾವಲಂಬನವೂ ಕಡಿಮೆಯಾಯಿತು, ಐಕ್ಯತೆಗೆ ಭಂಗವೊದಗಿತು, ಈರ್ಷ್ಯಾದ್ವೇಷಗಳು ಪ್ರಬಲಿಸಿದವು, ನಮ್ಮ ವೃತ್ತಿವರ್ತನಗಳು ಪರಿವರ್ತಿತವಾದವು, ಸಾಮೂಹಿಕ ಜೀವನವೂ ಕುಲಗೆಟ್ಟಿತು, ಕೇವಲ ಬಾಹ್ಯವೃತ್ತಿಗಳು ಮಾತ್ರವೇ ಪರಿವರ್ತಿತವಾಗಿದ್ದರೂ ಚಿಂತಿಸಬೇಕಾಗಿರಲಿಲ್ಲ, ವ್ಯರ್ಥವೂ ಅನರ್ಥಮೂಲವೂ ಆದ ಹಳೆಯ ಸಂಪ್ರದಾಯಗಳು ಹೋಗಿದ್ದರೂ ಅಳಬೇಕಾಗಿರಲಿಲ್ಲ. ಹಿತಕರವೂ ಪ್ರಗತಿಪರವೂ ಆದ ಹೊಸ ರೀತಿಗಳು ಸತತವಾಗಿ ಬರುತ್ತಿರಲಿ, ಅವಕ್ಕೆ ಸ್ವಾಗತವಿದ್ದೇ ಇದೆ. ಹಳೆಯದೊಳ್ಳೆಯದು ನಷ್ಟವಾಗಿ ಹೊಸದು ಕೆಟ್ಟದು ಬಂದು ನಮ್ಮ ಸಂಸ್ಕೃತಿಗೇ ಭಂಗವೊದಗಿದುದು ನಿಜವಾಗಿಯೂ ಶೋಚನೀಯವು. ಅವರ ಗ್ರಂಥಗಳನ್ನೇ ಓದಿ ಅವರ ಬೋಧನೆಯನ್ನೇ ಕೇಳಿ ಅವರ ಸಂಸ್ಕೃತಿಗೇ ಮನಸೋತು ಅವರ ಭೇದೋಪಾಯಕ್ಕೆ ಸಿಕ್ಕಿ ಇಲ್ಲಿ ಹತ್ತದೆ ಅಲ್ಲಿ ಸೇರದೆ ಉಭಯಭ್ರಷ್ಟತ್ವಕ್ಕೆ ಈಡಾದೆವು. ಸಂಕ್ಷೇಪವಾಗಿ ಇದು ನಮ್ಮ **ಸಾಂಸ್ಕೃತಿಕ ಜೀವನವು**. ನಮ್ಮ **ಆರ್ಥಿಕವನ್ನಂತೂ** ಹೇಳಲೇ ಸಾಧ್ಯವಿಲ್ಲ. ದೇಹಭರಣಕ್ಕಷ್ಟನ್ನವನ್ನೂ ಮಾನರಕ್ಷಣೆಗಷ್ಟು ಬಟ್ಟೆಯನ್ನೂ ಶೀತವಾತಾತಪನಿವಾರಣೆಗೊಂದು ನೆರಳನ್ನೂ ಸಂಪಾದಿಸುವುದರಲ್ಲಿ ಪುರುಷಾಯುಷ್ಯವೇ ವ್ಯತೀತವಾಗಿಹೋಗುತ್ತದೆ. ಆಪದರ್ಥವಾಗಿಯೂ ವಿಶೇಷಕಾರ್ಯಗಳಿಗಾಗಿಯೂ ಅಷ್ಟು ನಿಚಯವನ್ನು ಕೂಡಿಡುವ ಕನಸೂ ಸಹ ನಮಗೆ ಲಭ್ಯವಾಗಲಿಲ್ಲ—ಇದು ನಮ್ಮ ದೌರ್ಭಾಗ್ಯವು. **ಧಾರ್ಮಿಕಜೀವನವೂ** ಅಷ್ಟರಲ್ಲಿಯೇ ಇದೆ. ಸ್ವಧರ್ಮವೆಂಬಭಿಮಾನವು ಬೇಡ, ಶಾಸ್ತ್ರೀಯವೆಂದು ಶ್ರದ್ಧೆಯು ಬೇಡ, ಅಹಂಭಾವವಾದರೂ ಇದೆಯೇ ಅಂದರೆ ಅದೂ ಮೃಗ್ಯವೇ. ಕ್ರೈಸ್ತರಿಗೆ ಬೈಬಲ್ ವೇದ, ಚರ್ಚು ಗುಡಿ, ಪ್ರಾರ್ಥನೆಯು ಆಹ್ನಿಕ. ಮುಸಲ್ಮಾನ

ರಿಗೆ ಕುರಾನು, ಮಶೀತಿ, ನಮಾಜು. ಅವರವರದರಲ್ಲಿ ಅವರವರಿಗೆ ಶ್ರದ್ಧಾಭಕ್ತಿ.
ಅವರು ಅವರ ದೇವರನ್ನರ್ಚಿಸಬಹುದು, ಅವರ ಹಿರಿಯರನ್ನಾರಾಧಿಸಬಹುದು,
ಅವರ ಧರ್ಮಗ್ರಂಥಗಳನ್ನವರು ಪಠಿಸಬಹುದು, ಅವರ ಸಂಪ್ರದಾಯಗಳನ್ನು ಅನು
ಸರಿಸಬಹುದು ; ನಾವೇಕೆ ನಮ್ಮ ಶಾಸ್ತ್ರಗಳನ್ನೋದಬಾರದು, ಪಿತೃಗಳ ಶ್ರಾದ್ಧ
ವನ್ನು ಮಾಡಬಾರದು, ದೇವರನ್ನರ್ಚಿಸಬಾರದು, ದೇವಸ್ಥಾನಕ್ಕೆ ಹೋಗಬಾರದು,
ನಮ್ಮ ಸಂಪ್ರದಾಯಗಳೆಂದು ಶ್ರದ್ಧಾಭಕ್ತಿಯಿಂದಾಚರಿಸಬಾರದು, ನಾವೂ
ಯಾರಿಗೂ ಕಡಿಮೆಯಲ್ಲವೆಂದು ಹೆಮ್ಮೆಯೇಕೆ ಪಡಬಾರದು? ಹೆಮ್ಮೆಯು
ಸ್ವಾತಂತ್ರ್ಯದ ಹೆಗ್ಗುರುತು, ಸ್ವಾಭಿಮಾನವು ಜೀವನದ ಜೀವನಾಡಿಯು, ಸ್ವಾವ
ಲಂಬನವು ಚಿತ್ತಸಮುನ್ನತಿಗೆ ಏಕೈಕ ಮಾರ್ಗವು, ಸ್ವಧರ್ಮಾವಲಂಬನೆಯು
ಸಾಮೂಹಿಕ ಜೀವನಕ್ಕೆ ಅವಶ್ಯವಾದ ಕಟ್ಟು, ಐಕಮತ್ಯಕ್ಕೆ ಅಂಟು. ಅವರನ್ನು
ತ್ತಾರೆ, ಅವರಲ್ಲಗಳೆಯುತ್ತಾರೆ, ಅವರಪಲಪಿಸುತ್ತಾರೆ, ಎಂದು ನಾವೂ ನಮ್ಮನ್ನೂ
ನಮ್ಮದನ್ನೂ ಸುಮ್ಮಸುಮ್ಮನೆ ಅಪಲಪಿಸಿಕೊಂಡು ತಿರಸ್ಕರಿಸುತ್ತಾ ಹೋದರೆ ನಗು
ವವರ ಮುಂದೆ ಎಡವಿದಂತಾಗುತ್ತದೆ. ಅವರ ಮುಂದೆ ನಾವು ತಲೆಯೆತ್ತಿ ತಿರುಗುವ
ಹಾಗಿಲ್ಲ, ಸಭ್ಯಶ್ರೇಣಿಯಲ್ಲಿ ಮಾನಮರ್ಯಾದೆಗಳು ದೊರೆಯುವುದಿಲ್ಲ. ಇಂಥಾ
ಸಂಶಯಾತ್ಮಕವಾದ ಮನೋವೃತ್ತಿಯಿಂದ ಪುರುಷಾರ್ಥವಿಲ್ಲ, ಪರಮಾರ್ಥವೂ
ಇಲ್ಲ, ಅನರ್ಥಪರಂಪರೆಗಳಿಗೀಡಾಗುವುದು ತಪ್ಪುವುದಿಲ್ಲ. ನಮ್ಮ ಜೀವನವು
ಇಂಥಾ ಶೋಚನೀಯ ಪರಿಸ್ಥಿತಿಗಿಳಿಯುತ್ತಿದೆ. ಇದರ ಮೇಲೆ ಅಭಾವ ವೈರಾಗ್ಯದ
ಹಾವಳಿಯು ಬೇರೆ, ಉದರಭರಣಕ್ಕಾಗಿ ಬಹು ಪ್ರಕಾರದ ಬಹಿರ್ರೂಪವನ್ನು ತಾಳಿ
ಅಜ್ಞರನ್ನು ಮುಗ್ಧಗೊಳಿಸುವ ಬಿಡಾಲವ್ರತಿಗಳ ಮತ್ತು ಧರ್ಮಧ್ವಜಿಗಳ ಕಾಟಗಳು
ಬೇರೆ. ಅಲ್ಪಜ್ಞರು ಸರ್ವಜ್ಞರೆಂದು ಧರ್ಮಬೋಧೆಯ ಹೆಸರಿನಲ್ಲಿ ಬಾಯಿಗೆ
ಬಂದಂತೆ ಬೋಧಿಸಿ ಮೂಢರನ್ನು ಮರುಳುಮಾಡುವ ಅತಿಪ್ರಸಂಗವು ಬೇರೆ.
ಒಂದೇ ಉದ್ಗ್ರಂಥಕ್ಕೆ ವಿದ್ವಾಂಸರು ಬೇರೆ ಬೇರೆ ವಿಧವಾಗಿ ಭಾಷ್ಯಗಳನ್ನು ರಚಿಸಿ
ವರೆ ಯಾವುದನ್ನೂ ಅರಿಯದ ಅವರ ಅನುಯಾಯಿಗಳು ಇದು ನಮ್ಮ ಮತ ಅದು
ನಮ್ಮದಲ್ಲ, ಇದು ವಿಹಿತ ಅದು ವಿರುದ್ಧ, ಇದು ಸರಿ ಅದು ತಪ್ಪು, ಎಂದು ಆತ್ಮ
ಸ್ತುತಿಯಲ್ಲಿಯೂ ಪರನಿಂದೆಯಲ್ಲಿಯೂ ಮಗ್ನರಾಗಿ ಮತದ್ವೇಷವೇ ಸ್ವಧರ್ಮವೆನ್ನುವ
ದುಷ್ಪರಿಣಾಮವು ಬೇರೆ. ದೂಷಣೆಗಲ್ಲ, ವಿಮರ್ಶೆಗೆ ವಾಸ್ತವವನ್ನುಲ್ಲೇಖಿಸಬೇಕಾಗಿದೆ.
ನಮ್ಮಲ್ಲಿ ಧರ್ಮಕ್ಕೆ ಮೂಲಾವಲಂಬನಗಳಿಬ್ಬರು — ಗಂಗಾಭಾಗೀರಥಿಯರು[3]
ಮತ್ತು ವೇದಮೂರ್ತಿಗಳು. ಆಚಾರವಿಚಾರಗಳಿಗೆಲ್ಲ ಗಂಗಾಭಾಗೀರಥಿಯರು
ಆದರ್ಶರು, ಧರ್ಮಕರ್ಮಗಳಿಗೆಲ್ಲ ವೇದಮೂರ್ತಿಗಳು ದರ್ಶಕರು. ಗಂಗಾಭಾಗೀರಥಿ
ಗಳಿಗೆ ಆಚಾರಾದಿಗಳಲ್ಲಿ ಪೂರ್ಣಶ್ರದ್ಧೆಯೂ ಇದೆ, ಕಾಯಕ್ಲೇಶವನ್ನೂ ಪಡುತ್ತಾರೆ,

3 ಪೂರ್ವಸುವಾಸಿನಿಯರು, ವಿಧವೆಯರು.

ತಮ್ಮೊವರನ್ನೂ ಮಾಡಬೇಕೆಂದು ನಿರ್ಬಂಧಿಸುತ್ತಾರೆ. ಆದರವರು ಧರ್ಮಕರ್ಮಗಳ ಸ್ವರೂಪವನ್ನರಿಯದವರು. ವೇದಮೂರ್ತಿಗಳು ವೇದಾಧ್ಯಯನ ಸಂಪನ್ನರು, ಕರ್ಮಕಾಂಡವನ್ನು ಕಂಠಪಾಠ ಮಾಡಿರುತ್ತಾರೆ, ಕಲಿತುದನ್ನು ಕಲಿತಂತೆಯೇ ಮಾಡಿಸಿಯೂ ಮಾಡಿಸುತ್ತಾರೆ. ಆದರೆ ಸಾಮಾನ್ಯವಾಗಿ ಅವರಿಗೆ ಶಾಸ್ತ್ರದಲ್ಲಿ ಪರಿಚಯವಿರುವುದಿಲ್ಲ, ವಾಕ್ಯದ ಅರ್ಥವನ್ನರಿಯುವುದಕ್ಕೆ ತಕ್ಕಷ್ಟು ವ್ಯುತ್ಪನ್ನತೆಯೂ ಸಹ ಅನೇಕರಿಗಿಲ್ಲ ಶಾಸ್ತ್ರಿಗಳೆಂಬುದು ಅವರಿಗೆ ಕುಲಕ್ರಮಾಗತವಾದ ಅಂಕಿತವೇ ವಿನಾ ಪ್ರಶಸ್ತಿಯಲ್ಲ.(ಪ್ರಶಸ್ತಿಯು ಅನ್ವರ್ಥವಾಗುವಂಥವರೂ ಇದ್ದಾರೆ ಇಲ್ಲವೆಂತಲ್ಲ ) ಈಗಿನ ಗೃಹಸ್ಥರೋ ಅವರು ಶಾಸ್ತ್ರವನ್ನು ಅಭ್ಯಾಸಮಾಡುವುದಿಲ್ಲ. ಈ ಕಾಲಕ್ಕೆ ಉಚಿತವೂ ಪ್ರಯೋಜನಕಾರಿಯೂ ಆದ ವಿದ್ಯವನ್ನು ಚೆನ್ನಾಗಿ ಕಲಿತಿರುತ್ತಾರೆ. ಯಾವ ವಿದ್ಯವಾದರೇನು ? ವ್ಯಾಸಂಗದಿಂದ ಬುದ್ಧಿಗೆ ಕುಶಲತೆಯು ಪ್ರಾಪ್ತವಾಗಿರುತ್ತದೆ. ವೈಜ್ಞಾನಿಕದ ಪರಿಚಯದಿಂದ ಕಾರ್ಯಕಾರಣ ಸಂಬಂಧವು ಗೋಚರವಾದಲ್ಲದೆ ಯಾವುದನ್ನೂ ಒಪ್ಪುವುದಿಲ್ಲ. ಇದು ಹೀಗೆ ಎಂದರೆ, ಹೇಗೆ ಎಂದೇ ಅನ್ನುತ್ತಾರೆ. ಪೂರ್ವಪಕ್ಷಕ್ಕೆ ತಕ್ಕ ಸಮಾಧಾನವನ್ನು ಹೇಳದಿದ್ದರೆ ಪೂರ್ವಪಕ್ಷವೇ ಸಿದ್ಧಾಂತದಂತೆ ಭಾಸವಾಗಿ ಶ್ರೇಯಸ್ಸಿಗೆ ಪ್ರತಿಯಾಗಿ ಅನರ್ಥವಾಗುತ್ತದೆ. ಅಂಥಾ ಸಮಾಧಾನವನ್ನು ಹೇಳಿ ಸಿದ್ಧಾಂತದಲ್ಲಿ ಶ್ರದ್ಧೆಯನ್ನು ಉಂಟುಮಾಡುವ ವೇದಮೂರ್ತಿಗಳು ವಿರಳರು. ಸಮಾಧಾನವನ್ನು ಹೇಳಬೇಕಾದರೆ ಶಾಸ್ತ್ರಜ್ಞರಾಗಬೇಕು, ಕರ್ಮಧರ್ಮ ಸ್ವರೂಪಗಳನ್ನರಿತಿರಬೇಕು, ಅರಿತು ಸ್ವತಃ ಅನುಷ್ಠಾನಮಾಡುತ್ತಿರಬೇಕು, ತರ್ಕದಲ್ಲಿ ಪ್ರಗಲ್ಭರಾಗಿರಬೇಕು, ಮೀಮಾಂಸದಲ್ಲಿ ಕುಶಲರಾಗಿರಬೇಕು, ಎಲ್ಲುದಕ್ಕಿಂತಲೂ ಹೆಚ್ಚಾಗಿ ಪೂರ್ವಪಕ್ಷವು ಜಿಜ್ಞಾಸದ ಸೋಪಾನವೆಂದೂ ಜಿಜ್ಞಾಸವು ಸಿದ್ಧಾಂತಜ್ಞಾನಕ್ಕೆ ರಾಜಮಾರ್ಗವೆಂದೂ ಅರಿತು ಸಮಾಧಾನಚಿತ್ತರಾಗಿರಬೇಕು. ಒಟ್ಟಿನಲ್ಲಿ ವೇದಮೂರ್ತಿಗಳು ಧರ್ಮಾತ್ಮರೂ ಶ್ರೋತ್ರಿಯರೂ ಶೀಲವಂತರೂ ಸಮಾಧಾನಚಿತ್ತರೂ ಸೌಹಾರ್ದಸಂಪನ್ನರೂ ಆಗಿರಬೇಕು. ಅಂಥಾವರು ಅಲ್ಲೊಬ್ಬರಿಲ್ಲೊಬ್ಬರು ಇದ್ದರೆ ಸಾಲದು, ಪ್ರಚುರವಾಗಿರಬೇಕು. ಅದಿಲ್ಲದಿರುವುದು ನಮ್ಮ ಜನಾಂಗದ ದೌರ್ಭಾಗ್ಯವು. ಇದಕ್ಕೆಲ್ಲ ಚಿರಂತನವಾದ ಪಾರತಂತ್ರ್ಯ ಪ್ರಾರಬ್ಧವೇ ಮೂಲವು. ಜೀವಿಕೆಯನ್ನು ಸಂಪಾದಿಸುವುದರಲ್ಲಿ ಶತಾಯುವು ಗತಾಯುವಾಗುತ್ತದೆ. ಪರಸಂಸ್ಕೃತಿಯ ಆಲೋಡನೆಯಲ್ಲಿಯೇ ಮುಗ್ನರಾಗಿ ಬಿದ್ದಿರುವುದರಿಂದ ಬುದ್ಧಿಗೆ ಸ್ವಸಂಸ್ಕೃತಿಯ ಪರಿಚಯಕ್ಕೂ ಅವಕಾಶವಿರುವುದಿಲ್ಲ. ಅವನತಿಯ ಅಧಃಪಪಾತಕ್ಕೆ ಬಿದ್ದುದರಿಂದ ಧರ್ಮದ ಹೆಸರು ಹೇಳಿದರೆ ಒಂದು ಪ್ರಕಾರದ ಜುಗುಪ್ಸೆಯೂ ತಿರಸ್ಕಾರವೂ ಪ್ರಾಪ್ತವಾಗುವಂಥಾ ಪರಿಸ್ಥಿತಿಯಾಗಿದೆ. ನಮ್ಮ ಸಂಸ್ಕೃತಿಯೂ ನಮ್ಮ ಧರ್ಮಶಾಸ್ತ್ರವೂ ಎರಡೂ ಅಪ್ರಯುಕ್ತವೂ ಅವ್ಯಾವಹಾರಿಕವೂ ಆದ ಯಾವುದೋ ಓಬೀರಾಯನ ಕಾಲದ ಪದ್ಧತಿಯೆಂಬ ಭಾವನೆಯು ಜನರ ಮನಸ್ಸಿನಲ್ಲಿ ಬೇರೂರುತ್ತಿದೆ. ಇಷ್ಟಾದರೂ ಬೀಜವು ನಷ್ಟವಾಗಿಲ್ಲ. ಬೆನ್ನುಹತ್ತಿದ್ದ

ಪಾರತಂತ್ರ್ಯ ಭೇತಾಳವು ಓಟ ಹಾಕಿತು ತಜ್ಜನ್ಯವಾದ ಚಿತ್ತವಿಭ್ರಮವು ಅವಶಿಷ್ಟವಾಗಿದೆ—ಅದೂ ಕ್ರಮೇಣ ತೊಲಗಬೇಕು. ತೊಲಗುವ ಚಿಹ್ನೆಗಳು ಕಾಣುತ್ತಿವೆ. ಸಂಸ್ಕೃತಿಯ ಉದ್ಧಾರದ ದುಂದುಭಿಯ ಧ್ವನಿಯು ಕೇಳಿಸುತ್ತಿದೆ ಎಲ್ಲರ ಮನಸ್ಸೂ ಸಂಸ್ಕೃತಿಯ ಕಡೆಗೆ ಓಲುತ್ತಿದೆ. ಪಂಡಿತಪಾಮರರೂ ಪ್ರಧಾನಾಧೀನರೂ ಎಲ್ಲರೂ ಸಂಸ್ಕೃತಿಯ ಉದ್ಧಾರವನ್ನಾರಂಭಿಸಿದ್ದಾರೆ ಈ ಸಂದರ್ಭದಲ್ಲಿ ಅಳಿಲಿನ ಮಳಲು ಸೇವೆಯೆಂದೀ ವಿಮರ್ಶೆಯನ್ನು ಆರಂಭಿಸಿದುದು.

ಧರ್ಮಸಾಹಿತ್ಯದ ವಚನಗಳನ್ನು ಇಲ್ಲಿ ಸಂಗ್ರಹಿಸಿದೆ, ಎಲ್ಲವನ್ನೂ ಅಲ್ಲ. ಹಿಂದಿನ ಕಾಲಕ್ಕೆ ಮಾತ್ರ ಅನ್ವಯಿಸುವುದನ್ನು ಬಿಟ್ಟಿದೆ. ಈ ಕಾಲಕ್ಕೆ ಅನ್ವಯಿಸುವುವನ್ನೂ, ಈ ಕಾಲಕ್ಕೆ ತಕ್ಕ ತತ್ತ್ವವನ್ನು ಬೋಧಿಸುವುವನ್ನೂ, ಮತ್ತು ಉದ್ಧೃತವಾದವುಗಳನ್ನು ಯಥಾವತ್ತಾಗಿ ಅರಿಯಲು ಬೇಕಾದ ಹಿಂದಿನ ಸಂಪ್ರದಾಯಗಳನ್ನೂ ಸಂಗ್ರಹಿಸಿದೆ. ಅವೆಲ್ಲವನ್ನೂ ಈಗಲೂ ಅನುಷ್ಠಾನಮಾಡಬೇಕೆಂಬುದು ಸಂಗ್ರಹಕಾರನ ಉದ್ದೇಶವಲ್ಲ. ನಮ್ಮ ಹಿರಿಯ ಮಹರ್ಷಿಗಳು ಎಂಥಾ ಉದಾತ್ತ ಭಾವನೆಯವರು, ಅವರು ರಚಿಸಿರುವ ವಿಧಿನಿಯಮಗಳಲ್ಲಿ ಎಂಥಾ ತತ್ತ್ವಗಳು ಅಡಕವಾಗಿವೆ, ನಮ್ಮ ಧಾರ್ಮಿಕಜೀವನದ ವೈಶಿಷ್ಟ್ಯವೇನು, ಎಂಬುದನ್ನು ಎತ್ತಿ ತೋರಿಸುವುದೇ ಪ್ರಧಾನೋದ್ದೇಶವು.



## ಮೂಲಗ್ರಂಥಗಳನ್ನೂ ಅವುಗಳ ವಚನಗಳನ್ನೂ ಸೂಚಿಸುವ ಸಂಕೇತಗಳ ವಿವರಣೆ

ಅತ್ರಿಃ = ಅತ್ರಿಸ್ಮೃತಿ
ಅ ಸಂ-ದಿನಚರ್ಯೆ
ಅ. ಸಂ. = ಅಷ್ಟಾಂಗಸಂಗ್ರಹ
ದಿನಚರ್ಯೆ ಇತ್ಯಾದಿ— ಅಧ್ಯಾಯ ನಿರೂಪಣೆ
ಆಶ್ವ-ಗೃ. ಸೂ. = ಆಶ್ವಲಾಯನಗೃಹಸೂತ್ರ
ಆಪಸ್ತಂಬಃ } = ಆಪಸ್ತಂಬ
ಆಪ-ಧ. ಸೂ. } ಧರ್ಮಸೂತ್ರ
ಋ. ವೇ.-ಅ. ೧-ಅ. ೨-ವ. ೭—
ಋ. ವೇ = ಋಗ್ವೇದ
ಅ. ೧ ಇತ್ಯಾದಿ- ಅಷ್ಟಕಾಂಕ
ಅ ೩ ಇತ್ಯಾದಿ ಅಧ್ಯಾಯಾಂಕ
ವ. ೭ ಇತ್ಯಾದಿ. ವರ್ಗಾಂಕ
ಐ ಉ. = ಐತರೇಯೋಪನಿಷತ್ತು
ಐ ಬ್ರಾ. = ಐತರೇಯಬ್ರಾಹ್ಮಣ
ಕುಲ್ಲೂಕಃ = ಮನುಸ್ಮೃತಿಯ ವ್ಯಾಖ್ಯಾತ
ಕೂ. ಪು = ಕೂರ್ಮಪುರಾಣ
ಚಂದ್ರಿಕೆ = ಸ್ಮೃತಿಚಂದ್ರಿಕೆ
ಛಾಂ. ಉ. = ಛಾಂದೋಗ್ಯೋಪನಿಷತ್ತು
ತೈ. ಆ-ಪ್ರ. ೨ ಅ. ೧೦—
ತೈ ಆ. = ತೈತ್ತಿರೀಯಾರಣ್ಯಕ
ಪ್ರ. ೨ ಇತ್ಯಾದಿ = ಪ್ರಪಾಠಾಂಕ
ಅ. ೧೦ ಇತ್ಯಾದಿ = ಅನುವಾಕಾಂಕ
ತೈ. ಉ. = ತೈತ್ತಿರೀಯೋಪನಿಷತ್ತು

ದಕ್ಷಃ = ದಕ್ಷಸ್ಮೃತಿ
ದೇವಲಃ = ದೇವಲಸ್ಮೃತಿ
ನಂದನಃ = ಮನುಸ್ಮೃತಿಯ ವ್ಯಾಖ್ಯಾತ
ನಾರದಃ = ನಾರದಸ್ಮೃತಿ
ಪರಾಶರಃ = ಪರಾಶರಸ್ಮೃತಿ
ಪರಾ.-i-೧—
  ಪರಾ = ಪರಾಶರಸ್ಮೃತಿ
  i ಇತ್ಯಾದಿ = ಅಧ್ಯಾಯಾಂಕ
  ೧ ಇತ್ಯಾದಿ = ಶ್ಲೋಕಾಂಕ
ಪೂರ್ವಮೀಮಾಂಸ— ಅ.೧-ಪಾ.೧-ಸೂ. ೨
  ಅ. ೧ ಇತ್ಯಾದಿ = ಅಧ್ಯಾಯಾಂಕ
  ಪಾ. ೧ ಇತ್ಯಾದಿ = ಪಾದಾಂಕ
  ಸೂ. ೨ ಇತ್ಯಾದಿ = ಸೂತ್ರಾಂಕ
ಪ್ರ. ಚಂ. = ಪ್ರಬೋಧಚಂದ್ರೋದಯ
ಬೃ. ಉ. } = ಬೃಹದಾರಣ್ಯ
ಬೃ.-ಅ. ಉ. } ಕೋಪನಿಷತ್ತು
ಬೃಹಸ್ಪತಿಃ = ಬೃಹಸ್ಪತಿಸ್ಮೃತಿ
ಬೋಧಾಯನಃ } = ಬೋಧಾಯನ
ಬೋ. ಧ. ಸೂ. } ಧರ್ಮಸೂತ್ರ
ಭ. ಗೀ. = ಭಗವದ್ಗೀತೆ
ಭಾಷ್ಯ = ಸಾಯಣರಭಾಷ್ಯ
ಮತ್ಸ್ಯ. ಪು. = ಮತ್ಸ್ಯಪುರಾಣ
ಮ. ಟೀ. = ಮಧುಸೂದನೀಟೀಕಾ, ಗೀತೆಯಮೇಲೆ
ಮ-ii.೧—
  ಮ. = ಮನುಸ್ಮೃತಿ
  ii ಇತ್ಯಾದಿ = ಅಧ್ಯಾಯಾಂಕ
  ೧ ಇತ್ಯಾದಿ = ಶ್ಲೋಕಾಂಕ
ಮ. ಭಾ. = ಮಹಾಭಾರತ
ಮ. ಭಾ.—ಆದಿ- ಅ. ೧೦೨
  ಮ. ಭಾ. = ಮಹಾಭಾರತ
  ಆದಿ ಇತ್ಯಾದಿ = ಪರ್ವ
  ಅ. ೧೦೨ ಇತ್ಯಾದಿ = ಅಧ್ಯಾಯಾಂಕ
ಮಾಧವೀಯ = ಪರಾಶರಮಾಧವೀಯ
ಮಿತಾಕ್ಷರಾ = ಯಾಜ್ಞವಲ್ಕ್ಯರ ಸ್ಮೃತಿಯ ಮೇಲೆ. ವಿಜ್ಞಾನೇಶ್ವರರ ವ್ಯಾಖ್ಯಾನ
ಮೇಧಾತಿಥಿಃ = ಮನುಸ್ಮೃತಿಯ ವ್ಯಾಖ್ಯಾತ
ಯಮಃ = ಯಮಸ್ಮೃತಿ
ಯಾ-i-೭—
  ಯಾ. = ಯಾಜ್ಞವಲ್ಕ್ಯಸ್ಮೃತಿ
  i ಇತ್ಯಾದಿ = ಅಧ್ಯಾಯಾಂಕ
  ೭ ಇತ್ಯಾದಿ = ಶ್ಲೋಕಾಂಕ
ಯೋ. ಯಾ = ಯೋಗಯಾಜ್ಞವಲ್ಕ್ಯರು
ರ. ವಂ. = ರಘುವಂಶ-ಕಾಲಿದಾಸ
ರಾಘವಾನಂದ = ಮನುಸ್ಮೃತಿಯ ವ್ಯಾಖ್ಯಾತ
ರಾ. = ವಾಲ್ಮೀಕಿರಾಮಾಯಣ
ವಸಿಷ್ಠಃ = ವಸಿಷ್ಠಸ್ಮೃತಿ
ವಾ. ರಾ. = ವಾಲ್ಮೀಕಿರಾಮಾಯಣ
ವಿಜ್ಞಾನೇಶ್ವರ = ಯಾಜ್ಞವಲ್ಕ್ಯಸ್ಮೃತಿಯ ವ್ಯಾಖ್ಯಾತ
ವಿ-೩-೮೯—
  ವಿ. = ವಿಷ್ಣುಸ್ಮೃತಿ
  ೩ ಇತ್ಯಾದಿ = ಪ್ರಕರಣಾಂಕ
  ೮೯ ಇತ್ಯಾದಿ = ವಾಕ್ಯಾಂಕ
ವಿ. ಪು. = ವಿಷ್ಣುಪುರಾಣ
ವೈ ದ. ಅ. ೧-ಆ. ೧-ಸೂ. ೨
  ವೈ. ದ. = ವೈಶೇಷಿಕದರ್ಶನ
  ಅ. ೧ ಇತ್ಯಾದಿ = ಅಧ್ಯಾಯಾಂಕ
  ಆ. ೧ ಇತ್ಯಾದಿ = ಆಹ್ನಿಕಾಂಕ
  ಸೂ. ೨ ಇತ್ಯಾದಿ = ಸೂತ್ರಾಂಕ
ವ್ಯಾಸಃ = ವ್ಯಾಸಸ್ಮೃತಿ
ಶಂಖಃ = ಶಂಖಸ್ಮೃತಿ
ಶ್ರೀ. ಟೀ. = ಶ್ರೀಧರಸ್ವಾಮಿಗಳ ಟೀಕೆ, ಗೀತೆಯಮೇಲೆ
ಸರ್ವಜ್ಞನಾರಾಯಣ = ಮನುಸ್ಮೃತಿಯ ವ್ಯಾಖ್ಯಾತ
ಸಂವರ್ತಃ = ಸಂವರ್ತಸ್ಮೃತಿ
ಹಾರೀತಃ = ಹಾರೀತಸ್ಮೃತಿ

||ಶ್ರೀಃ||

# ಆರ್ಯಧರ್ಮ

## ೧ನೆಯ ಪ್ರಕರಣ—ಧರ್ಮಲಕ್ಷಣ

### ೧. ಧರ್ಮಜಿಜ್ಞಾಸ[1]

ಧರ್ಮ ಧರ್ಮ ಎಂದೆಲ್ಲರೂ ಅಲ್ಪಸ್ವಲ್ಪವಾದರೂ ಆನ್ಧೆವಡುತ್ತೇವೆ. ಧರ್ಮದ ಫಲವು ಸರ್ವರಿಗೂ ಇಷ್ಟವೇ—ಆದರೆ ಧರ್ಮಾಚರಣೆಯಲ್ಲಿ ಮಾತ್ರ ಆಸಕ್ತಿಯು ಕಡಿಮೆ. ಈಚೀಚಿಗಂತೂ ಧರ್ಮಾಚರಣೆಯ ಮಾತೆತ್ತಿದರೆ ನಾಕು ನಾಮಾಸ್ಯವಾಗಿ ಜನರಿಗೊಂದು ಪ್ರಕಾರದ ತಾಟಸ್ಥ್ಯಭಾವವು ಮೂಡುತ್ತದೆ ನವೀನ ಸಂಸ್ಕೃತಿಯಲ್ಲಿ ಮುಂದುವರಿದ ಕೆಲವು ಮಹಾಶಯರಿಗಂತೂ ಧರ್ಮಾಚರಣೆಯ ವಿಷಯದಲ್ಲಿ ಒಂದು ಪ್ರಕಾರದ ಅನಾದರವೂ ಜುಗುಪ್ಸೆಯೂ ಉಂಟಾಗುತ್ತಿದೆ. ಏನೇ ಆದರೂ ಅಸ್ಥಿಗತವಾದ ಆಸ್ತಿಕತ್ವಕ್ಕೆ ಅತ್ಯಂತ ಲೋಪವು ಸಂಭವಿಸಿಲ್ಲ ಧರ್ಮಕ್ಕೆ ವಿರುದ್ಧವಾದ ಪ್ರಸಂಗವೊದಗಿದರೆ ಈಗಲೂ ಬೂದಿ ಮುಚ್ಚಿದ ಕೆಂಡದಂತೆ ಅಡಗಿರುವ ಧರ್ಮವೀರತ್ವವು ಉಜ್ಜೃಂಭಿಸುತ್ತದೆ ಇಷ್ಟಾದರೂ ಧರ್ಮವೆಂದರೇನೆಂಬುದನ್ನು ಯಥಾವತ್ತಾಗಿ ಅರಿತವರು ಅತಿವಿರಳರೆಂದರೆ ಅತಿಶಯೋಕ್ತಿಯಲ್ಲ. ಧರ್ಮಜಿಜ್ಞಾಸದ ವಿಷಯದಲ್ಲಿ ಮಾತ್ರ ಕುತೂಹಲವೂ ಉತ್ಸಾಹವೂ ಇಲ್ಲ. ಧರ್ಮವೆಂದರೇನು ಅದರ ಲಕ್ಷಣವೇನು ವ್ಯಾಪ್ತಿಯೇನು ಎಂಬುದು ತಿಳಿಯದು. ಹೀಗಿರುವುದಕ್ಕೆ ಕಾರಣಗಳು—ಅಜ್ಞಾನ, ಮಿಥ್ಯಾಜ್ಞಾನ, ಅನ್ಯಥಾಜ್ಞಾನ, ಎಂದು ಮೂರು ಪ್ರಕಾರವಾದುವು. ಧರ್ಮವು ಸಹಜವಾಗಿ ಸೂಕ್ಷ್ಮವಾದುದು. ಧರ್ಮಶಾಸ್ತ್ರದ ವ್ಯಾಸಂಗಕ್ಕೆ ಅವಕಾಶವಿಲ್ಲ. ಧರ್ಮಮೀಮಾಂಸದ ಪರಿಚಯವೇ ಅತಿವಿರಳ. "ಧರ್ಮಶಾಸ್ತ್ರಪ್ರಣೇತರು ಪ್ರಾಚೀನರು, ಸರ್ವಸಂಗಪರಿತ್ಯಾಗವನ್ನು ಮಾಡಿದವರು, ವೈದಿಕರು, ಲೌಕಿಕವನ್ನರಿಯದವರು, ಆ ಕಾಲಕ್ಕೂ ಈ ಕಾಲಕ್ಕೂ ಅರ್ಥಾರ್ಥ ಸಂಬಂಧವಿಲ್ಲ. ಅವರು ಮಾಡಿರುವ ನಿಯಮಗಳು ಈ ಕಾಲಕ್ಕೆ ಅನ್ವಯಿಸುವುದಿಲ್ಲ" ಎಂಬ ಮಿಥ್ಯಾಜ್ಞಾನವು ಹೃದ್ಗತವಾಗಿದೆ. ಇದರ ಮೇಲೆ

---

1 ತಿಳಿದುಕೊಳ್ಳಬೇಕೆಂಬ ಇಚ್ಛೆ. (ಜ್ಞಾತುಮಿಚ್ಛಾ-ಜಿಜ್ಞಾಸಾ)

"ಧರ್ಮದ ಫಲವೂ ಪ್ರಯೋಜನವೂ ಹೆಚ್ಚಾಗಿ ಪರೋಕ್ಷವಾದುವು. ಲೌಕಿಕ ವ್ಯವಹಾರಗಳಂತೆ ಪ್ರತ್ಯಕ್ಷ ಫಲದಾಯಕಗಳಲ್ಲ. ಪ್ರತ್ಯಕ್ಷವಾಗಿ ಲಭಿಸುವ ಫಲವನ್ನು ಪರಿತ್ಯಜಿಸಿ ಅಪ್ರತ್ಯಕ್ಷಕ್ಕೆ ಕೈ ಒಡ್ಡುವುದು ವಿವೇಕವೂ ಅಲ್ಲ, ವಿಜ್ಞತೆಯೂ ಅಲ್ಲ"—ಎಂಬ ತರ್ಕವೂ ರೂಢಮೂಲವಾಗಿದೆ. ಗೃಹಸ್ಥರನ್ನು ಅನುಸರಿಸಿಕೊಂಡು ತಾನಾಗಿ ಲಭ್ಯವಾದುದಕ್ಕೇ ತೃಪ್ತರಾಗಿ ಆತ್ಮಸಂಯಮದಿಂದ ಜೀವಿಸುವ ವೈದಿಕರ ವೃತ್ತಿಗೂ ಅವರ ಮೇಲೆ ದರ್ಪವನ್ನು ಪ್ರದರ್ಶಿಸುತ್ತಾ ಅವರ ಸ್ತುತಿಗೆ ಉಬ್ಬಿ ನಮ್ಮ ಸಮವಿಲ್ಲ ವೆಂದುಕೊಂಡು ವ್ಯಾವಹಾರಿಕದಲ್ಲಿ ಆಸಕ್ತರಾಗಿ ಲಕ್ಷ್ಮೀಕಟಾಕ್ಷವನ್ನು ಸಾಧಿಸುವ ಲೌಕಿಕರ ಜೀವನಕ್ಕೂ ಬೇಕಾದಷ್ಟು ಅಂತರವಿದೆ. ಆಕರ್ಷಣೀಯವು ಆಕರ್ಷಿಸು ವುದರಲ್ಲಿ ಆಶ್ಚರ್ಯವಿಲ್ಲ. ಜನರು ಸಹಜವಾಗಿಯೇ ಲೌಕಿಕ ವ್ಯವಹಾರಗಳ ಕಡೆಗೆ ಓಲುತ್ತಾರೆ, ವೈದಿಕಕ್ಕೆ ಪರಾಙ್ಮುಖರಾಗುತ್ತಾರೆ. ಅದೂ ಅಲ್ಲದೆ ವಾಸ್ತವವನ್ನು ವಿಚಾರ ಮಾಡಿದರೆ ಯಾವಾಗಲೋ, ಏತಕ್ಕೋ, ಯಾವ ಸಂದರ್ಭಗಳಿಗನುಗುಣ ವಾಗಿಯೋ, ಯಾವ ಸಂಕಟದಿಂದ ವಿಮುಕ್ತರಾಗುವುದಕ್ಕೋ, ಯಾವ ಪ್ರಕೃತ ಸಾಧನೆಗೋ, ಯಾವ ಅನಿಷ್ಟ ನಿವಾರಣೆಗೋ, ಬುದ್ಧಿಪೂರ್ವಕವಾಗಿಯೋ, ಗತಾನು ಗತಿಕವಾಗಿಯೋ, ಮಾಡಿ ನಡೆದ ರೀತಿನೀತಿಗಳು ಪ್ರಕೃತವೂ ಪ್ರಯೋಜನವೂ ಎಂದೋ ಮಾಯವಾಗಿಹೋದರೂ ಕೂಡ ಇಂದೂ ಧರ್ಮಚ್ಛದ್ಮದಿಂದ ಆಚರಣೆ ಯಲ್ಲಿವೆ. ಇಂಥಾ ನಿರರ್ಥಕವೂ ಅನರ್ಥಪ್ರದವೂ ಸುಖಹೀನವೂ ದುಃಖಬಹುಳವೂ ಆದ ಅನೇಕ ನಡವಳಿಕೆಗಳು ಪದ್ಧತಿಗಳೆಂದೂ ಸಂಪ್ರದಾಯಗಳೆಂದೂ ಪ್ರಚಾರ ದಲ್ಲಿವೆ. ಇವನ್ನು ಬಿಡುವುದಕ್ಕಿಲ್ಲದೆ ಕಟ್ಟಿಕೊಳ್ಳಲೊಲ್ಲದೆ ಉಭಯಸಂಕಟವು ಪ್ರಾಪ್ತ ವಾಗಿದೆ. ದೂಷಣೆಗಲ್ಲ—ಉದಾಹರಣೆಗೆ ಹೇಳುವುದು :—ಅದ್ವೈತವು ವಿಕಾರವಾಗಿ ಬೂದಿಯನ್ನು ಬಳಿದುಕೊಳ್ಳುವುದರಲ್ಲಿಯೂ ದ್ವೈತವು ಗೋಪೀಚಂದನದ ಅಮಿತ ವ್ಯಯದಲ್ಲಿಯೂ ವಿಶಿಷ್ಟಾದ್ವೈತವು ನಾಮದ ವೈವಿಧ್ಯದಲ್ಲಿಯೂ ಶಿವಭಕ್ತಿಯು ವಿಷ್ಣುನಿಂದೆಯಲ್ಲಿಯೂ ವೈಷ್ಣವತ್ವವು ಶಿವದ್ವೇಷದಲ್ಲಿಯೂ ಸ್ವಮತಾಭಿಮಾನವು ಮತಾಂತರದ ದೂಷಣೆಯಲ್ಲಿಯೂ ಮತಭೇದವು ಅನ್ಯಮತೀಯರ ಪ್ರಧ್ವಂಸ ದಲ್ಲಿಯೂ ಪರ್ಯವಸಾನವಾಗುವುದಾದರೆ ಧರ್ಮಕ್ಕೆ ಗ್ಲಾನಿಯು ಸಂಭವಿಸದೆ ಏನಾದೀತು? ಪ್ರಚಾರದಲ್ಲಿರುವ ಆಚಾರವೊಂದನ್ನೇ ವಿಚಾರಮಾಡೋಣ. "ಸ್ನಾನ ದಿಂದ ದೇಹವು ಶುದ್ಧವಾಗುವುದು"[2] ಎಂದು ಶಾಸ್ತ್ರವೂ ಇದೆ, ಅನುಭವವೂ ಅದೇ. ಎರಡನ್ನೂ ಮರೆತು ಕಾಕಸ್ನಾನದಂತೆ ಮೈಮೇಲಷ್ಟು ನೀರನ್ನೆರೆಚಿಕೊಂಡು ಗಜ ಸ್ನಾನದಂತೆ ಸ್ನಾನಾನಂತರ ಮಲಿನವಸ್ತ್ರವನ್ನೇ ಧರಿಸಿ, "ಒದ್ದೆಯನ್ನುಡಬಾರದು, ಮಲಿನ ವಸ್ತ್ರವನ್ನು ಧರಿಸಬಾರದು, ಒದ್ದೆಯನ್ನುಡುವುದೂ ಮಲಿನ ವಸ್ತ್ರವನ್ನು ಧರಿಸುವುದೂ ಬೆತ್ತಲೆ ಇರುವುದೂ ಎಲ್ಲವೂ ಒಂದೇ"[3] ಎಂಬ ಧರ್ಮಶಾಸ್ತ್ರವಚನ

---

2 ಅದ್ಭಿರ್ಗಾತ್ರಾಣಿಶುದ್ಧ್ಯಂತಿ ಮನಸ್ಸತ್ಯೇನ ಶುದ್ಧ್ಯತಿ ॥ಮ–v–೧೦೯॥
3 ನಗ್ನೋಮಲಿನವಸ್ತ್ರಸ್ಸ್ಯಾನ್ನಗ್ನಶ್ಚಾರ್ದ್ರಪಟಸ್ತಥಾ ॥ ಭೃಗುಃ ॥

ವನ್ನೂ ಪ್ರತ್ಯಕ್ಷಾನುಭವವನ್ನೂ ಮೂಲೆಗೆ ಒತ್ತರಿಸಿ ಅನಾರ್ದ್ರಕ್ಕಿಂತಲೂ ಆರ್ದ್ರ ವಸ್ತ್ರವೇ ಶ್ರೇಷ್ಠವೆಂದು ಒದ್ದೆಯನ್ನುಟ್ಟು ಚಳಿಯಿಂದ ಪೀಡಿತರಾಗಿ ನಗ್ನತ್ವವನ್ನು ಪ್ರಚ್ಛಾದಿಸಿಕೊಳ್ಳದೆ ನಾವು ಮಡಿ, ನಾವು ಶ್ರೇಷ್ಠರು, ನಾವು ಪರಿಶುದ್ಧರು, ನಮ್ಮ ರೀತಿಯೇ ಆದರ್ಶವು, ಎಂದರೆ—ಸಾಬೂನನ್ನೇ ಚೆನ್ನಾಗಿ ಉಜ್ಜಿ ಮೈ ಕೊಳೆಯನ್ನು ಹೋಗಲಾಡಿಸಿಕೊಂಡು ಚೊಕ್ಕಟವಾಗಿ ಸ್ನಾನವನ್ನು ಮಾಡಿ ಅಗಸರ ಮಡಿಯೋ ಎಂಥಾದ್ದೋ ಅಂತೂ ಶುಭ್ರವಾದ ವಸ್ತ್ರವನ್ನು ಧರಿಸುವ ನವೀನ ಸಭ್ಯರು ಒಪ್ಪ ಬೇಕೆಂದರೆ ನಿರ್ಬಂಧಕ್ಕೋ ತಾಟಸ್ಥ್ಯಕ್ಕೋ ಅಥವಾ ಸಂಪ್ರದಾಯದ ಸಂಕೇತಕ್ಕೋ ಸುಮ್ಮನೆ ಇರುತ್ತಾರೆಯೇ ಹೊರತು ಮನಃಪೂರ್ವಕವಾಗಿ ಅನುಮೋದಿಸುವುದಿಲ್ಲ. ನವೀನ ಸಂಸ್ಕೃತಿಯವರಿಗೆ ಅವರೋದಿ ಅರಿತಿರುವ ಪಾರದೇಶಿಕ ಪಂಥದ ರೀತಿಯಲ್ಲಿ ಧರ್ಮವೆಂದರೆ ಮತವು,[4] ಶ್ರದ್ಧೆಯು ಅಥವಾ ಆಸ್ತಿಕತ್ವವು,[5] ಭಕ್ತಿಯು[6] ಎಂದೇ ಭಾವನೆಯು, ಈ ಶಬ್ದಗಳೂ ಧರ್ಮಶಬ್ದವೂ ಪರ್ಯಾಯಪದ[7]ಗಳೆಂದೇ ಅವರ ಅಭಿಪ್ರಾಯವು. ಧರ್ಮಶಬ್ದಾರ್ಥವು ಅಷ್ಟು ಸಂಕುಚಿತವಾದುದಲ್ಲ, ಅದರ ವಾಸ್ತವಾರ್ಥವು ಬಹು ವಿಶಾಲವೂ ವಿಶೇಷ ವ್ಯಾಪಕವಾದುದೂ ಆಗಿದೆ, ಎಂದರೆ ಅವರಿಗೆ ಅರ್ಥವಾಗುವುದು ಕಷ್ಟ. ದೇಹಿಸಾಮಾನ್ಯವಾದ ಆಹಾರ ವಿಹಾರಾದಿ ಪ್ರಕೃತಿ ವ್ಯಾಪಾರಗಳೂ, ನೈತಿಕ ಆರ್ಥಿಕ ಸಾಮಾಜಿಕ ರಾಜನೈತಿಕಾದಿ ಲೌಕಿಕ ವ್ಯವಹಾರಗಳೂ ಧಾರ್ಮಿಕಗಳೆಂದರೆ ಅವರ ಮನಸ್ಸಿಗೆ ಹೆತ್ತುವುದೇ ಇಲ್ಲ. ಇಂಥಾವು ನಮ್ಮ ಧರ್ಮಜೀವನದಲ್ಲಿ ಎದ್ದುತೋರುವ ಅವಾಂತರಗಳು. ಧರ್ಮಜಿಜ್ಞಾಸ ವೊಂದೇ ಇದಕ್ಕೆ ಪ್ರತೀಕಾರವು.

ಧರ್ಮಚಿಂತನೆಗೆ ಪ್ರಬಲವಾದ ಪ್ರತಿಬಂಧಕಗಳಿನ್ನೂ ಇವೆ. ಮೊದಲನೆಯ ದಾಗಿ ಧರ್ಮಶಾಸ್ತ್ರಗಳು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿವೆ. ಆಧುನಿಕ ವಿದ್ಯಾ ಸಂಸ್ಥೆಗಳ ಸ್ಥಾಪಕಾಚಾರ್ಯರೂ, ವ್ಯವಸ್ಥಾಪಕಮಹಾಶಯರೂ, ಅನ್ಯದೇಶೀ ಯರು, ಅನ್ಯಭಾಷೆಯಲ್ಲಿ ವ್ಯುತ್ಪನ್ನರಾದವರು. ಅವರು ಅವರಿಗೆ ಅಭ್ಯಾಸವಾದ ಭಾಷೆಗೇ ಪ್ರೋತ್ಸಾಹವನ್ನು ಕೊಟ್ಟರು. ನಮಗೂ ಸಂಸ್ಕೃತದ ತದ್ಭವಗಳಾದ ಪ್ರಾಕೃತ ಭಾಷೆಗಳೂ ತದ್ಭಿನ್ನವಾದ ದ್ರಾವಿಡಾದಿ ಭಾಷೆಗಳೂ ಮಾತೃಭಾಷೆಗಳು. ಉಭಯ ಕಾರಣಗಳಿಂದಲೂ ಸಂಸ್ಕೃತದ ವ್ಯಾಸಂಗಕ್ಕೆ ಅವಕಾಶವೂ ಅನುಕೂಲವೂ ಕಡಿಮೆಯಾಯಿತು. ಯಾರಾದರೂ ಅಲ್ಲೊಬ್ಬರಿಲ್ಲೊಬ್ಬರು ಅದರ ವ್ಯಾಸಂಗದಲ್ಲಿ ಮಗ್ನರಾದರೆ ವ್ಯಾವಹಾರಿಕದಲ್ಲವರಿಗೆ ಉತ್ತೇಜನೆಯಿಲ್ಲ. ಎರಡನೆಯದೇನೆಂದರೆ ಧರ್ಮವಚನಗಳ ಪಾರಮ್ಯತೆಯು ಫಲಪ್ರಾಪ್ತಿಯ ದೃಷ್ಟಿಯಿಂದ ಸಮರ್ಥಿತವಾಗ ದಿರುವುದು. ಫಲವು ಪ್ರತ್ಯಕ್ಷವೂ ಪರೋಕ್ಷವೂ ಎಂದೆರಡು ವಿಧವಾದುದಷ್ಟೆ. ಧರ್ಮದ

4 Religion. 5 Faith. 6 Devotion.

7 ಸಮಾನಾರ್ಥಕ ಶಬ್ದಗಳು; Convertible terms.

ಫಲವು ಪರೋಕ್ಷವಾಗಿರುವುದೇ ಹೆಚ್ಚು. ಆದರಿಂದಲೇ ಹೇತುವಾದಿಗಳ ತರ್ಕಕ್ಕೂ ಧರ್ಮವಚನಗಳ ಫಲದಾಯಕತ್ವಕ್ಕೂ ಅಂತರವು ಅತ್ಯಂತ ವಿಶಾಲವಾಗಿದೆ. ಹೀಗಿರುವುದರಿಂದಲೇ ಧರ್ಮವು ಪ್ರಬಲರು ದುರ್ಬಲರಿಗೂ ಧೂರ್ತರು ಮೂರ್ಖರಿಗೂ ಬೋಧಿಸುವ ಪೊಳ್ಳು ಮಾತುಗಳೆಂದು[8] ಭಾವನೆಯು ಮೂಡಿರುವುದು. ಈ ಪ್ರಕಾರದ ವಿರುದ್ಧ ಬುದ್ಧಿಯು ಹೋಗಬೇಕು, ವಿರುದ್ಧಾಚಾರಗಳು ತೊಲಗಬೇಕು, ಧರ್ಮದ ನೈಜ ಜ್ಞಾನವೂ ವಿಶುದ್ಧ ಧರ್ಮಾಚರಣವೂ ಪ್ರಾಪ್ತವಾಗಬೇಕು, ಶ್ರೇಯಸ್ಸಾಗಬೇಕು.

ಧರ್ಮಜಿಜ್ಞಾಸವೇನೂ ಸುಗಮವಲ್ಲ. ಅದರ ಮೀಮಾಂಸವೂ ಕ್ಲಿಷ್ಟವಾದುದೇ. ಭಗವಾನ್ ವ್ಯಾಸರು, "ಧರ್ಮವು ಪರಮ ಸೂಕ್ಷ್ಮವಾದುದು, ಎಷ್ಟೆಂದು ಹೇಳಲೇ ಸಾಧ್ಯವಲ್ಲ,[9] ಹಾವಿನ ಕಾಲನ್ನು ಕಾಣುವುದು ಎಷ್ಟು ಕಷ್ಟಸಾಧ್ಯವೋ ಧರ್ಮದ ಮಾರ್ಗವನ್ನು ಅರಿಯುವುದೂ ಅಷ್ಟೇ ಕಷ್ಟಸಾಧ್ಯವು"[10] ಎಂದಿದ್ದಾರೆ. ಕಷ್ಟವೆಂದು ಅದರ ಚಿಂತೆಗೇ ಹೋಗಬಾರದೆಂದು ಅಭಿಪ್ರಾಯವಲ್ಲ; ಸಾವಧಾನವಾಗಿ ಸಮಾಧಾನವಾಗಿ ಸಮಗ್ರವಾಗಿ ಗಾಢವಾಗಿ ವಿಚಾರಮಾಡಿ ಧರ್ಮಸೂಕ್ಷ್ಮವನ್ನು ಗ್ರಹಿಸಬೇಕೆಂದೇ ಅಭಿಪ್ರಾಯವು. ಅದಕ್ಕೆ ಪ್ರಮಾಣ ಪ್ರಮೇಯಗಳ ನಿರ್ಣಯವು ಪರಿಪೂರ್ಣವಾಗಿರಬೇಕು; ಸಮಯ ಸಂದರ್ಭಗಳ ಪರಿಜ್ಞಾನವು ಸಮಗ್ರವಾಗಿರಬೇಕು; ವಚನಗಳು ಯಾವ ಪ್ರಕರಣದಲ್ಲುಕ್ತವಾಗಿವೆ, ಹಿಂದಣ ಮುಂದಣ ವಾಕ್ಯಗಳೇನು ಹೇಳುತ್ತವೆ ಎಂಬುದನ್ನು ಪರ್ಯಾಲೋಚಿಸಬೇಕು; ಸಾಮಾನ್ಯ ವಚನಗಳೇ ಅಥವಾ ವಿಶೇಷ ವಚನಗಳೇ ಎಂದು ವಿಂಗಡಿಸುವುದಕ್ಕೆ ತಕ್ಕ ವ್ಯುತ್ಪನ್ನತೆಯು ಬೇಕು; ಅನುಕ್ತವಾದುವು ಅನ್ಯತ್ರ ಉಕ್ತವಾಗಿವೆಯೋ ಹೇಗೆ ಎಂಬ ಸ್ಮರಣೆಯಿರಬೇಕು; ಇತ್ಯಾದಿ ಮೀಮಾಂಸದ ನಿಯಮಗಳನ್ನರಿತು ಜಿಜ್ಞಾಸಮಾಡಿ ಧರ್ಮಸೂಕ್ಷ್ಮವನ್ನು ನಿಶ್ಚಯಿಸಿ ವರ್ತಿಸಬೇಕು, ಎಂಬ ಮಾತು. ಇದೆಲ್ಲವೂ ಶಿಷ್ಟರಿಗೆ ಸಾಧ್ಯವೇ ವಿನಾ ಸಾಮಾನ್ಯರಿಗಲ್ಲ, ಆದುದರಿಂದ ಸಾಮಾನ್ಯರಿಗೆ ಶಿಷ್ಟಾಚಾರವೇ ಆದರ್ಶವು.

ಭಗವಾನ್ ವ್ಯಾಸರಿಂದ ರಚಿತವಾದ ವಿಶಾಲವಾದ ಗ್ರಂಥಗಳನ್ನೆಲ್ಲಾ ಕೇಳಿ ಪರ್ಯಾಲೋಚಿಸಿದ ಮೇಲೂ ಧರ್ಮಸೂಕ್ಷ್ಮವನ್ನು ಅರಿಯಲಾರದೆ ಋಷಿಗಳು ಅವರನ್ನು ಕುರಿತು "ಎಲ್ಲವನ್ನೂ ಕೇಳಿದೆವು; ಅತ್ಯಂತ ವಿಸ್ತಾರದ ಪ್ರಯುಕ್ತವಾಗಿ ಧರ್ಮವೇನೆಂಬುದು ಸರಿಯಾಗಿ ಬೋಧೆಯಾಗಲಿಲ್ಲ. ನಮ್ಮ ಅನುಷ್ಠಾನಕ್ಕೆ

---

8 Religion is a rogue's advice to a fool.—Waltair.

9 ಧರ್ಮೋಹ್ಯಣೀಯಾನ್ ವಚನಾತ್ ॥ ಮ. ಭಾ.

10 ಅಹೇರಿವಹಿಧರ್ಮಸ್ಯ ಪದಂ ದುಃಖಂ ಗವೇಷಿತುಂ ॥ ಮ. ಭಾ.

ಅನುಕೂಲಿಸುವಂತೆ ಧರ್ಮದ ಸಾರವನ್ನು ಸೂತ್ರವತ್ತಾಗಿ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿದರಂತೆ. ಅದಕ್ಕೆ ವ್ಯಾಸರು,

"ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚಾಪ್ಯವಧಾರ್ಯತಾಂ।
ಆತ್ಮನಃಪ್ರತಿಕೂಲಾನಿ ನಪರೇಷಾಂ ಸಮಾಚರೇತ್ ॥"[11]

"ಧರ್ಮದ ಸಾರಸರ್ವಸ್ವವನ್ನು ಹೇಳುತ್ತೇನೆ ಕೇಳಿ, ಕೇಳಿ ಈ ಸಲ ಚೆನ್ನಾಗಿ ಜ್ಞಾಪಕದಲ್ಲಿಡಿ:—ಅದೇನೆಂದರೆ ನಮಗೆ ಯಾವುದು ಪ್ರತಿಕೂಲವೋ ಅದನ್ನು ಇತರರಿಗೆ ಮಾಡಬಾರದು ಎಂಬುದೇ ಸಾರವು" ಎಂದರಂತೆ. ಸೂತ್ರವತ್ತಾದೀ ಸಾರವಚನವು ಹೇಳಿದವರಿಗಂತೂ ಸರಿಯೇ ಸರಿಯಷ್ಟೆ, ಕೇಳಿದ ಮಹಾನುಭಾವರಿಗೂ ಅರ್ಥವಾಗಿರಬೇಕು. ಸಾಮಾನ್ಯರಿಗೆ ವಿಸ್ತಾರಕ್ಕಿಂತಲೂ ಸೂತ್ರವೇ ಗಹನವಾದುದು, ಏಕೆಂದರೆ ನಮಗೆ ಯಾವುದು ಅಹಿತವು-ಪ್ರತಿಕೂಲವು ಎಂಬುದನ್ನು ತಿಳಿಯುವುದೇನೂ ಸರಾಗವಾದುದಲ್ಲ-ಸಾಧ್ಯವೇ ಅಲ್ಲ ಎನ್ನಬಹುದು. ಕೆಲವು ವಿಷಯಗಳು ಆದಿಯಲ್ಲಿ ವಿಷೋಪಮವಾಗಿ ಕಂಡರೂ ಪರಿಣಾಮದಲ್ಲಿ ಸುಖೋದರ್ಕವಾಗುವುವು, ಇನ್ನೂ ಕೆಲವು ಆದಿಯಲ್ಲಿ ಸುಖದಾಯಕವಾಗಿ ಕಂಡುಬಂದರೂ ಪರಿಣಾಮದಲ್ಲಿ ದುಃಖಪ್ರದವಾಗುವುವು. ಹೀಗಿರುವಲ್ಲಿ ಪರಿಣಾಮಾನುಬಂಧವನ್ನು ಅರಿತು ವರ್ತಿಸುವುದೊಂದು ಜಟಿಲವಾದ ಪ್ರಸಂಗವೇ.

ಧರ್ಮವೇನೋ ಅತ್ಯಂತ ಸೂಕ್ಷ್ಮವೇ. ಧರ್ಮಾಧರ್ಮ ವಿವೇಕವು ಸರ್ವರಿಗೂ ಸಾಧ್ಯವಲ್ಲ. ತಿಳಿಯದವರಿಗೆ ಯಾವಾಗಲೂ ಸಾಧ್ಯವೇ ಅಲ್ಲ. ತಿಳಿದವರೂ ಕಾಮಕ್ರೋಧೋಪಹತರಾಗಿ ಧರ್ಮವನ್ನು ಆಚರಿಸದೆ ಅಧರ್ಮ ಮಾರ್ಗದಲ್ಲಿಯೇ ಪ್ರವರ್ತಿಸಬಹುದು, ಅಧರ್ಮವನ್ನು ಆಚರಿಸಲೂಬಹುದು. ಅದರಿಂದ ಶಿಷ್ಟಾಚಾರಗಳಲ್ಲಿ ಯಾವುದು ಸಾಧುವು ಯಾವುದಲ್ಲ ಎಂಬುದನ್ನು ನಿಶ್ಚಯಿಸುವುದು ಸಾಮಾನ್ಯರಿಗೆ ಅಸಾಧ್ಯ. ಇಂಥಾ ಸಂದೇಹಗಳು ವ್ಯವಹಾರದಲ್ಲಿ ಪ್ರಾಪ್ತವಾಗುವುದರಿಂದ "ಶಿಷ್ಟಾಚಾರವೆಂದೆಲ್ಲವನ್ನೂ ಅನುಸರಿಸದೆ ಸದಾಚಾರ ಸಂಪನ್ನರಾದ ಪೂರ್ವಿಕರು ಆನುಪೂರ್ವವಾಗಿ ಅನುಸರಿಸುತ್ತಾ ಬಂದಿರುವ ಮಾರ್ಗವನ್ನೇ ನಾವೂ ಅನುಸರಿಸಿ ನಡೆಯುತ್ತೇವೆ"[12] ಎಂದು ಯುಧಿಷ್ಠಿರನು ನುಡಿದಿದ್ದಾನೆ. ಧರ್ಮಸ್ವರೂಪನಾದ ಮಹಾತ್ಮನೇ ಹಾಗೆಂದಿರುವಾಗ ಪಾಮರರ ವಿಷಯವನ್ನು ಹೇಳಬೇಕಾದುದೇ ಇಲ್ಲ. ಹಾಗೆಂದ ಮಾತ್ರಕ್ಕೆ ಪ್ರಕೃತಿಸ್ಥರಾದ ಸಾಮಾನ್ಯ ಜನರಿಗೆ

---

11 ಅತೋಽಯದಾತ್ಮನೋಽಪಥ್ಯಂ ಪರೇಷಾಂನ ತದಾಚರೇತ್ ॥ಯಾ-iii-೬೫॥ ದೂಷಿತೋಽಪಿಚರೇದ್ಧರ್ಮಂ ಯತ್ರ ತತ್ರಾಶ್ರಮೇರತಃ। ಸಮಸ್ಸರ್ವೇಷು ಭೂತೇಷು ನಲಿಂಗಂ ಧರ್ಮ ಕಾರಣಂ ॥ ಮ-vi-೬೬॥

12 ಸೂಕ್ಷ್ಮೋಧರ್ಮೋಮಹಾರಾಜ ನಾಸ್ಯವಿದ್ಮೋವಯಂಗತಿಂ। ಪೂರ್ವೇಷಾಮಾನುಪೂರ್ವ್ಯೇಣ ಯಾತಂವರ್ತ್ಮಾನುಯಾಮಹೇ ॥ಯುಧಿಷ್ಠಿರವಾಕ್ಯ- ಮ.ಭಾ. ಆದಿ- ಅಧ್ಯಾ-೧೯೬ ॥

ಧರ್ಮವಿದು ಅಧರ್ಮವಿದು, ಇದನ್ನು ಮಾಡಬೇಕು ಇದನ್ನು ಮಾಡಬಾರದು, ಎಂದು ಸುತರಾಂ ಬೋಧೆಯಾಗುವುದೇ ಇಲ್ಲ, ಗತಾನುಗತಿಕವೇ ಗತಿ, ಎಂದರ್ಥ ವಲ್ಲ. ಸರ್ವಾಂತರ್ಯಾಮಿಯಾದ ಪರಮಾತ್ಮನ ಅಂತಃಪ್ರೇರಣೆಯಿಂದ ಧರ್ಮ ವಿದು ಅಧರ್ಮವಿದು ಎಂದು ಸ್ಥೂಲವಾಗಿ ಬೋಧೆಯಾಗುತ್ತಲೇ ಇರುತ್ತದೆ ಎಂಥಾ ದುರಾಚಾರಿಗೂ ಕೂಡ ತಾನು ಮಾಡುವುದು, ಅಧರ್ಮ, ಅಕಾರ್ಯ, ಎಂದು ಬೋಧೆಯಾಗದೆ ಇಲ್ಲ; ಕಡೆಗೆ ತಾನು ಧರ್ಮವನ್ನು ಮಾಡಬೇಕು ಅಧರ್ಮವನ್ನು ಮಾಡಬಾರದು ಎಂದಷ್ಟಾದರೂ ಗೊತ್ತಾಗದೆ ಇಲ್ಲ. ಆದರೂ ಸ್ವಭಾವ, ಅಭ್ಯಾಸ, ಕಾಮ, ಕ್ರೋಧ, ಇತ್ಯಾದಿಗಳ ಬಲವತ್ಪ್ರೇರಣೆಗೊಳಗಾಗಿ ತಿಳಿದು ತಿಳಿದೂ ನಿಂದಿತ ವನ್ನೇ ಮಾಡಿಬಿಡುತ್ತಾನೆ. ಅಧರ್ಮವು ಧರ್ಮವೆಂದೂ ಧರ್ಮವು ಅಧರ್ಮವೆಂದೂ ವಿಪರೀತವಾಗಿ ಭಾಸವಾಗಿ ಪ್ರಮಾದವಾಗುವುದು ಎಲ್ಲೋ ಯಾವುದೋ ಸೂಕ್ಷ್ಮ ವಿಚಾರದಲ್ಲಿ ಮಾತ್ರವಲ್ಲದೆ ಅನ್ಯಥಾ ಅಲ್ಲ, ವಿಚಾರಮಾಡಿ ನೋಡಿದರೆ ಪ್ರಮಾದವು ಅಜ್ಞರ ಮತ್ತು ವಿಪರೀತಜ್ಞರ ವಿಷಯ ಮಾತ್ರವೇ ಅಲ್ಲ, ವಿಜ್ಞರಿಂದಲೂ ನಡೆದೇ ನಡೆಯುತ್ತದೆ. ಆವೃತ್ತಿಯಲ್ಲಿ ಮಾತ್ರ ವಿಶೇಷ.

ಈ ಪ್ರಸಂಗದಲ್ಲಿ ವಿಖ್ಯಾತವಾದೊಂದು ಉಪಾಖ್ಯಾನವು ಸ್ಮೃತಿಗೆ ಬರುತ್ತದೆ. ಕಾಂತಾರವೊಂದರಲ್ಲೊಬ್ಬ ಮುನಿಯು ತಪಸ್ಸಿನಲ್ಲಿ ಮಗ್ನನಾಗಿದ್ದನಂತೆ. ಅವನ ಮೇಲೊಂದು ಕಾಗೆಯು ಅಚ್ಚಿಕ್ಕಿತಂತೆ. ಅದಕ್ಕವನು ರೋಷಾವಿಷ್ಟಿತನಾಗಿ ಕಾಗೆ ಯನ್ನು ದುರುಗುಟ್ಟಿ ನೋಡಿದನಂತೆ. ಆದರಿಂದಾಪ್ರಾಣಿಯು ಅಲ್ಲೇ ಸುಟ್ಟು ಭಸ್ಮವಾಗಿಹೋಯಿತಂತೆ ಆ ಅನುಭವದಿಂದ ಮುನಿಗೆ ತಾನು ನಿಗ್ರಹಾನುಗ್ರಹಕ್ಕೆ ಶಕ್ತನಾದ ಮಹಾನುಭಾವನೆಂಬ ಅಹಂಭಾವವು ಪ್ರಾಪ್ತವಾಯಿತಂತೆ. ಆಮೇಲಾ ಮುನಿಯು ಜೀವನಯಾತ್ರೆಗಾಗಿ ಒಬ್ಬ ಗೃಹಲಕ್ಷ್ಮಿಯ ಮನೆಯ ಬಾಗಿಲಿಗೆ ಬಂದು ಭಿಕ್ಷವನ್ನು ಯಾಚಿಸಿದನಂತೆ. ಆಕೆಯು ಭಿಕ್ಷವನ್ನು ನೀಡಲುದ್ಯುಕ್ತಳಾದಳಂತೆ. ಆ ಹೊತ್ತಿಗೆ ಸರಿಯಾಗಿ ಆಕೆಯ ಪತಿಯೂ ಒಂದವಸರದ ಕೆಲಸವನ್ನು ನಿರೂಪಿಸಿದ ನಂತೆ. ಆಗಾಸತಿಯು ಯಾವುದನ್ನು ಮೊದಲು ಮಾಡಬೇಕೆಂದು ವಿವೇಚಿಸಿ ಮೊದಲು ಪತಿವಾಕ್ಯವನ್ನು ಪರಿಪಾಲಿಸಿ ಆಮೇಲೆ ಮುನಿಗೆ ಭಿಕ್ಷವನ್ನು ನೀಡಲು ಬಂದಳಂತೆ. ಸಾವಕಾಶ ಮಾಡಿದಳೆಂದು ರುಷ್ಟನಾಗಿ ಮುನಿಯು ಅವಳನ್ನೂ ದುರುಗುಟ್ಟಿ ನೋಡಿದನಂತೆ. ಅದಕ್ಕಾದೇವಿಯು "ಕಾಡಿನಲ್ಲೊಂದಜ್ಞಾನಿಯಾದ ಕಾಗೆಯು ಅಪರಾಧವನ್ನು ಮಾಡಿತೆಂದು ಯುಕ್ತಾಯುಕ್ತ ವಿವೇಚನೆಯಿಲ್ಲದೆ ಸುಟ್ಟುಹಾಕಿದ ನಿನಗೆ ಧರ್ಮಸೂಕ್ಷ್ಮದ ಪರಿಜ್ಞಾನವಿಲ್ಲ, ಚಿತ್ತಶುದ್ಧಿಯಿಲ್ಲ, ಅಹಂಭಾವವು ತುಂಬಿದೆ, ಧರ್ಮಸೂಕ್ಷ್ಮವನ್ನರಿತು ವರ್ತಿಸುವ ನನ್ನನ್ನು ನಿನ್ನ ಕ್ರೂರದೃಷ್ಟಿಯು ಎಷ್ಟುಮಾತ್ರವೂ ಬಾಧಿಸಲಾರದು" ಎಂದಳಂತೆ. ಆಕೆಯ ದಿವ್ಯದೃಷ್ಟಿಗೆ ವಿಸ್ಮಿತ ನಾದ ಆ ಮುನಿಯು ಧರ್ಮಸೂಕ್ಷ್ಮವನ್ನು ಅರಿಯುವ ಪ್ರಕಾರವನ್ನು ಪ್ರಾರ್ಥಿಸಿದ ನಂತೆ. ಆಕೆಯು, ಅದನ್ನು ಧರ್ಮವ್ಯಾಧನಿಂದ ಕಲಿ ಹೋಗು, ಎಂದಳಂತೆ.

ವ್ಯಾಧನು ಹತ್ಯದಿಂದ ಜೀವಿಸುವವನು, ತಾನು ತಪಸ್ವಿಯಾದ ಮಹಾನುಭಾವನು, ಎಂಬ ಭೇದವನ್ನೂ ಅಹಂಭಾವವನ್ನೂ ತ್ಯಜಿಸಿ ಆ ವ್ಯಾಧನಿಂದಲೇ ಮುನಿಯು ಧರ್ಮಸೂಕ್ಷ್ಮವನ್ನರಿಯುವ ಪ್ರಕಾರವನ್ನು ಕಲಿತನಂತೆ. ಪತಿಸೇವಾನಿರತಳಾದ ಸ್ತ್ರೀಗೂ, ಪ್ರಾಣಿಹತ್ಯದಿಂದ ಜೀವಿಸುವ ವ್ಯಾಧನಿಗೂ ತಿಳಿದ ಧರ್ಮಸೂಕ್ಷ್ಮವು ತಪಸ್ವಿಯೂ ತೇಜಸ್ವಿಯೂ ಆದ ಮುನಿಗೆ ಗೋಚರವಾಗಲಿಲ್ಲ. ಪ್ರಕೃತವೇನೆಂದರೆ ಧರ್ಮಸೂಕ್ಷ್ಮವು ಅಜ್ಞಪ್ರಾಜ್ಞರೆಲ್ಲರಿಗೂ ಜಿಜ್ಞಾಸ್ಯವೇ ಎಂಬುದು. ಇದರ ಮೇಲೆ ಸರ್ವಜ್ಞರಿಗೇ ಶ್ರೇಯಸ್ಸಾಗುವುದು, ಇತರರಿಗಲ್ಲ ಎಂಬ ನಿಯಮವೇನೂ ಇಲ್ಲ ಧರ್ಮಾಚರಣವು ಸರ್ವರಿಗೂ ಶ್ರೇಯಸ್ಕರವು. ಎಷ್ಟೆಷ್ಟು ತಿಳಿದರೆ ಅಷ್ಟಷ್ಟೇ ಅಜ್ಞಾನ ನಿವೃತ್ತಿಗೂ ಶ್ರೇಯಃಪ್ರಾಪ್ತಿಗೂ ಅನುಕೂಲಿಸುವುದು.

## ೨. ಧರ್ಮಶಬ್ದದ ಅರ್ಥವೂ ವ್ಯಾಪ್ತಿಯೂ

ಧರ್ಮವೆಂದರೇನು ? ಅದರ ಅರ್ಥದ ವ್ಯಾಪ್ತಿಯು ಎಷ್ಟು ? ಎಂದು ಮೊದಲು ವಿಚಾರ ಮಾಡೋಣ. ಶಬ್ದಪ್ರಕ್ರಿಯೆಯ ಪ್ರಕಾರ ಧಾರಣಾರ್ಥಕವಾದ **“ಧೃ”** **(ಧೃ ಞ್=ಧಾರಣೇ)** ಎಂಬ ಧಾತುವಿನಿಂದ ಧರ್ಮಶಬ್ದವು ನಿರ್ವಚನವಾಗಿದೆ. ಧರತಿ ವಿಶ್ವಮಿತಿ, ಧ್ರಿಯತೇಽನೇನಲೋಕಾ ಇತಿವಾ ಧರ್ಮಃ :-ಅಂದರೆ ವಿಶ್ವವನ್ನು ಧರಿಸುವುದರಿಂದ ಅಥವಾ ಜನರನ್ನು ಧರಿಸುವುದರಿಂದ, ಧರ್ಮವೆಂದು ಹೆಸರು. ಶಬ್ದವ್ಯುತ್ಪತ್ತಿಯ ಪ್ರಕಾರ ಧರ್ಮವು ಜಗತ್ತಿನ ಸ್ಥಿತಿಗೆ ಆಧಾರಭೂತವಾದ ಮೂಲ ತತ್ತ್ವವು ಎಂದೂ, ಅಥವಾ ಜನರನ್ನು ನಿಯಮಬದ್ಧರನ್ನಾಗಿ ಮಾಡಿ ಅನ್ಯೋನ್ಯ ವಾಗಿ ಬಾಳಿ ಸರ್ವರೂ ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಶ್ರೇಯೋಽ ಭ್ಯುದಯಗಳನ್ನು ಸಾಧಿಸುವಂತೆ ಮಾಡುವ ವಿಭೂತಿಮತ್ತಾದ ಸತ್ತ್ವವೆಂದೂ, ದ್ಯೋತವಾಗುವುದು. ಈ ಅರ್ಥವೈಶಾಲ್ಯದ ಪ್ರಕಾರ ಧರ್ಮವೆಂಬುದು ಅಶೇಷ ವಿಶ್ವಜೀವನದ ಸ್ಥಿತಿಗತಿಗಳಿಗೆ ಮೂಲಭೂತವಾದುದು ಎಂದಹಾಗಾಯಿತು.

ಧರ್ಮಶಬ್ದದ ಅರ್ಥವ್ಯಾಪ್ತಿಯನ್ನು ಪ್ರಯೋಗಗಳಿಂದ ಪರ್ಯಾಲೋಚಿಸಿ ವಿಮರ್ಶಿಸಬೇಕು. ಪ್ರಯೋಗವು ಗ್ರಂಥಾತ್ಮಕವೂ ವಚನಾತ್ಮಕವೂ ಎಂದೆರಡು ಪ್ರಕಾರವಾದುದು. ವಚನಾತ್ಮಕವು ಸದಾಕಾಲದಲ್ಲಿಯೂ ಸರ್ವರೂ ಪ್ರಯೋಗಿಸು ವುದಾದುದರಿಂದ ಅನಂತವಾದುದು. ಅವೆಲ್ಲವನ್ನೂ ಉದಹರಿಸಿ ವಿಮರ್ಶಿಸುವು ದೆಂದರೆ ವಿಶ್ವಾಯುವೂ ಸಾಲದೆ ಬರುವುದು. ಗ್ರಂಥಗಳೂ ವಿಶೇಷವಾದುವೇ. ಅವು ಗಳಲ್ಲೆಷ್ಟೋ ಲುಪ್ತವಾಗಿಹೋಗಿವೆ, ಎಷ್ಟೋ ಶಿಥಿಲವಾಗಿಹೋಗಿವೆ, ಎಷ್ಟೋ ಗುಪ್ತ ವಾಗಿವೆ, ಪ್ರಕಾಶಿತವಾಗಿ ಹಸ್ತಗತವಾದವುಗಳೂ ಅಸಂಖ್ಯಾತವೇ. ಕೆಲವನ್ನಾದರೂ ಅವಲೋಕಿಸಿ ವಿಮರ್ಶಿಸೋಣವೆಂದರೆ ಒಂದು ಪುರುಷಾಯುಷ್ಯವೂ ಸಾಲದು. ವಿಸ್ತಾರದ ಭಯವೂ ಇರಬಾರದು.

ಪ್ರಾಚೀನರು ವೇದವನ್ನು ಅನಾದಿಯೆನ್ನುತ್ತಾರೆ, ನವೀನರು ಪ್ರಾಚೀನವೆನ್ನುತ್ತಾರೆ. ಅಂತೂ ವೇದವು ಅತ್ಯಂತ ಪ್ರಾಚೀನವಾದ ಸಾಹಿತ್ಯವೆಂಬುದರಲ್ಲಿ ಸಂದೇಹವಿಲ್ಲ. ವೈದಿಕ ಪ್ರಯೋಗವನ್ನೇ ಮೊದಲು ವಿಚಾರಮಾಡೋಣ :–

"ಯಜ್ಞೇನಯಜ್ಞಮಯಜನ್ತದೇವಾ ಸ್ತಾನಿಧರ್ಮಾಣಿ ಪ್ರಥಮಾನ್ಯಾಸನ್ "॥[1]

ಅಂದರೆ "ದೇವತೆಗಳು ಯಜ್ಞದಿಂದ ಯಜ್ಞವನ್ನಾಚರಿಸಿದರು. ಅವರಾಚರಿಸಿದ 'ಧರ್ಮಾಣಿ' ಎಂದರೆ ಯಜ್ಞಗಳೇ ಮೊದಲಣ ಯಜ್ಞಗಳು' ಎಂದರ್ಥವು. ಇಲ್ಲಿ ಧರ್ಮಶಬ್ದವು ಯಜ್ಞವೆಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಮತ್ತೊಂದು ಋಕ್ಕನ್ನೇ ತೆಗೆದುಕೊಳ್ಳೋಣ :—

"ತ್ರೀಣಿಪದಾವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ।
ಅತೋ ಧರ್ಮಾಣಿ ಧಾರಯನ್"[2]

ಅಂದರೆ "ಅಜಯ್ಯಪ್ರತಾಪಶಾಲಿಯೂ ಅಶೇಷ ಜಗದ್ರಕ್ಷಕನೂ ಆದ ಶ್ರೀ ಮಹಾವಿಷ್ಣುವು 'ಧರ್ಮಾಣಿ' ಎಂದರೆ ಅಗ್ನಿಹೋತ್ರಾದಿಗಳನ್ನು ರಕ್ಷಿಸುವುದಕ್ಕಾಗಿ ಪೃಥಿವ್ಯಾದಿ ತ್ರಿಸ್ಥಾನಗಳಲ್ಲಿ ಮೂರು ಹೆಜ್ಜೆಗಳನ್ನಿಟ್ಟನು" ಎಂದರ್ಥವು. ಇಲ್ಲಿಯೂ ಧರ್ಮಶಬ್ದವು ಅಗ್ನಿಹೋತ್ರಾದಿಗಳೆಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ವ್ಯತ್ಯಾಸವಿಷ್ಟೇ—ಯಜ್ಞಗಳು ಶ್ರೌತಕರ್ಮಗಳು, ಅಗ್ನಿಹೋತ್ರಾದಿಗಳು ಸ್ಮಾರ್ತಕರ್ಮಗಳು. ಮೊದಲಣ ಋಕ್ಕಿನಲ್ಲಿ ಧರ್ಮವೆಂದರೆ ಶ್ರೌತಕರ್ಮವೆಂದೂ ಎರಡನೆಯದರಲ್ಲಿ ಸ್ಮಾರ್ತಕರ್ಮವೆಂತಲೂ ಅರ್ಥವಾದಂತಾಯಿತು. ಯಾಸ್ಕರ ವೈದಿಕ ನಿಘಂಟುವಿನಲ್ಲಿ :—

"ಯಜ್ಞಃ, ವೇನಃ, ಅಧ್ವರಃ. ಧರ್ಮಃ-ಇತಿ ಪಂಚದಶಯಜ್ಞನಾಮಾನಿ "[3]

"ಯಜ್ಞಃ, ವೇನಃ, ಅಧ್ವರಃ, ಇತ್ಯಾದಿ ಧರ್ಮಾಂತವಾದ ಹದಿನೈದು ಶಬ್ದಗಳು ಯಜ್ಞವಾಚಕಗಳು" ಎಂದು ಹೇಳಿದೆ. ಇದರಂತೆ ಧರ್ಮಶಬ್ದಕ್ಕೆ ಯಜ್ಞವೆಂದೇ ಅರ್ಥ. ನವೀನರ ವಿದ್ವದಭಿಪ್ರಾಯದಲ್ಲಿ ಸಂಹಿತೆಗಿಂತಲೂ ಆರಣ್ಯಕವು ಅರ್ವಾಚೀನ ಸಾಹಿತ್ಯವು. ತೈತ್ತಿರೀಯಾರಣ್ಯಕದಲ್ಲಿ

"ಧರ್ಮಂಚರ ಧರ್ಮಾನ್ನಪ್ರಮದಿತವ್ಯಂ "[4] ಎಂಬ ವಾಕ್ಯವಿದೆ.

ಅಂದರೆ "ಧರ್ಮವನ್ನಾಚರಿಸು—ಧರ್ಮಾಚರಣೆಯಲ್ಲಿ ಪ್ರಮಾದವಾಗಬಾರದು" ಎಂದಿದರ ಅರ್ಥವು. ಈ ವಾಕ್ಯಕ್ಕೆ ಭಾಷ್ಯಕಾರರು—

"ಧರ್ಮಶಬ್ದೇನ ಪ್ರತ್ಯಕ್ಷಶ್ರುತಿವಿಹಿತಾ ಅಗ್ನಿಹೋತ್ರಾದಯೋವಿವಕ್ಷಿತಾಃ ॥ ಚೋದನಾ

---

1 ಋ.ವೇ.–ಅಷ್ಟ ೨–ಅಧ್ಯಾ. ೩–ವ. ೨೩ ॥

2 ಋ.ವೇ.–ಅಷ್ಟ ೧–ಅಧ್ಯಾ ೨–ವ. ೭ ॥

3 ಯಜ್ಞಃ, ವೇನಃ, ಅಧ್ವರಃ, ಮೇಧಃ, ವಿದಥಃ, ನಾರ್ಯಃ, ಸವನಂ, ಹೋತ್ರಾ, ಇಷ್ಟಿಃ, ದೇವತಾತಾ, ಮಖಃ, ವಿಷ್ಣುಃ, ಇಂದುಃ, ಪ್ರಜಾಪತಿಃ, ಧರ್ಮಃ, ಇತಿಪಂಚದಶ ಯಜ್ಞನಾಮಾನಿ—ವೈದಿಕ ನಿಘಂಟು–ಅ. ೩–೧೭ ॥

4 ತೈ. ಆ.–ಪ್ರಪಾ ೭–ಅನು–೧೧ ॥

ಲಕ್ಷಣೋಽರ್ಥೋ ಧರ್ಮಃ-ಇತಿ ಜೈಮಿನಿನಾಸೂತ್ರಿತತ್ವಾತ್ ಶ್ರೌತಂ ಸ್ಮಾರ್ತಂ ಚಕರ್ಮ ಸರ್ವಮನುಷ್ಠೇಯಮಿತಿ ಸಂಗ್ರಹವಾಕ್ಯಯೋಸ್ತಾತ್ಪರ್ಯಃ ॥"

—ಸಾಯಣಭಾಷ್ಯ ॥

ಅಂದರೆ "ಧರ್ಮಶಬ್ದದಿಂದ ಪ್ರತ್ಯಕ್ಷವಾದ ಶ್ರುತಿವಿಹಿತವಾದ ಅಗ್ನಿಹೋತ್ರಾದಿಗಳೇ ವಿವಕ್ಷಿತಗಳು. ಚೋದನಾಲಕ್ಷಣೋಽರ್ಥೋಧರ್ಮಃ—ಎಂಬ ಜೈಮಿನಿಗಳ ಸೂತ್ರದ ಪ್ರಕಾರ, ಧರ್ಮಂ, ಧರ್ಮಾತ್, ಎಂಬಲ್ಲಿ ಶ್ರೌತಕರ್ಮಗಳೂ ಸ್ಮಾರ್ತಕರ್ಮಗಳೂ ಎರಡೂ ಅನುಷ್ಠೇಯಗಳು, ಅನುಷ್ಠಾನದಲ್ಲಿ ಪ್ರಮಾದವಾಗಬಾರದು" ಎಂದು ತಾತ್ಪರ್ಯವು. ಸಂಹಿತೆಯಲ್ಲಿ ಒಂದು ಕಡೆ ಧರ್ಮವೆಂದರೆ ಶ್ರೌತವೆಂತಲೂ ಒಂದು ಕಡೆ ಅಗ್ನಿಹೋತ್ರವೆಂತಲೂ, ಆರಣ್ಯಕದಲ್ಲಿ ಶ್ರೌತಸ್ಮಾರ್ತಕರ್ಮಗಳೆಂತಲೂ, ಅರ್ಥ ವನ್ನು ಮಾಡಿದ್ದಾರೆ. ಎಲ್ಲವನ್ನೂ ಸಮನ್ವಯ ಮಾಡಿ ಧರ್ಮವೆಂದರೆ ಶ್ರೌತ ಸ್ಮಾರ್ತಕರ್ಮವೆಂದು ಅರ್ಥ ಮಾಡಿಕೊಳ್ಳಬೇಕು.

ಈಚಿನ ಸಾಹಿತ್ಯದಲ್ಲಿ ಧರ್ಮಶಬ್ದವು ಯಾವ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂಬುದನ್ನು ಸ್ವಲ್ಪ ವಿಚಾರಮಾಡೋಣ :—ಮೊದಲು ಕೋಶವನ್ನೇ ನೋಡೋಣ. ಕೋಶಗಳಲ್ಲೆಲ್ಲ ಪ್ರಸಿದ್ಧವಾದ ಅಮರಕೋಶದಲ್ಲಿ

"ಸ್ಯಾದ್ಧರ್ಮಮಸ್ತ್ರಿಯಾಂ ಪುಣ್ಯಶ್ರೇಯಸೀ ಸುಕೃತಂ ವೃಷಃ ॥ "[5] ಎಂದಿದೆ.

ಇದರ ಪ್ರಕಾರ, ಧರ್ಮಂ, ಪುಣ್ಯಂ, ಶ್ರೇಯಃ, ಸುಕೃತಂ, ವೃಷಃ, ಎಂಬೀ ಐದು ಶಬ್ದಗಳೂ ಸಮಾನಾರ್ಥಕಗಳು. **ಧರ್ಮ** ಶಬ್ದವು ಪುಂಲ್ಲಿಂಗ ನಪುಂಸಕಲಿಂಗ ಗಳೆರಡರಲ್ಲಿಯೂ ಪ್ರಯೋಗಿಸಲ್ಪಡುತ್ತದೆ, ಎಂದಹಾಗಾಯಿತು. ವೇದದಲ್ಲಿ "ತಾನಿ ಧರ್ಮಾಣಿ" ಇತ್ಯಾದಿಯಾಗಿ ನಪುಂಸಕಲಿಂಗದಲ್ಲಿಯೂ ಈಚಿನ ಸಾಹಿತ್ಯದಲ್ಲಿ "ಏಷ ಧರ್ಮಸ್ಸನಾತನಃ" ಇತ್ಯಾದಿಗಳಲ್ಲಿ ಪುಂಲ್ಲಿಂಗದಲ್ಲಿಯೂ ಪ್ರಯೋಗವಾಗಿದೆ. ಲಿಂಗ ವಿಮರ್ಶೆಯಿರಲಿ—ಅರ್ಥವ್ಯಾಪ್ತಿಯನ್ನು ವಿಮರ್ಶಿಸೋಣ ಕೋಶದಲ್ಲಿ ಈ ಐದು ಶಬ್ದಗಳೂ ಸಮಾನಾರ್ಥಕಗಳೆಂದೇ ಉಕ್ತವಾಗಿದ್ದರೂ ಸೂಕ್ಷ್ಮವಾಗಿ ವಿಚಾರಮಾಡಿ ದರೆ ಈ ಶಬ್ದಗಳೊಂದೊಂದಕ್ಕೂ ಅರ್ಥವ್ಯತ್ಯಾಸವು ಕಂಡುಬರುತ್ತದೆ. **ಸುಕೃತ** ವೆಂದರೆ ಸತ್ಕಾರ್ಯವು. **ಪುಣ್ಯವೂ**[6] **ಶ್ರೇಯಸ್ಸೂ**[7] ಸುಕೃತದ ಫಲವು. ಪುಣ್ಯ ವೆಲ್ಲವೂ ಶ್ರೇಯಸ್ಸೂ ಅಲ್ಲ, ಶ್ರೇಯಸ್ಸೆಲ್ಲವೂ ಪುಣ್ಯವೂ ಅಲ್ಲ. ಉಕ್ತದಾನವನ್ನು ಉಕ್ತರೀತಿಯಲ್ಲಿ ಆಚರಿಸಿದರೆ ಪುಣ್ಯವು. ತನ್ನ, ತನ್ನ ಪತ್ನಿಯ, ಜ್ಯೇಷ್ಠ ಸಂತಾನದ, ಗುರುವಿನ, ಪರಮಲೋಭಿಯ, ಹೆಸರುಗಳನ್ನು ಹೇಳುವುದು ಶ್ರೇಯಸ್ಸಲ್ಲ.[8] ಹೇಳ ದಿದ್ದರೆ ಶ್ರೇಯಸ್ಸು, ಹೇಳದಿದ್ದರೆ ಪುಣ್ಯವೂ ಅಲ್ಲ, ಹೇಳಿದರೆ ಪಾಪವೂ ಇಲ್ಲ. **ವೃಷ**

5 ಅಮರಕೋಶ., ಪ್ರ ಕಾಂ, ಕಾಲ. ವ ॥

6 ಪುಣತಿ ಶುಭಂಕರೋತೀತಿ ಪುಣ್ಯಂ ॥ ಪುಣ್ಯವೆಂದರೆ ಶುಭವನ್ನು ಮಾಡುವುದು.

7 ಅತಿಶಯೇನ ಪ್ರಶಸ್ಯತ ಇತಿಶ್ರೇಯಃ ॥ ಪ್ರಶಸ್ಯತರವಾದುದು ಶ್ರೇಯಸ್ಸು.

8 ಆತ್ಮನಾಮ ಗುರೋರ್ನಾಮ ನಾಮಾತಿಕೃಪಣಸ್ಯಚ । ಶ್ರೇಯಃಕಾಮೋ ನಗೃಹ್ಣೀಯಾಜ್ಜ್ಯೇಷ್ಠಾಪತ್ಯಕಳತ್ರಯೋಃ ॥ ಇತಿಸ್ಮರಣಾತ್ ॥

ವೆಂದರೆ ಇಷ್ಟಾರ್ಥಪ್ರದವಾದ ಕಾರ್ಯವು.[9] ಗ್ರಹಾರಾಧನೆಯೂ ಮೃತ್ಯುಂಜಯ ಜಪವೂ ಸೂರ್ಯನಮಸ್ಕಾರವೂ ಮಹಾಗಣಪತಿಪೂಜೆಯೂ ಅರಿಷ್ಟನಿವಾರಣೆಗಾಗಿ ಮಾಡುವ ಕರ್ಮಗಳು. ಅರಿಷ್ಟನಿವಾರಣೆಯೇ ಇಷ್ಟಸಾಧನೆಯು. ಅದರಿಂದ ಈ ಕರ್ಮಗಳು ವೃಷಗಳು. ಹಾಗೆಯೇ ಯೋಗಕ್ಷೇಮಸಿದ್ಧಿಗಾಗಿ ಪ್ರಭುವನ್ನೋ ಶ್ರೀಮಂತನನ್ನೋ ಆಶ್ರಯಿಸಬೇಕಷ್ಟೆ.[10] ಅದರಿಂದ ಅಭೀಷ್ಟಾವಾಪ್ತಿಯಾಗುವುದು. ಅರಿಷ್ಟನಿವಾರಣೆಗೂ ಅಭೀಷ್ಟಾವಾಪ್ತಿಗೂ ಮಾಡುವ ಈ ವಿಧದ ಕಾರ್ಯಗಳನ್ನು ಮಾಡದಿದ್ದರೆ ಉಕ್ತಫಲಪ್ರಾಪ್ತಿಯಿಲ್ಲ, ಧರ್ಮಲೋಪವಾಗಲೀ, ಪುಣ್ಯನಾಶವಾಗಲೀ, ಪಾಪಪ್ರಾಪ್ತಿಯಾಗಲೀ, ಅಶ್ರೇಯಸ್ಸಾಗಲೀ, ಆಯಿತೆನ್ನುವ ಹಾಗಿಲ್ಲ. ಹೀಗೆ ಕೋಶದಲ್ಲಿ ಸೂಕ್ಷ್ಮವಿಚಾರಗಳಿಗೆ ಹೋಗದೆ ಸಮಾನಾರ್ಥಕಶಬ್ದಗಳಿಂದೂ ಪರ್ಯಾಯಗಳಿಂದೂ ಸ್ಥೂಲವಾಗಿ ನಿರ್ದೇಶಿಸುತ್ತಾರೆ.[11] ಆದುದರಿಂದ ಕೋಶದ ಸಹಾಯದಿಂದ ಧರ್ಮದ ಲಕ್ಷಣವನ್ನು ಇತ್ಯರ್ಥಮಾಡಲಾಗುವುದಿಲ್ಲ.

ಇನ್ನು ಸ್ಮೃತಿಗಳಲ್ಲಿಯೂ ಪುರಾಣೇತಿಹಾಸಗಳಲ್ಲಿಯೂ ಕಾವ್ಯಗಳಲ್ಲಿಯೂ ಆಡುವ ಮಾತುಗಳಲ್ಲಿಯೂ ಧರ್ಮಶಬ್ದವನ್ನು ಯಾವ ಯಾವ ಅರ್ಥದಲ್ಲಿ ಪ್ರಯೋಗಿಸುತ್ತಾರೆಂಬುದನ್ನು ಸ್ವಲ್ಪ ವಿಚಾರಮಾಡೋಣ. ಧರ್ಮವೆಂದರೆ ಮತ[12] ವೆಂದೂ ಯಾವುದಾದರೊಂದು ಮತದಲ್ಲಿರುವ ಶ್ರದ್ಧೆ ಅಥವಾ ಆಸ್ತಿಕತೆ[13] ಯೆಂದೂ ಆಧುನಿಕ ಪ್ರವೀಣರು ಭಾವಿಸುತ್ತಾರೆಂದು ಹಿಂದೆಯೇ ಸೂಚಿಸಿದೆ. ಬಹುಶಃ ಮತಾಂತರದವರಲ್ಲಿ ಧರ್ಮವೆಂದರೆ ಅಷ್ಟೇ ವಿವಕ್ಷೆಯು, ಅಥವಾ ಮತಶ್ರದ್ಧೆಯೇ ಅವರ ಧರ್ಮವು. ನಮ್ಮಲ್ಲಿ ಧರ್ಮಕ್ಕೆ ಅಂಥಾ ಸಂಕುಚಿತಾರ್ಥವಿಲ್ಲದಿದ್ದರೂ ನಾವೂ ಸ್ವಲ್ಪ ಹೆಚ್ಚು ಕಡಿಮೆ ಅಂಥಾ ಅರ್ಥದಲ್ಲಿಯೇ **ಧರ್ಮಭ್ರಾತ,**[14] **ಧರ್ಮಭಗಿನಿ,**[15] **ಧರ್ಮಾಚಾರ್ಯ,**[16] **ಧರ್ಮಾಧಿಕಾರಿ,**[17] ಎಂಬಿತ್ಯಾದಿಯಾಗಿ ಅನ್ನುತ್ತೇವೆ. ಇತ್ಯಾದಿ ಪ್ರಯೋಗಗಳಲ್ಲಿ ಧರ್ಮವೆಂದರೆ ಮತವೆಂದೇ ಅರ್ಥ ಮಾಡಬೇಕು. ಆದರೆ ಅಷ್ಟೇ

---

9 ವರ್ಷತ್ಯಭಿಲಷಿತಮಿತಿವೃಷಃ ॥ ಅಭಿಲಾಷೆಯನ್ನು ಪೂರ್ತಿಮಾಡುವುದು ವೃಷವು.

10 ಉಪೇಯಾದೀಶ್ವರಂಚೈವಯೋಗಕ್ಷೇಮಾರ್ಥಸಿದ್ಧಯೇ ॥ ಯಾ-i-೧೦೦ ॥

11 ಉದಾಹರಣೆಗಾಗಿ ಅಮರಕೋಶದ ಮತ್ತೊಂದು ಶ್ಲೋಕಾರ್ಥವನ್ನೇ ತೆಗೆದುಕೊಳ್ಳೋಣ—"ಕೃಷ್ಣೇ ನೀಲಾಸಿತ ಶ್ಯಾಮಕಾಲಶ್ಯಾಮಲಮೇಚಕಾಃ" ಎಂದಿದೆಯಷ್ಟೆ. (ಅಮ., ಪ್ರ. ಕಾಂ., ಕಾಲ. ವ) ಅದರ ಪ್ರಕಾರ, ನೀಲ, ಬೆಳ್ಳಗಿಲ್ಲದ್ದು, ಸಾಮವರ್ಣದ್ದು, ಕಾಳಕಪ್ಪು, ಮಿಶ್ರವರ್ಣದ್ದು, ಎಲ್ಲವೂ ಕಪ್ಪುಬಣ್ಣದ ಪರ್ಯಾಯಶಬ್ದಗಳು. ವಸ್ತುತಃ ನೀಲವರ್ಣವೇ ಬೇರೆ ಕಪ್ಪುಬಣ್ಣವೇ ಬೇರೆ, ಬೆಳ್ಳಗಿಲ್ಲದುದೆಲ್ಲವೂ ಕಪ್ಪಲ್ಲ, ಸಾಮವರ್ಣವೆಂದರೆ ಬಿಳುಪೂ ಅಲ್ಲ ಕಪ್ಪೂ ಅಲ್ಲ ಮಧ್ಯಸ್ಥವಾದುದು, ಕಾಳಕಪ್ಪು ಮೇಲೆ ಹೇಳಿದವುಗಳಿಗಿಂತ ಬೇರೆಯೇ, ಮಿಶ್ರವರ್ಣವು ಬೆರಕೆ ಬಣ್ಣ ಕಪ್ಪಲ್ಲ.

12 Religion. 13 Faith. 14-15 ಒಂದೇ ಮತದವರಾದ ಸ್ತ್ರೀಪುರುಷರು ಪರಸ್ಪರ ಧರ್ಮಭ್ರಾತರು, ಧರ್ಮಭಗಿನಿಯರು. 16 ಮತಬೋಧಕ. 17 ಮತಸಂಬಂಧವಾದ ಆಚಾರ ವಿಚಾರಗಳನ್ನು ನೋಡಿಕೊಳ್ಳುವವನು.

ಧರ್ಮಶಬ್ದದ ಅರ್ಥವ್ಯಾಪ್ತಿಯಲ್ಲವೆಂಬುದು ನಮ್ಮಲ್ಲಿ ವೈಶಿಷ್ಟ್ಯವು. ಹೇಗೆಂದರೆ– **ಧರ್ಮಾತ್ಮ**ನೆಂದರೆ ಪುಣ್ಯಾತ್ಮನು, **ಧರ್ಮಕಾರ್ಯ**ವೆಂದರೆ ಪುಣ್ಯಕಾರ್ಯವು– ಇತ್ಯಾದಿಗಳಲ್ಲಿ ಧರ್ಮವೆಂದರೆ ಪುಣ್ಯವೆಂದರ್ಥವು. **ಧರ್ಮಾಗಮ,**[18] **ಧರ್ಮಾಸನ,**[19] **ಧರ್ಮಾಧ್ಯಕ್ಷ,**[20] **ಧರ್ಮಾಧಿಷ್ಠಾನ,**[21] **ಧರ್ಮಾಧಿಕರಣ,**[22] ಇತ್ಯಾದಿಗಳಲ್ಲಿ ಧರ್ಮಕ್ಕೆ ನ್ಯಾಯ ಎಂದರ್ಥವು. ಧರ್ಮವೆಂದರೆ ನ್ಯಾಯ ಎಂದಷ್ಟೇ ಅರ್ಥವಲ್ಲ. **ಆಶ್ರಮಧರ್ಮ**ವೆಂದರೆ ಆಯಾ ಆಶ್ರಮದವರು ಅವಶ್ಯವಾಗಿ ಪರಿಪಾಲಿಸ ಬೇಕಾದ ನಿಯಮ[23]ವೆಂದರ್ಥವು. ಬ್ರಹ್ಮಚಾರಿಧರ್ಮ, ಗೃಹಸ್ಥಧರ್ಮ, ವಾನಪ್ರಸ್ಥ ಧರ್ಮ, ಯತಿಧರ್ಮ, ಇವು ಆಶ್ರಮಧರ್ಮಗಳು. ಇವು ಸಾಮಾನ್ಯಗಳೆಂದೂ ವಿಶೇಷಗಳೆಂದೂ ಎರಡು ಪ್ರಕಾರವಾದುವು. ಸಂಧ್ಯೋಪಾಸನೆಯು ದ್ವಿಜರಿಗೂ ಬ್ರಹ್ಮಚಾರಿಗೃಹಸ್ಥವಾನಪ್ರಸ್ಥರಿಗೂ ಸಾಮಾನ್ಯಧರ್ಮವು, ಬ್ರಹ್ಮಚಾರಿಗೆ ಗುರು ಕುಲವಾಸವೂ, ಗೃಹಸ್ಥನಿಗೆ ಅತಿಥಿಸತ್ಕಾರವೂ, ವಿಶೇಷಧರ್ಮಗಳು. ಇತ್ಯಾದಿಗಳಲ್ಲೆಲ್ಲ ಧರ್ಮಶಬ್ದಕ್ಕೆ ನಿಯಮವೆಂದರ್ಥವು. **ಕುಲಧರ್ಮ**ವೆಂದರೆ ಒಂದು ಕುಲದವರು ಮಾತ್ರ ಅನುಸರಿಸುವ ಸಂಪ್ರದಾಯವು ಅಥವಾ ಪದ್ಧತಿಯು.[24] **ರಾಜಧರ್ಮ ಪ್ರಜಾ ಧರ್ಮ** ಇತ್ಯಾದಿಗಳಲ್ಲಿ ಕರ್ತವ್ಯ[25]ವೆಂದರ್ಥವು. **ಪ್ರಾಣಿಧರ್ಮ** ಎಂಬಲ್ಲಿ ಜೀವಿ ಗಳಲ್ಲಿ ಪ್ರಾಣರಕ್ಷಣ ಅಥವಾ ಪ್ರಾಣಧಾರಣಕ್ಕಾಗಿ ಸ್ವಾಭಾವಿಕವಾಗಿ ನಡೆಯುವ ಕಾರ್ಯಗಳು.[26] **ದೇಹಧರ್ಮ**ವೆಂದರೆ ದೇಹದಲ್ಲಿ ತಾನಾಗಿ ನಡೆಯುತ್ತಿರುವ ಪ್ರಾಕೃತಿಕ ಕಾರ್ಯಗಳು.[27] **ವಯೋಧರ್ಮ** ಇತ್ಯಾದಿಗಳಲ್ಲಿ ಆಯಾ ಅವಸ್ಥೆಗನ ಗುಣವಾದ ವರ್ತನ[28] ಅಥವಾ ಪ್ರವೃತ್ತಿ[29]ಯು. **ಕಾಲಧರ್ಮ ದೇಶಧರ್ಮ** ಇತ್ಯಾದಿಗಳಲ್ಲಿ ಕಾಲದೇಶಗಳಿಗುಚಿತವಾದ ನಡೆನುಡಿ[30]ಗಳೆಂದರ್ಥವು. **ಋತುಧರ್ಮ** ಎಂದರೆ ಆಯಾ ಋತುಗಳಲ್ಲಿ ಸಂಭವಿಸುವ ಪ್ರಕೃತಿವ್ಯತ್ಯಾಸ[31]ವೆಂದರ್ಥವು. **ಯುಗ ಧರ್ಮ**ವೆಂದರೆ ಆಯಾ ಯುಗಗಳ ಸಮಯ ಸಂದರ್ಭಾನುಸಾರವಾಗಿ ನಡೆಯ ಬೇಕೆಂದು ಉಕ್ತವಾದ ನಿಯಮ[32]ಗಳು. **ಕಾಲಧರ್ಮ**ವೆಂದರೆ ಯುಗಧರ್ಮ ಋತುಧರ್ಮ ಮುಂತಾದವು ಮತ್ತು ಕಾಲ ಬಂದರೆ ಅವಶ್ಯವಾಗಿ ಪ್ರಾಪ್ತವಾಗುವ ಮರಣ[33]ವೂ ಆಗುತ್ತದೆ. **ದೇಶಧರ್ಮ**ವೆಂದರೆ ಆಯಾ ದೇಶದ ವಾಯುಗುಣಕ್ಕೂ ಪ್ರಕೃತಿಸೌಕರ್ಯಕ್ಕೂ ನಿವಾಸಿಗಳ ಸ್ವಭಾವ ಸಂಸ್ಕೃತಿಗಳಿಗೂ ಹೊಂದುವ ಆಚರಣೆ

18 Treatises of Law. 19 Seat of justice. 20 Judge. 21 Court. 22 Administration of justice. 23 Mandatory rules for guidance. 24 Custom. 25 Duties. 26 Instincts. 27 Natural activities. 28 Conduct. 29 Behaviour. 30 Words and activities to suit times and circumstances. 31 Seasonal fluctuations. 32 Special Rules to suit particular age. 33 Death.

ಯಲ್ಲಿರುವ ನಡೆನುಡಿ ಇತ್ಯಾದಿ ವಿಶೇಷ ವರ್ತನಗಳು[34] ಉಷ್ಣವಲಯದಲ್ಲಿ ಪ್ರಾತಸ್ಸ್ನಾನವೂ ಶೀತೋದಕಸ್ನಾನವೂ ತ್ರಿಕಾಲಸ್ನಾನವೂ, ಶೀತವಲಯದಲ್ಲಿ ಉಷ್ಣೋದಕಸ್ನಾನವೂ, ಬಹೂದಕದೇಶದಲ್ಲಿ ಅವಗಾಹನಸ್ನಾನವೂ, ಜಲಾಭಾವದ ದೇಶದಲ್ಲಿ ಕೂಪಾದಿಗಳಿಂದ ಜಲವನ್ನು ಉದ್ಧರಿಸಿ ಸ್ನಾನಮಾಡುವುದೂ, ಇತ್ಯಾದಿಗಳು ದೇಶಧರ್ಮಗಳು. ಪ್ರಾತಸ್ನಾನವೂ ಶೀತೋದಕಸ್ನಾನವು ಅವಗಾಹನಸ್ನಾನವೂ ಉಷ್ಣಸೀಮೆಗೆ ಉಕ್ತವಾದುವೇ ಹೊರತು ಶೀತವಲಯಕ್ಕಲ್ಲ. ಏಕೆಂದರೆ ಅವನ್ನು ಅಲ್ಲಿಯೂ ಅನುಸರಿಸುವುದು ಸಾಧ್ಯವೂ ಅಲ್ಲ, ಅಪಾಯಕರವೂ ಹೌದು. **ವರ್ತಕಧರ್ಮ, ವಣಿಗ್ಧರ್ಮ,** ಎಂಬಿವುಗಳಲ್ಲಿ ವಾಣಿಜ್ಯದ ವೃದ್ಧಿಗಾಗಿಯೂ ಲಾಭದ ಪ್ರಾಪ್ತಿಗಾಗಿಯೂ ಕಂಡುಕಾಣದ ಹಾಗೆಯೂ ಗೋಪ್ಯವಾಗಿಯೂ ಮಾಡುವ ಗುಟ್ಟುಗಳು[35] ದುರ್ಭಿಕ್ಷದಲ್ಲಿ ಬೆಲೆಯನ್ನೇರಿಸುವುದೂ ಸುಭಿಕ್ಷದಲ್ಲಿಳಿಸುವುದೂ ಅಗ್ಗವಾಗಿ ಕೊಂಡು ತಗ್ಗಾಗಿ ಮಾರುವುದೂ ಪದಾರ್ಥಗಳನ್ನು ಮಿಶ್ರಮಾಡುವುದೂ ಶ್ರೀಮಂತರು ಸ್ಪರ್ಧಿಸಿ ಬಡವ್ಯಾಪಾರಿಗಳನ್ನು ಹಾಳುಮಾಡುವುದೂ ಇತ್ಯಾದಿಗಳು ಅಧರ್ಮವಾದರೂ[36] ವ್ಯಾಪಾರಧರ್ಮಗಳು. **ಮನೋಧರ್ಮ**ವೆಂದರೆ ಪ್ರತಿಜೀವಿಭಿನ್ನವಾದ ಸ್ವಭಾವ ಸಂಸ್ಕಾರಗಳಿಗೆ ಅನುರೂಪವಾದ ವೃತ್ತಿಪ್ರವೃತ್ತಿಗಳು,[37] ಇಷ್ಟಾನಿಷ್ಟಗಳು.[38] **ಸಧರ್ಮ ವಿಧರ್ಮ**ಗಳೆಂದರೆ ಸಮಾನಗುಣದವು,[39] ವಿರುದ್ಧಗುಣದವು[40] ಎಂದರ್ಥವು. ಉಷ್ಣತ್ವವು ಬಿಸಿಲಿನ ಗುಣವು, ಬೆಂಕಿಯ ಗುಣವು. ಶೈತ್ಯವು ಪ್ರಕೃತಿ ಸ್ವರೂಪದಲ್ಲಿರುವ ಜಲದ ಗುಣವು. ಉಷ್ಣತ್ವವು ಬಿಸಿಲಿಗೂ ಬೆಂಕಿಗೂ ಸಮಾನ ಧರ್ಮವು, ಬಿಸಿಲು ಬೆಂಕಿಗಳು ಸಾಧರ್ಮ್ಯಗಳು. ಬಿಸಿಲೂ ನೀರೂ, ಬೆಂಕಿಯೂ ನೀರೂ, ಪರಸ್ಪರ ವಿರುದ್ಧ ಧರ್ಮದವು, ವೈಧರ್ಮ್ಯಗಳು. ಅಲಂಕಾರಶಾಸ್ತ್ರದಲ್ಲಿ ಉಪಮೇಯಕ್ಕೂ ಉಪಮಾನಕ್ಕೂ ಇರುವ ಸಾದೃಶ್ಯ[41]ಕ್ಕೆ **ಸಮಾನಧರ್ಮ**ವೆನ್ನುತ್ತಾರೆ. ಸಾಧಾರಣವಾಗಿ ನಾವು ಮಾತನಾಡುವಾಗಲೂ, ಧರ್ಮವಾಗಿ ಹೇಳಯ್ಯ, ನಿನ್ನ ಧರ್ಮ ಸುಮ್ಮನಿರಯ್ಯ, ಅವನ ಧರ್ಮಕ್ಕೆ ಅವನಿಗೆ ರೇಗಲಿಲ್ಲ, ದಮ್ಮಯ್ಯ (ಎಂಬುದು ಧರ್ಮಮಾರ್ಯ ಎಂಬುದರ ತದ್ಭವವು), ಧರ್ಮ ಮಾಡಿ ಇತ್ಯಾದಿಯಾಗಿ ಅನ್ನುತ್ತೇವೆ. ಇವುಗಳಲ್ಲಿ ಧರ್ಮಶಬ್ದಕ್ಕೆ ಬೇರೆ ಬೇರೆ ಅರ್ಥವು. **ಧರ್ಮವಾಗಿ ಹೇಳು** ಅಂದರೆ ನಿಷ್ಪಕ್ಷಪಾತ[42]ವಾಗಿ ಆಡು ಎಂದೂ **ನಿನ್ನ ಧರ್ಮ ಸುಮ್ಮನಿರು** ಅಂದರೆ ನಿನಗಪ್ರಕೃತ[43] ಸುಮ್ಮನಿರು ಎಂತಲೂ,

---

34 Special rules to suit particular places. 35 Trade secrets.

36 ಸತ್ಯಾನೃತಂತು ವಾಣಿಜ್ಯಂ ॥ಮ.-iv-೬॥ ಪ್ರಾಯೇಣಸತ್ಯಾನೃತವ್ಯವಾಹಾರಸಾಧ್ಯತ್ವಾತ್ ಸತ್ಯಾನೃತಂ ವಾಣಿಜ್ಯಂ। ನತುವಾಣಿಜ್ಯೇ ಶಾಸ್ತ್ರೇಣ ಸತ್ಯಾನೃತಾಭ್ಯನುಜ್ಞಾತಂ ॥ ಕುಲ್ಲೂಕಃ, 37 Actions and promptings. 38 Likes and dislikes. 39 Similars. 40 Dissimilars. 41 Similarity. 42 Impartial. 43 Unconcerned's non-interference.

**ಅವನ ಧರ್ಮಕ್ಕೆ** ಅವನಿಗೆ ರೇಗಲಿಲ್ಲ ಅಂದರೆ ಅವನು ತನ್ನ ಪ್ರಕೃತಿ ಅಥವಾ ಸ್ವಭಾವವನ್ನು ಸಂಯಮ ಮಾಡಿಕೊಂಡು[44] ದರಿಂದ ಅವನಿಗೆ ಸಾಧಾರಣವಾಗಿ ಬರುವ ಕೋಪವು ಬರಲಿಲ್ಲ ಎಂದೂ, **ದಮ್ಮಯ್ಯ** ಎಂದರೆ ಧರ್ಮಭಿಕ್ಷವನ್ನು ಬೇಡುತ್ತೇನೆ, ಧರ್ಮವಾಗಿ ವರ್ತಿಸು[45] ಎಂತಲೂ, **ಧರ್ಮ ಕೊಡಿ, ಧರ್ಮ ಮಾಡಿ,** ಎಂದರೆ ದಾನವನ್ನು ಕೊಡಿ ದಾನವನ್ನು ಮಾಡಿ[46] ಎಂದೂ ರೂಢಾರ್ಥವು.

ಧರ್ಮಶಬ್ದವನ್ನು ಸಾಮಾನ್ಯವಾದ ಅರ್ಥಕ್ಕೆ ವಿರುದ್ಧವಾದ ಅರ್ಥದಲ್ಲಿಯೂ ಪ್ರಯೋಗಿಸುವುದುಂಟು **ಆಪದ್ಧರ್ಮ**ವೆಂಬುದೊಂದಂಥಾ ಪ್ರಯೋಗವು. ಅನಾಪತ್ತಿಯಲ್ಲಿ ಅಧರ್ಮವೇ ಆದರೂ ವಿಪತ್ಕಾಲದಲ್ಲಿ ಧರ್ಮವೆಂದು ಪರಿಗಣಿಸಲ್ಪಡಬೇಕಾದುದು ಆಪದ್ಧರ್ಮವು. "ಅಗ್ನಿಹೀನನ ಅನ್ನವನ್ನು ಊಟಮಾಡಬಾರದು,[47] ಮಾಡುವುದು ಧರ್ಮವಲ್ಲ" ಎಂಬುದು ಅನಾಪತ್ತಿಯ ವಿಷಯವು. ಆದರೆ ಆಪತ್ತಿಯೊದಗಿ ಅನಿವಾರ್ಯವಾದರೆ ಅಂಥಾ ನಿಷಿದ್ಧಾನವನ್ನೇ ಭೋಜನಮಾಡು,[48] ಎಂಬುದು ಆಪದ್ಧರ್ಮವು. ನೀರೋಗಿಗೆ ಅಭೋಜ್ಯವೂ ಅಪೇಯವೂ ಆದುದನ್ನು ರೋಗಿಯು ಚಿಕಿತ್ಸೆಗಾಗಿ ಸೇವಿಸಬೇಕಾಗಬಹುದು, ಅಂಥಾ ನಿಷಿದ್ಧ ಸೇವನೆಯು ಆಪದ್ಧರ್ಮವು. **ಮಾರ್ಗಧರ್ಮ**ವೆಂಬುದೂ ಒಂದು ಪ್ರಕಾರದಲ್ಲಿ ಇಂಥಾದ್ದೇ. ಆಚಾರಾಹ್ನಿಕಗಳಿಗೆ ದಾರಿಯಲ್ಲಿ ಸಮಯವೂ ಸೌಕರ್ಯವೂ ಇರುವುದಿಲ್ಲ. ಆದುದರಿಂದ ಪಥಿಕನಿಗೆ ಇವೆಲ್ಲವನ್ನೂ ಕ್ರಮವಾಗಿಯೂ ಸಮೀಚೀನವಾಗಿಯೂ ಮಾಡುವುದಕ್ಕಾಗುವುದಿಲ್ಲ. ಪರಜಲದಲ್ಲಿಯೇ ಸ್ನಾನವನ್ನು ಮಾಡಬೇಕಾಗುತ್ತದೆ. ಒದ್ದೆಯನ್ನೇ ಉಡಬೇಕಾಗುತ್ತದೆ. ಆಹ್ನಿಕಗಳನ್ನು ಯಾವಾಗಾದರೆ ಆಗ ಎಷ್ಟಾದರೆ ಅಷ್ಟೇ ಮಾಡಬೇಕಾಗುತ್ತದೆ, ತಂಗೂಳನ್ನೇ ತಿನ್ನಬೇಕಾಗುತ್ತದೆ, ನಡೆಯುತ್ತಲೇ ಉಣಬೇಕಾಗುತ್ತದೆ, ಇತ್ಯಾದಿಗಳು ಸಾಧಾರಣ ಧರ್ಮಕ್ಕೆ ವಿರುದ್ಧವಾದುವಾದರೂ ನಿರ್ವಾಹವಿಲ್ಲದೆ ನಡೆಯಲೇಬೇಕಾಗುತ್ತದೆ. ಇದು ಮಾರ್ಗಧರ್ಮವು. ಇದಕ್ಕೆ ಧರ್ಮಶಾಸ್ತ್ರದಲ್ಲಿ ಆಧಾರವೂ ಇದೆ.

ಇಲ್ಲಿಯವರೆಗೆ ಹೇಳಿದುವೆಲ್ಲವೂ ತ್ರಿವರ್ಗಸಾಧನಪರವಾದ ಪ್ರವೃತ್ತಿಮಾರ್ಗದಲ್ಲಿ ನಡೆಯಬೇಕಾದುವು. ಈ ಮಾರ್ಗಕ್ಕೆ ವಿರುದ್ಧವಾದ ಬೇರೊಂದು ಮಾರ್ಗವಿದೆ, ಅದು ನಿವೃತ್ತಿಮಾರ್ಗವು, ಮುಕ್ತಿಮಾರ್ಗವು. ಆ ಮಾರ್ಗವನ್ನು ಹಿಡಿದವರಿಗೆ ಜಗತ್ತೆಲ್ಲವೂ ಮಿಥ್ಯವು, ಬ್ರಹ್ಮವೊಂದೇ ಸತ್ಯವು. ಐಹಿಕ ಆಮುಷ್ಮಿಕ ಭೋಗಗಳಲ್ಲಿ ವೈರಾಗ್ಯ, ಶಮದಮಾದಿಗಳೂಇರುತ್ತವೆ. ನಾಲ್ಕನೆಯ ಪುರುಷಾರ್ಥವಾದ ಮುಕ್ತಿಯೇ

44 Self restraint. 45 Act rightly. 46 Make gifts.

47 ...ಅಗ್ನಿಹೀನಸ್ಯ ನಾನ್ನಮದ್ಯಾದನಾಪದಿ ॥ ಯಾ-i-೧೬೦॥

48 ಆಪದ್ಗತಸ್ಸಂಪ್ರಗೃಹ್ಣನ್ ಭುಂಜಾನೋವಾಯತಸ್ತತಃ ।
ನ ಲಿಪ್ಯತೈನಸಾ ...॥ ಯಾ-iii-೪೧॥

ಅವರ ಧ್ಯೇಯವು. ಅವರು ಅನುಸರಿಸುವ ಧರ್ಮವು, **ಪರಧರ್ಮವು,**[49] ಮೋಕ್ಷ ಧರ್ಮವು. ಅಂದರೆ ಮೋಕ್ಷಧರ್ಮವನ್ನು ಹಿಡಿದವರು ಯತ್ಯಾಶ್ರಮವನ್ನು ಸ್ವೀಕರಿಸಿದರೆ ಯತಿಧರ್ಮಗಳನ್ನಾಚರಿಸಬೇಕು. ಆಚಾರಾದಿಗಳನ್ನು ಅತ್ಯಂತವಾಗಿ ಬಿಡಬೇಕೆಂದಲ್ಲ. ಯತಿಧರ್ಮವಿರುದ್ಧವಾದುವುಗಳು ಅವರಿಗಿಲ್ಲ. ಆಶ್ರಮಸ್ವೀಕಾರ ವಾಗದಿದ್ದರೂ ಮುಕ್ತಿಸಾಧನೆಗೆ ಪ್ರತಿಬಂಧಕಗಳಾದುವು ಮುಮುಕ್ಷುಗಳಿಗಿಲ್ಲ. ಅಂತೂ ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳನ್ನು ಸಾಧಿಸುವ ಪ್ರಕಾರವು ಅವರಿಗಿಲ್ಲ. ಮುಕ್ತಿಸಾಧನೆಯೇ ಅವರಿಗೆ ಬೇಕಾದುದು. ಆದರಿಂದಲೇ ಎಲ್ಲಾ ಧರ್ಮಗಳನ್ನೂ ಪರಿತ್ಯಜಿಸು, ನನ್ನನ್ನು ಶರಣು ಹೊಂದು, ನಾನು ನಿನ್ನನ್ನು ಎಲ್ಲಾ ಪಾಪಗಳಿಂದಲೂ ವಿಮುಕ್ತನನ್ನಾಗಿ ಮಾಡುತ್ತೇನೆ ಎಂದು ಭಗವದ್ವಚನ ವಿರುವುದು,[50] ಅಂದರೆ ಪರಮಾತ್ಮನಲ್ಲಿ ಅನನ್ಯಭಕ್ತಿಯೇ ಮೋಕ್ಷಧರ್ಮವು.

ಸಂಗ್ರಹವೇನೆಂದರೆ ಧರ್ಮಶಬ್ದವು ಋತುವೈಲಕ್ಷಣ್ಯದಿಂದ ಹಿಡಿದು ದೇಹಿ ಸಾಮಾನ್ಯವಾದ ಪ್ರಕೃತಿವ್ಯಾಪಾರಗಳಿಗೂ ಸ್ವಭಾವಪ್ರೇರಿತವಾದ ಪ್ರವೃತ್ತಿಗಳಿಗೂ ಬುದ್ಧಿಪೂರ್ವಕವಾಗಿ ಆಚರಿಸುವ ಕಾರ್ಯಗಳಿಗೂ ಶಾಸನಾದಿಗಳ ನಿರ್ಬಂಧಕ್ಕೊಳ ಗಾಗಿ ವಿಧಿಯಿಲ್ಲದೆ ಮಾಡಬೇಕಾದ ಅನೈಚ್ಛಿಕವರ್ತನಗಳಿಗೂ ಅಭ್ಯುದಯ ಸಾಧನೆ ಗಾಗಿ ಬುದ್ಧಿಪೂರ್ವಕವಾಗಿ ಆಚರಿಸುವ ಯಜ್ಞಯಾಗಾದಿ ಶ್ರೌತಸ್ಮಾರ್ತಕರ್ಮ ಗಳಿಗೂ ಆಪದಾದಿಸಂಕಟಗಳಲ್ಲಿ ಮಾಡಲೇಬೇಕಾಗಿಬರುವ (ಸಾಮಾನ್ಯವಾಗಿ ಅಧರ್ಮಗಳೆನಿಸುವ) ವಿಧ್ಯನಾಚರಣ, ನಿಷಿದ್ಧಾಚರಣ ರೂಪದ ಅನಿವಾರ್ಯ ವರ್ತನೆ ಗಳಿಗೂ, ಪ್ರವೃತ್ತಿಮಾರ್ಗದ ವರ್ತನೆಗಳಿಗೆ ಅತ್ಯಂತ ವಿರುದ್ಧವಾದ ಮೋಕ್ಷಸಾಧನ ರೂಪದ ಆತ್ಮನಿಷ್ಠೆಗೂ ಸಹ, ಅನ್ವಯಿಸುವಂಥಾ ಅತ್ಯಂತ ವಿಶಾಲವಾದ ಅರ್ಥ ವ್ಯಾಪ್ತಿಯುಳ್ಳದ್ದೆಂತಲೂ, ಕೇವಲ ಮತಶ್ರದ್ಧೆ ಆಸ್ತಿಕ್ಯ ಭಕ್ತಿ ಎಂಬಿತ್ಯಾದಿ ಸಂಕುಚಿ ತಾರ್ಥ ಮಾತ್ರದ್ದಲ್ಲವೆಂತಲೂ ಸಾರಾಂಶವು.

## ೩. ಧರ್ಮಲಕ್ಷಣವು

"ಚೋದನಾಲಕ್ಷಣೋಽರ್ಥೋ ಧರ್ಮಃ" ಎಂದು ಜೈಮಿನಿಗಳು ಸೂತ್ರಿಸಿದ್ದಾರೆ.[1] ಚೋದನೆಯೆಂದರೆ ಪ್ರೇರಣೆಯು. ಪ್ರೇರಣೆಯೆಂದರೆ ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವ ವಚನವು.[2] ಪ್ರೇರಣೆಯು ಎಂಥಾದ್ದಾಗಿರಬೇಕು? ಎಂಥಾ ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡಬೇಕು? "ಸೂತಚೋದಯಾಶ್ವಾನ್"—

---

49 ಅಯಂತುಪರಮೋಧರ್ಮೋಯದ್ಯೋಗೇನಾತ್ಮದರ್ಶನಂ ॥ ಯಾ.i-೮॥

50 ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂಶರಣಂವ್ರಜ। ಅಹಂತ್ವಾಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥ಭ.ಗೀ.॥

1 ಪೂರ್ವಮೀಮಾಂಸ-ಅ. ೧-ಪಾ. ೧-ಸೂ. ೨॥

2 ಚೋದನಾ ಇತಿಕ್ರಿಯಾಯಾಃ ಪ್ರವರ್ತಕಮಾಹುಃ ॥ಶಾಬರಭಾಷ್ಯ॥

ಸಾರಥಿಯೇ ಕುದುರೆಗಳನ್ನು ಓಡುವ ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡು ಎಂಬಂಥಾ ಪ್ರಕೃತ ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವ ಪ್ರೇರೇಪಣೆಯೇ ? ಅಲ್ಲ. ಅದು ಕೇವಲ ತಾತ್ಕಾಲಿಕವಾದ ಪ್ರಕೃತಸಾಧನಪರವಾದುದು, ನಿತ್ಯವಾದುದಲ್ಲ. ಬೇಕಾದಾಗ ಓಡಿಸು ಎನ್ನಬಹುದು, ಬೇಡವಾದರೆ ನಿಲ್ಲಿಸು ಎನ್ನಲೂಬಹುದು. "ನದಿಯ ತೀರದ ತೋಪಿನಲ್ಲಿರುವ ಮಾವಿನ ಮರಗಳಲ್ಲಿ ಬೇಕಾದಷ್ಟು ಹಣ್ಣುಗಳು ಬಿಟ್ಟಿವೆ" ಎಂಬ ವಚನವನ್ನು ನುಡಿದರೆ ಅದನ್ನು ಕೇಳಿದವನಿಗೆ ಅಲ್ಲಿಗೆ ಹೋಗಿ ಆ ಹಣ್ಣುಗಳನ್ನು ಕೊಯ್ದು ಭಕ್ಷಿಸಬಹುದೆಂದು ಪ್ರೇರಣೆಯಾಗಬಹುದು. ಆದರೆ ಅಂಥಾ ಪ್ರೇರಣೆಯು ಯಾವ ಧರ್ಮಸಾಧನೆಯೂ ಅಲ್ಲ, ಪ್ರೇರಣೆಗೆ ಮನಗೊಡದಿದ್ದರೆ ಯಾವ ಧರ್ಮಲೋಪವೂ ಆಗುವುದಿಲ್ಲ. ಅದರಿಂದ ಅಂಥಾ ಪ್ರೇರಣೆಯು ವಿವಕ್ಷಿತವಲ್ಲ. " ತೋಟದಲ್ಲಿ ಹಣ್ಣುಹಂಪಲುಗಳು ಜಗಿಯುತ್ತಿವೆ, ಬಾಗಿಲೂ ತೆರೆದಿದೆ, ನಿರ್ಜನವಾಗಿಯೂ ಇದೆ " ಎಂದರೆ ಅದನ್ನು ಕೇಳಿದವನಿಗೆ ತೋಟದೊಳಗೆ ನುಗ್ಗಿ ನಿರ್ಭಯವಾಗಿ ಹಣ್ಣುಗಳನ್ನು ಕೊಳ್ಳೆಹೊಡೆದು ತಿಂದುಹಾಕಬೇಕೆಂದು ಪ್ರೇರಣೆಯಾಗಬಹುದು ಆದರೂ ಪ್ರೇರಿತವಾದ ಕಾರ್ಯವು ಚೌರ್ಯರೂಪದ ಅಕಾರ್ಯವೂ, ಸಿಕ್ಕಿಕೊಂಡರೆ ಶಿಕ್ಷೆಯ ಮೂಲಕ ಅನರ್ಥದಾಯಕವೂ ಆದ ವಚನವದು. " ನಾಯಿ, ಪಾಪ, ಕರ್‍ರಗಿದೆ " ಎಂದರೆ ಅದನ್ನು ತೊಳೆದು ಬೆಳ್ಳಗೆ ಮಾಡಬೇಕೆಂದು ಪ್ರೇರಣೆಯಾಗಬಹುದು, ಆದರೆ ಅಂಥಾ ಕಾರ್ಯವು ವ್ಯರ್ಥವಾದುದು. ಹೀಗೆ ಪುರುಷಾರ್ಥಸಾಧಕವಲ್ಲದ, ಅಕಾರ್ಯದ, ಅಥವಾ ವ್ಯರ್ಥಕಾರ್ಯದ, ಪ್ರೇರಣೆಯನ್ನು ಮಾಡುವ ವಚನಗಳು ಧರ್ಮವಚನಗಳಲ್ಲ, ತಾತ್ಕಾಲಿಕವಾದುವು, ಶಾಶ್ವತವಾದುವಲ್ಲ, ಪುರುಷರಾಡಿದವು, ನಿಜವಾದರೂ ಆಗಿರಬಹುದು, ಸುಳ್ಳಾದರೂ ಆಗಿರಬಹುದು, ಯಾವುದೋ ಕಾರ್ಯಸಾಧನೆಗಾಡಿರಬಹುದು, ಪರೀಕ್ಷಿಸಲು ಆಡಿರಬಹುದು, ಅಪಹಾಸ್ಯಕ್ಕಾಡಿರಬಹುದು, ಇಂಥಾ ವಚನಗಳಿಂದಾಗುವ ಪ್ರೇರಣೆಯು ಧರ್ಮಲಕ್ಷಣವಲ್ಲ. ಪ್ರೇರಣೆಯು ಪುರುಷಾರ್ಥದಲ್ಲಿ ಪ್ರವರ್ತಿಸುವಂತೆ ಮಾಡುವುದಾಗಿರಬೇಕು. ಹಾಗಿರುವುದೇ ಧರ್ಮವಚನವು

ನಾವು ಆಡುವ ಮಾತುಗಳು ತಾತ್ಕಾಲಿಕವಾದುವು, ಅವುಗಳ ಪ್ರಕೃತವೂ ಪ್ರಯೋಜನವೂ ಸಹ ತಾತ್ಕಾಲಿಕವಾದುವೇ. ವೇದವಚನಗಳೂ ಶಾಸ್ತ್ರವಚನಗಳೂ ಹಾಗಲ್ಲ, ಅವು ಸತ್ಯವಚನಗಳು, ನಿತ್ಯವಚನಗಳು, ಕೆಲವು ಅಪೌರುಷೇಯಗಳು, ಇನ್ನು ಕೆಲವು ಅಪೌರುಷೇಯಗಳ ಆಧಾರದ ಮೇಲೆ ಮಹಾಪುರುಷರು ನುಡಿದವುಗಳು. ಅಪೌರುಷೇಯವಾದುದರಿಂದಲೇ ಅಸ್ವಾರ್ಥಗಳು, ಲೋಕಹಿತವೇ ಅವುಗಳ ಲಕ್ಷ್ಯವು. ಪ್ರತಿನಿತ್ಯವೂ ಸಂಧ್ಯಾವಂದನೆಯನ್ನು ಮಾಡಬೇಕು,[3] ಅಷ್ಟಕಪಿತೃಯಜ್ಞಗಳನ್ನು ಮಾಡಬೇಕು,[4] ಬ್ರಹ್ಮಚಾರಿಯು ಸಾಯಂಕಾಲ ಪ್ರಾತಃಕಾಲಗಳಲ್ಲಿ

3 ಅಹರಹಸ್ಸಂಧ್ಯಾಮುಪಾಸೀತ ॥ಸ್ಮರಣಾತ್॥

4 ಅಷ್ಟಕಾಃ ಕರ್ತವ್ಯಾಃ ॥ಅಶ್ವಾ-ಗೃ-ಸೂ॥

ಭಿಕ್ಷಾಚರಣವನ್ನು ಮಾಡಬೇಕು,[5] ಉಭಯ ಸಂಧ್ಯಾಕಾಲಗಳಲ್ಲಿಯೂ ಅಗ್ನಿಹೋತ್ರವನ್ನು ಮಾಡಬೇಕು,[6] ಇತ್ಯಾದಿ ವಿಧಿವಚನಗಳೂ, ಹಗಲು ನಿದ್ದೆಮಾಡಬೇಡ,[7] ಬೆಳ್ಳುಳ್ಳಿಯನ್ನು ತಿನ್ನಬಾರದು.[8] ಇತ್ಯಾದಿ ನಿಷೇಧ ವಚನಗಳೂ ಧರ್ಮವಚನಗಳು. ಪ್ರಥಮ ಪುರುಷಾರ್ಥವಾದ ಧರ್ಮವನ್ನು ಮಾಡಬೇಕೆಂದು ಪ್ರೇರೇಪಣೆಮಾಡುವುವು. ಹೀಗೆಯೇ ಎರಡನೆಯ ಮತ್ತು ಮೂರನೆಯ ಪುರುಷಾರ್ಥಗಳಾದ ಅರ್ಥಕಾಮಗಳ ವಿಷಯದಲ್ಲಿಯೂ ವಿಧಿನಿಷೇಧಗಳುಂಟು. ಅರ್ಥದಿಂದ ಧರ್ಮಕ್ಕಾಗಲೀ ಕಾಮದಿಂದ ಧರ್ಮಾರ್ಥಗಳಿಗಾಗಲೀ ಬಾಧೆಯಿರಬಾರದು. ತನ್ನ ವಯಸ್ಸು, ಬುದ್ಧಿ, ವಿತ್ತ, ವಾಕ್ಕು, ವೇಷ, ವಿದ್ಯೆ, ಕುಲ, ಕರ್ಮ, ಇವುಗಳಿಗೆ ಸದೃಶವಾದ ಮತ್ತು ವಕ್ರವಲ್ಲದ, ಮತ್ಸರವಿಲ್ಲದ, ವೃತ್ತಿಯನ್ನು ಕೈಕೊಳ್ಳಬೇಕು,[9] ವೇದಾಧ್ಯಯನಕ್ಕೆ ವಿರೋಧವನ್ನು ಮಾಡುವಂಥಾ ಅರ್ಥವನ್ನು ಸಿಕ್ಕಿಸಿಕ್ಕಿದ ಕಡೆಯಿಂದ ಪ್ರತಿಗ್ರಹವನ್ನು ಮಾಡಬಾರದು.[10] ಇತ್ಯಾದಿಗಳು ಧರ್ಮಕ್ಕೆ ವಿರೋಧವಿಲ್ಲದಹಾಗೆ ಅರ್ಥಾರ್ಜನೆಯನ್ನು ಮಾಡಬೇಕೆಂದು ಬೋಧಿಸುವುವು. ಸ್ವಪತ್ನಿಯಲ್ಲಿ ನಿರತನಾಗಿರಬೇಕು,[11] ಪರಪತ್ನಿಯರಲ್ಲಿ ಆಸಕ್ತನಾಗಬಾರದು,[12] ಇತ್ಯಾದಿಗಳು, ಧರ್ಮಕ್ಕೆ ವಿರೋಧವಾಗದಂತೆ ಕಾಮೋಪಭೋಗವನ್ನು ಮಾಡಬೇಕೆಂದು ಬೋಧಿಸುವುವು

ನಾಲ್ಕನೆಯ ಪುರುಷಾರ್ಥವಾದ ಮೋಕ್ಷದ ವಿಷಯದಲ್ಲಿಯೂ ಹೀಗೆಯೇ. ಬ್ರಹ್ಮವು ಒಂದೇ ಒಂದು ಇರುವುದು, ಇನ್ನೊಂದಿಲ್ಲ,[13] ಆ ಬ್ರಹ್ಮವೇ ಸತ್ಯವು, ಜ್ಞಾನವು, ಅನಂತವು.[14] ಇತ್ಯಾದಿ ವಚನಗಳು ಬ್ರಹ್ಮವೇ ಸತ್ಯವು ಜಗತ್ತು ಮಿಥ್ಯವು. ಎಂಬ ನಿತ್ಯಾನಿತ್ಯ ವಿವೇಕವನ್ನು ಬೋಧಿಸುವುವು. ಈ ಕರ್ಮಲೋಕವು ಹೇಗೆ ಕ್ಷಯವಾಗುವುದೋ ಹಾಗೆಯೇ ಪುಣ್ಯಲೋಕವೂ ಕ್ಷಯವಾಗುವುದು,[15] ಪುಣ್ಯವು

---

5 ಸಾಯಂಪ್ರಾತರ್ಭಿಕ್ಷೇತ ॥ ಅಶ್ವಾ ಗೃ-ಸೂ॥

6 ಸಾಯಂಪ್ರಾತರ್ಜುಹುಯಾತ್ ॥ ಅಶ್ವ-ಗೃ-ಸೂ॥

7 ದಿವಾಮಾಸ್ವಾಪ್ಸೀಃ ॥ಸೂತ್ರ॥

8 ನ ಕಳಂಜಂ ಭಕ್ಷಯೇತ್ ॥ಸೂತ್ರ॥

9 ವಯೋಬುದ್ಧ್ಯರ್ಥವಾಗ್ವೇಷಶ್ರುತಾಭಿಜನಕರ್ಮಣಾಂ । ಆಚರೇತ್ಸದೃಶೀಂ ವೃತ್ತಿಮಜಿಹ್ಮಾಮಶಠಾಂತಥಾ ॥ಯಾ-1-೧೨೩॥

10 ನ ಸ್ವಾಧ್ಯಾಯವಿರೋಧ್ಯರ್ಥಮೀಹೇತನಯತಸ್ತತಃ ॥ಸ್ಮರಣಾತ್॥

11 ಸ್ವದಾರನಿರತಶ್ಚೈವ (ಭವೇತ್) ॥ಯಾ-1-೮೧॥

12 ಪರದಾರರತಿರ್ನಸ್ಯಾತ್ ॥

13 ಸದೇವಸೋಮ್ಯೇದಮಗ್ರ ಆಸೀತ್ - ಏಕಮೇವಾದ್ವಿತೀಯಂ ಬ್ರಹ್ಮ ॥ಛಾಂ. ಉ॥

14 ಸತ್ಯಂಜ್ಞಾನಮನಂತಂ ಬ್ರಹ್ಮ ॥ತೈ-ಉ॥

15 ತದ್ಯಥೇಹ ಕರ್ಮಚಿತೋಲೋಕಃ ಕ್ಷೀಯತೇ ಏವಮೇವಾಮುತ್ರಪುಣ್ಯಚಿತೋಲೋಕಃ ಕ್ಷೀಯತೇ॥

ಕ್ಷೀಣವಾದ ಕೂಡಲೇ (ಪುನಃ) ಮರ್ತ್ಯಲೋಕಕ್ಕೆ ಬರುತ್ತಾರೆ.[16] ಇತ್ಯಾದಿ ವಚನಗಳು ಆದ್ಯಂತವಂತವಾದ ಐಹಿಕಾಮುಷ್ಮಿಕ ಭೋಗಗಳಲ್ಲಿ ವಿರಾಗವನ್ನು ಬೋಧಿಸುವುವು. ಇವೇ ಮುಂತಾದುವು ಮೋಕ್ಷಧರ್ಮಪರವಾದುವು. ಮೋಕ್ಷಧರ್ಮದಲ್ಲಿ ಧರ್ಮಾರ್ಥ ಕಾಮಗಳಿಗೆ ವಿರೋಧವಾಗಬಾರದೆಂಬ ನಿಯಮವಿಲ್ಲ. ಮೋಕ್ಷಮಾರ್ಗದಲ್ಲಿ ಯಾವ ನಿಶ್ಶ್ರೇಯಸಕ್ಕಾಗಿ ಸಾಕ್ಷಾತ್ಪ್ರಯತ್ನವಾಗುವುದೋ, ಅದಕ್ಕೇ ತ್ರಿವರ್ಗಗಳೂ ಪರಂಪರೆ ಯಾಗಿ ಸಾಧಕಗಳು. ಎಲ್ಲಾ ಧರ್ಮಗಳೂ ಜ್ಞಾನದಲ್ಲಿಯೇ ಪರಿಸಮಾಪ್ತ ವಾಗುವುವು[17] ಎಂದು ಭಗವದ್ವಾಕ್ಯವೇ ಇದೆ.

ಕಣಾದರು ವೈಶೇಷಿಕ ದರ್ಶನದಲ್ಲಿ ಧರ್ಮಲಕ್ಷಣವನ್ನು ಇನ್ನೂ ವಿಶಾಲವಾಗಿ ಹೇಳಿದ್ದಾರೆ :—

"ಯತೋಽಭ್ಯುದಯ ನಿಶ್ಶ್ರೇಯಸಸಿದ್ಧಿಸ್ಸಧರ್ಮಃ"[18]

ಎಂದು ಧರ್ಮಲಕ್ಷಣವನ್ನು ಹೇಳಿದ್ದಾರೆ. ಇಹದಲ್ಲಿಯಾಗಲೀ ಪರದಲ್ಲಿಯಾಗಲೀ ಅಭೀಷ್ಟಾವಾಪ್ತಿಯಾಗುವುದು ಅಭ್ಯುದಯವು. ನಿಶ್ಶೇಷವಾಗಿ ಶ್ರೇಯಸ್ಸಾಗುವುದು ನಿಶ್ಶ್ರೇಯಸವು, ಅಂದರೆ ಮೋಕ್ಷವು. ಮೋಕ್ಷದಲ್ಲಿ ದುಃಖಗಳೆಲ್ಲವೂ ನಿವೃತ್ತಿಯಾಗಿ ಶ್ರೇಯಸ್ಸು ಸಂಪೂರ್ಣವಾಗಿ ಲಭಿಸುವುದು. ಅಂಥಾ ಅಭ್ಯುದಯವೂ ನಿಶ್ಶ್ರೇಯ ಸವೂ ಸಾಕ್ಷಾತ್ತಾಗಿ ಆಗಲೀ, ಪರಂಪರೆಯಿಂದಾಗಲೀ, ಯಾವುದರಿಂದ ಸಿದ್ಧಿಸು ವುದೋ ಅದೇ ಧರ್ಮವು ಎಂದೀ ಸೂತ್ರದ ಅರ್ಥವು

ಶ್ರೌತಸ್ಮಾರ್ತಕರ್ಮಾನುಷ್ಠಾನದಿಂದ ಪುರುಷಾರ್ಥ ಸಿದ್ಧಿಯಾಗುವುದು ಎಂಬು ದರಲ್ಲಿ ಜೈಮಿನಿಗಳದೂ ಕಣಾದರದೂ ಏಕವಾಕ್ಯವೇ ಆಯಿತು ಅಭ್ಯುದಯ ಸಿದ್ಧಿ ಎಂಬ ಕಣಾದರ ವಚನದಲ್ಲಿ ಒಂದು ವಿಶೇಷವಿದೆ. ಅಭ್ಯುದಯವು ಐಹಿಕವೂ ಆಮುಷ್ಮಿಕವೂ ಎಂದೆರಡು ಪ್ರಕಾರವಾದುದು. ಈ ಲೋಕದಲ್ಲಿಯೇ ಆಗುವ ಇಷ್ಟಾ ವಾಪ್ತಿಯು ಐಹಿಕಾಭ್ಯುದಯವು, ಪರಲೋಕದಲ್ಲಿ ಆಗುವ ಇಷ್ಟಾವಾಪ್ತಿಯು ಆಮು ಷ್ಮಿಕವು. ಆಮುಷ್ಮಿಕಾಭ್ಯುದಯದ ವಿಷಯದಲ್ಲಿಯೂ ಇಬ್ಬರಿಗೂ ಮತಭೇದವಿಲ್ಲ. ಕಣಾದರ ಧರ್ಮನಿರ್ವಚನದಲ್ಲಿ ಐಹಿಕವನ್ನೂ ಸೇರಿಸಿರುವುದು ವಿಶೇಷವು. ಅಥವಾ ಜೈಮಿನಿಗಳ ಸೂತ್ರದಲ್ಲಿ ಅದು ಅನುಕ್ತವಾಗಿದೆ, ಕಣಾದರ ಸೂತ್ರದಲ್ಲಿ ಅದು ವ್ಯಕ್ತವಾಗಿದೆ ಎನ್ನೋಣ. ಪುಣ್ಯಲೋಕಗಳಲ್ಲಿ ದೊರೆಯುವ ಸುಖಗಳು ಅಪ್ರತ್ಯಕ್ಷ ಗಳು, ಶಾಸ್ತ್ರದೃಷ್ಟಗಳು. ಐಹಿಕಾಭ್ಯುದಯಗಳು ಪ್ರತ್ಯಕ್ಷವಾದುವು. ಉದಾಹರಣೆ ಗಾಗಿ ಹೂವುಗಂಧ ಮುಂತಾದವುಗಳ ಸೇವನೆಯಿಂದೇನೂ ಪುಣ್ಯಲೋಕವು ಪ್ರಾಪ್ತ ವಾಗುವುದಿಲ್ಲ, ಅದರಿಂದ ಒಂದು ಪ್ರಕಾರದ ಮನೋರಂಜನೆ, ಆಹ್ಲಾದ, ಮರ್ಯಾದೆ, ಗೌರವ, ಗಾಂಭೀರ್ಯ, ಇತ್ಯಾದಿಗಳ ಪ್ರಾಪ್ತಿಯು ಪ್ರತ್ಯಕ್ಷವಾದುದು.

---

16 ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ॥

17 ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ಭ. ಗೀ.॥

18 ವೈ.ದ, ಅ. ೧, ಆ. ೧, ಸೂ. ೨॥

ಇಂಥಾ ಉಪಭೋಗಗಳನ್ನು ಸ್ಮೃತಿಕಾರರು ಧರ್ಮಶಾಸ್ತ್ರಗಳಲ್ಲಿ ಪ್ರತಿಪಾದಿಸಿರುತ್ತಾರೆ. ತಲೆಯ ಕೂದಲನ್ನೂ ಗಡ್ಡಮೀಸೆಗಳನ್ನೂ ಉಗುರುಗಳನ್ನೂ ಬೆಳೆಸಿಕೊಂಡಿರಬಾರದು, ಪರಿಷ್ಕಾರವಾಗಿ ಆಯುಷ್ಕರ್ಮವನ್ನು ಮಾಡಿಸಿಕೊಂಡು ಉಗುರನ್ನು ಕತ್ತರಿಸಿಸಿಕೊಂಡಿರಬೇಕು; ಸ್ನಾನವನ್ನು ಮಾಡಿ ಶುಚಿಯಾಗಿರಬೇಕು; ಬೆಳ್ಳಗೆ ಒಗೆದು ಮಡಿ ಮಾಡಿದ ವಸ್ತ್ರಗಳನ್ನು ಧರಿಸಬೇಕು, ಗಂಧಪುಷ್ಪಾದಿ ಪರಿಮಳ ವಸ್ತುಗಳನ್ನು ಸೇವಿಸಬೇಕು; ನಿರ್ಗಂಧ ವಸ್ತುಗಳನ್ನು ಸೇವಿಸಬಾರದು, ಗತಿಯಿದ್ದೂ ಹಳೆಯ ಹರುಕುಬಟ್ಟೆಯನ್ನೂ ಕೊಳೆಯ ಬಟ್ಟೆಯನ್ನೂ ಧರಿಸಬಾರದು, ಅಲಂಕೃತನಾಗಿರಬೇಕು.[19] ಯಾವ ಪ್ರಾಣಿಗೂ ದ್ರೋಹವಾಗದಂತೆಯೂ ಅಥವಾ ದ್ರೋಹವು ಅನಿವಾರ್ಯವೇ ಆದರೆ ಅತ್ಯಲ್ಪದ್ರೋಹವಾಗುವಂತೆಯೂ ಇರುವ ವೃತ್ತಿಯನ್ನಾಶ್ರಯಿಸಿ ಶರೀರಕ್ಕೆ ಕ್ಲೇಶವಾಗದಂತೆ ಧನವನ್ನಾರ್ಜಿಸಿ ಜೀವಿಸಬೇಕು; ಯೋಗಕ್ಷೇಮಾರ್ಥಸಿದ್ಧಿಗಾಗಿ ಈಶ್ವರನನ್ನೋ ಅಥವಾ ಐಶ್ವರ್ಯವಂತನನ್ನೋ ಆಶ್ರಯಿಸಬೇಕು; ಹೀನರನ್ನು ಸೇವಿಸಬಾರದು; ನನಗೆ ಇಲ್ಲವೆಂದು ಹೇಳಿಕೊಳ್ಳಬಾರದು; ತನ್ನನ್ನು ತಾನೇ ಅಪಮಾನಮಾಡಿಕೊಳ್ಳಬಾರದು; ಜೀವವಿರುವವರೆಗೂ ಸಂಪತ್ತನ್ನು ಸಂಪಾದಿಸಲು ಅಪೇಕ್ಷೆಯುಳ್ಳವನಾಗಿರಬೇಕು; ಆತ್ಮಪತ್ನೀನಿರತನಾಗಿರಬೇಕು,[20] ಇತ್ಯಾದಿ ಧರ್ಮವಚನಗಳು ಧರ್ಮಾ(ಅ)ವಿರುದ್ಧವಾದ ಅರ್ಥಕಾಮಪರವಾದುವು.

---

19 ಶುಕ್ಲಾಂಬರಧರೋ ನೀಚಕೇಶಶ್ಮಶ್ರುನಖಶ್ಶುಚಿಃ ॥ಯಾ-i-೧೩೧॥
ಕ್ಲೃಪ್ತಕೇಶನಖಶ್ಮಶ್ರು ದಾಂತಶ್ಶುಕ್ಲಾಂಬರ ಶ್ಶುಚಿಃ ॥ಮ-iv-೩೫॥
ಸ್ನಾತಕೋ ನಿತ್ಯಂ ಶುಚಿ ಸ್ಸುಗಂಧಿ ಸ್ಸ್ನಾನಶೀಲಃ ॥ಗೌತಮಃ॥
ನಾಽಗಂಧಾಂ ಸ್ರಜಂ ಧಾರಯೇ ದನ್ಯತ್ರಹಿರಣ್ಯರತ್ನಸ್ರಜಃ ॥ಗೋಭಿಲಃ॥
ನಜೀರ್ಣಮಲವದ್ವಾಸಾ ಭವೇಚ್ಚ ವಿಭವೇ ಸತಿ ॥ಮ-iv-೩೪॥
ಅಲಂಕೃತಸ್ತಿಷ್ಠೇತ್ ॥೮೮॥ ಏವಮಾಚಾರಸೇವೀ ಸ್ಯಾತ್ ॥೮೯॥ ವಿ-೭೧॥
20 ಅದ್ರೋಹೇಣೈವ ಭೂತಾನಾಮಲ್ಪದ್ರೋಹೇಣ ವಾ ಪುನಃ। ಯಾವೃತ್ತಿಸ್ತಾಂ ಸಮಾಸ್ಥಾಯ ವಿಪ್ರೋ ಜೀವೇದನಾಪದಿ ॥೨॥ ಯಾತ್ರಾಮಾತ್ರಪ್ರಸಿದ್ಧ್ಯರ್ಥ ಸ್ವೈಃ ಕರ್ಮಭಿ ರಗರ್ಹಿತೈಃ। ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಂ ॥೩॥ ಮ-iv॥
ಉಪೇಯಾದೀಶ್ವರಂ ಚೈವ ಯೋಗಕ್ಷೇಮಾರ್ಥಸಿದ್ಧಯೇ ॥ಯಾ-i-೧೦೦॥
ರಾಜಾನ್ತೇವಾಸಿಯಾಜ್ಯೇಭ್ಯಸ್ಸೀದನ್ನಿಚ್ಛೇದ್ಧನಂ ಕ್ಷುಧಾ। ದಂಭಿಹೈತುಕಪಾಖಂಡಿ ಬಕವೃತ್ತೀಂಶ್ಚ ವರ್ಜಯೇತ್ ॥ಯಾ-i-೧೩೦॥
ನಹೀನಾನ್ ಸೇವೇತ ॥೩॥ ನನಾಸ್ತೀತ್ಯಭಿಭಾಷೇತ ೧೦॥ ನಾತ್ಮಾನಮವಮಾನಯೇತ್ ॥ವಿ-೭೧॥
ವಿಪ್ರಾಽಹಿಕ್ಷತ್ರಿಯಾಽತ್ಮಾನೋ ನಾವಜ್ಞೇಯಾಃ ಕದಾಚನ। ಆಮೃತ್ಯೋಃ ಶ್ರಿಯಮಾಕಾಂಕ್ಷೇತ್ ॥ಯಾ-i-೧೫೩॥
ಯಥಾಕಾಮೀ ಭವೇದ್ವಾಪಿ.. ಸ್ವದಾರನಿರತಶ್ಚೈವ ॥ಯಾ-೧-೮೧॥

ಸುಖವನ್ನು ಸರ್ವರೂ ಅಪೇಕ್ಷಿಸುತ್ತಾರೆ. ದುಃಖವು ಯಾರಿಗೂ ಇಷ್ಟವಲ್ಲ. ಅದರಿಂದಲೇ ಎಲ್ಲರೂ ಸ್ವಾಭಾವಿಕವಾಗಿ ಸುಖಕ್ಕಾಗಿ ಪ್ರವರ್ತಿಸುವುದೂ ದುಃಖ ನಿವೃತ್ತಿಗಾಗಿ ಪ್ರಯತ್ನಿಸುವುದೂ. ವಾಸ್ತವವಾಗಿ ನೋಡಿದರೆ ಸುಖದುಃಖಗಳು ಬೇರೆಬೇರೆಯಲ್ಲ. ದುಃಖಾಭಾವವೇ ಸುಖವು, ಸುಖಾಭಾವವೇ ದುಃಖವು; ಸುಖ ದುಃಖಗಳು ದ್ವಂದ್ವಗಳು. ಸುಖಕ್ಕೆ ದುಃಖವೂ ದುಃಖಕ್ಕೆ ಸುಖವೂ ಪ್ರತಿದ್ವಂದ್ವ[21]ಗಳು; ದುಃಖಾನುಭವವಾದಮೇಲೆ ಬರುವ ಸುಖವೇ ರುಚಿ; ದುಃಖಾನುಭವವಾಗಿದ್ದರೇ ಸುಖವು ಶೋಭಿಸುವುದು;[22] ಸುಖದುಃಖಗಳು ಆಗಮಾಪಾಯಿಗಳು, ಅಂದರೆ ಬರತಕ್ಕವು ಹೋಗತಕ್ಕವು; ಸುಖಕ್ಕೆ ಮೊದಲೂ ಆಮೇಲೂ ದುಃಖವು; ದುಃಖಕ್ಕೆ ಮೊದಲೂ ಆಮೇಲೂ ಸುಖವು; ಅದರಿಂದಲೇ ಅವು ಅನಿತ್ಯ. ಇಂಥಾದ್ದೇ ಸುಖ, ಇಂಥಾದ್ದೇ ದುಃಖ, ಎಂಬ ನಿಯಮವೂ ಇಲ್ಲ. ಬೇಸಿಗೆಯಲ್ಲಿ ಸುಖಪ್ರದವಾದ ಶೀತಮಾರುತವು ಚಳಿಗಾಲದಲ್ಲಿ ದುಃಖದಾಯಕವಾಗುವುದು, ನೀರೋಗಿಗೆ ಅಮೃತ ಪ್ರಾಯವಾದ ಅನ್ನವು ರೋಗಿಗೆ ರುಚಿಸುವುದಿಲ್ಲ; ಹಸಿವಾಗಿದ್ದಾಗ ಪ್ರಿಯಹಿತವಾದ ಆಹಾರವೇ ಹಸಿವಡಗಿದ ಮೇಲೆ ಸೇರುವುದಿಲ್ಲ; ಅದರಿಂದಲೇ ಸುಖದುಃಖಗಳು ಶಾಶ್ವತವಲ್ಲ. ಆಮುಷ್ಮಿಕವೂ ಐಹಿಕದಂತೆಯೇ ಅನಿತ್ಯವು ಅಶಾಶ್ವತವು, ಪರಿಮಿತವು. ನಿಶ್ರೇಯಸವು ಅಂಥಾದ್ದಲ್ಲ. ದುಃಖಕ್ಕಲ್ಲಿ ಅತ್ಯಂತಾಭಾವವು, ಶ್ರೇಯಸ್ಸು ಪರಿಪೂರ್ಣವಾಗುವುದು; ಅಲ್ಲನುಭವಿಸುವ ಸುಖವು ದುಃಖದ ಪ್ರತಿದ್ವಂದ್ವವಾದ ಐಹಿಕಾಮುಷ್ಮಿಕ ಸುಖದಂಥಾ ಸುಖವಲ್ಲ; ದ್ವಂದ್ವಾತೀತವಾದ ಪರಮಾನಂದವು, ಐಹಿಕ ಸುಖಗಳ ಕಡೆಗೆ ಎಲ್ಲರೂ ನೈಸರ್ಗಿಕವಾಗಿ ಪ್ರವರ್ತಿಸುತ್ತಾರೆ. **ಶ್ರದ್ಧಾಸಕ್ತಿಯುಳ್ಳವರು ಆಮುಷ್ಮಿಕವನ್ನೂ ಪಡೆಯಲು ಯತ್ನಿಸುತ್ತಾರೆ.** ನೈಸರ್ಗಿಕ ಪ್ರವೃತ್ತಿಯನ್ನು ನಿರರ್ಗಳವಾಗಿ ಪ್ರವರ್ತಿಸಲು ಬಿಟ್ಟುಬಿಟ್ಟರೆ ಅನರ್ಥವಾಗುವ ಸಂಭವಗಳೇ ಹೆಚ್ಚು. ಅದಕ್ಕಾಗಿ ವಿಧಿನಿಷೇದಾದಿ ನಿಯಮಗಳಿಂದದನ್ನು ನಿಗ್ರಹಿಸಿ ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಬೇಕು. ಸತ್ಕರ್ಮದ ಫಲವಾದ ಇಹಪರ ಸೌಖ್ಯಗಳನ್ನು ಅನುಭವಿಸಿ ಅನುಭವಿಸಿ ಅವು ಗತಾಗತವೆಂಬುದರ ಅರಿವಾಗಿ ತಾನಾಗಿ ವೈರಾಗ್ಯವು ಪ್ರಾಪ್ತಿಯಾಗಬೇಕು. ಆಮೇಲೆ ಮುಮುಕ್ಷುತ್ವವು ಬರಬೇಕು. ಹೀಗೆ ಕ್ರಮ ಕ್ರಮವಾಗಿ ಸಂಸ್ಕಾರವಾಗಿ ಪರಮ ಪುರುಷಾರ್ಥವು ಲಭಿಸಬೇಕು. ಅದರಿಂದಲೇ ಕಣಾದರು ಅಭ್ಯುದಯ ನಿಶ್ರೇಯಸಗಳೆರಡೂ ಯಾವುದರಿಂದ ಪ್ರಾಪ್ತವಾಗುವುದೋ ಅದು ಧರ್ಮವು ಎಂದಿರುವುದು. ಈ ಕ್ರಮದಲ್ಲಿ ಐಹಿಕಾಭ್ಯುದಯಗಳೂ ಸೇರಿರುವುದೇ ವೈಶೇಷಿಕ ಸೂತ್ರದ ಅರ್ಥವೈಶಾಲ್ಯವು.

---

21 Opposits.

22 ಯದೇವೋಪನತಂ ದುಃಖಾತ್ಸುಖಂ ತದ್ರಸವತ್ತರಂ ॥ ವಿಕ್ರಮೋರ್ವಶೀಯ॥
ಸುಖಂ ಹಿ ದುಃಖಾನ್ಯನುಭೂಯ ಶೋಭತೇ ॥ ಮೃಚ್ಛಕಟಿಕಾ॥

**ಭವಿಷ್ಯಪುರಾಣ**ದಲ್ಲಿ ಧರ್ಮಲಕ್ಷಣವು ಹೀಗೆ ಉಕ್ತವಾಗಿದೆ :—

"ಧರ್ಮಃಶ್ರೇಯಸ್ಸಮುದ್ದಿಷ್ಟಂ ಶ್ರೇಯೋಽಭ್ಯುದಯ ಲಕ್ಷಣಂ ।
"ಸತು ಪಂಚ ವಿಧಃ ಪ್ರೋಕ್ತೋ ವೇದಮೂಲಸ್ಸನಾತನಃ ॥
"ಅಸ್ಯಸಮ್ಯಗನುಷ್ಠಾನಾ ತ್ಸ್ವರ್ಗೋ ಮೋಕ್ಷಶ್ಚ ಜಾಯತೇ ।
"ಇಹ ಲೋಕೇ ಸುಖೈಶ್ವರ್ಯಮತುಲಂ ಚ ಖಗೇಶ್ವರ ॥"

ಅಂದರೆ—ಧರ್ಮದ ಉದ್ದೇಶವು ಶ್ರೇಯಸ್ಸು, ಅಭ್ಯುದಯಲಕ್ಷಣ ಲಕ್ಷಿತವಾದುದು ಶ್ರೇಯಸ್ಸು. ಅದು ಐದು ವಿಧವಾದುದು. ಅದಕ್ಕೆ ವೇದವು ಮೂಲವು, (ಅದರಿಂದಲೇ) ಧರ್ಮವು ಸನಾತನವು. ಧರ್ಮವನ್ನು ಸರಿಯಾಗಿ ಅನುಷ್ಠಾನ ಮಾಡುವುದರಿಂದ ಸ್ವರ್ಗವೂ ಮೋಕ್ಷವೂ ಲಭಿಸುವುದಲ್ಲದೆ, ಈ ಲೋಕದಲ್ಲಿಯೂ ಅತುಲವಾದ ಸುಖವೂ ಐಶ್ವರ್ಯವೂ ಸಹ ಲಭಿಸುವುವು. ಇದೂ ಕಣಾದರ ಮತವನ್ನೇ ಸಮರ್ಥಿಸುವುದು.

**ಮನು**ವು ಧರ್ಮವೇನೆಂಬುದನ್ನು ಮತ್ತೊಂದು ಪ್ರಕಾರವಾಗಿ ವಿಶದೀಕರಿಸಿದ್ದಾನೆ :—

"ವಿದ್ವದ್ಭಿ ಸ್ಸೇವಿತ ಸ್ಸದ್ಭಿ ರ್ನಿತ್ಯ ಮದ್ವೇಷರಾಗಿಭಿಃ।
"ಹೃದಯೇನಾಽಭ್ಯನುಜ್ಞಾತೋ ಯೋ ಧರ್ಮ ಸ್ತನ್ನಿಬೋಧತ ॥" [23]

ಅಂದರೆ ವಿದ್ವಾಂಸರೂ ಸಂತರೂ ರಾಗದ್ವೇಷರಹಿತರೂ ಆದ ಮಹಾಪುರುಷರು ನಿತ್ಯವಾಗಿ ಅಂದರೆ ಸರ್ವದಾ ಏಕಪ್ರಕಾರವಾಗಿ ಆಚರಿಸುವ ಮತ್ತು ಅಂತಃಕರಣಕ್ಕೆ ಸಮರ್ಪಕವಾಗಿ ತೋರಿ ಮಾಡಬೇಕೆಂದು ಅಂತಃಪ್ರೇರಣೆಯಾಗುವ ಲಕ್ಷಣಗಳುಳ್ಳದ್ದೇ ಧರ್ಮವು—ಎಂದು. ಈ ವಚನದಲ್ಲಿ ಪ್ರಯೋಗಿಸಿರುವ ಪ್ರತಿಯೊಂದು ವಿಶೇಷಣವೂ ಬಹ್ವರ್ಥಗರ್ಭಿತವಾದುದು. **ವಿದ್ವಾಂಸರು** ಅಂದರೆ ತಿಳಿದವರು ಎಂದು, ಪದ್ಧತಿಯೆಂದಾಗಲೀ ಸಂಪ್ರದಾಯವೆಂದಾಗಲೀ ಮೂಢಭಕ್ತಿಯಿಂದಾಗಲೀ, ಅಥವಾ ಗತಾನುಗತಿಕವಾಗಿಯಾಗಲೀ, ಮಾಡುವುದು ಆದರ್ಶವಲ್ಲ ; ಶ್ರುತಾಧ್ಯಯನಸಂಪನ್ನರೂ ವೇದಾರ್ಥ ತತ್ತ್ವಜ್ಞರೂ ಸಂಸ್ಕಾರವನ್ನು ಹೊಂದಿದ ಬುದ್ಧಿಯುಳ್ಳವರೂ ಪ್ರಮಾಣ ಪ್ರಮೇಯವನ್ನು ತಿಳಿದವರೂ ನಿರ್ಣಯಜ್ಞಾನವುಳ್ಳವರೂ ಆದವರು ಆಚರಿಸುವುದು ನಮಗೆ ಆದರ್ಶವು. **ಸಂತರು** ಎಂದಿರುವುದು ಬರಿಯ ವಿದ್ವಾಂಸರಾದ ಮಾತ್ರಕ್ಕೇ ಆದರ್ಶಪುರುಷರೆಂದು ಭಾವಿಸಬಾರದು, ವಿದ್ವಾಂಸರೂ ಸ್ವಪ್ರತಿಷ್ಠೆಗೋ ಪರನಿಂದೆಗೋ ಯಾವುದಕ್ಕೋ ಅಸನ್ಮಾರ್ಗವನ್ನೇ ಹಿಡಿಯಬಹುದು, ಅದರಿಂದ ಅವರ ವಿಷಯದಲ್ಲಿಯೂ ಎಚ್ಚರವಾಗಿರಬೇಕು, ನಿರ್ಣಯವನ್ನರಿತು ಅದರಂತೆ ನಡೆಯುವ ಸಂತರೂ ಆಗಿರಬೇಕು. ಅಂಥಾವರೂ ಒಂದೊಂದು ವೇಳೆ ರಾಗದ್ವೇಷೋಪಹತರಾದಾಗ ಮಾಡುವುದು ಆದರ್ಶವಲ್ಲ. ರಾಗದ್ವೇಷೋಪಹತರಾದಾಗ ಕಾರ್ಯಾಕಾರ್ಯ ಪರಿಜ್ಞಾನವಿರುವುದಿಲ್ಲ. ರಾಗದ್ವೇಷಗಳಿಂದ

---

23 ಮ-ii-೧॥

ಅಧರ್ಮವೂ ನಡೆದುಹೋಗುತ್ತದೆ ಆದರಿಂದ ವಿದ್ವಾಂಸಸಂತರು **ರಾಗದ್ವೇಷ ರಹಿತರೂ** ಆಗಿರಬೇಕು. ಇಂಥಾ ವಿಶೇಷಣಗಳಿಂದ ಕೂಡಿದವರೇ ಆದರೂ ಅವರು ಬೋಧಿಸುವ ಅಥವಾ ಉಪನ್ಯಾಸ ಮಾಡುವ ನಿರ್ದೇಶಗಳ, ಆದರ್ಶವಲ್ಲ, ಅವರು ನಿರ್ಣಯಿಸಿದುದನ್ನು ಅನುಷ್ಠಾನದಲ್ಲಿಟ್ಟುಕೊಂಡಿರಬೇಕು. ಎಂಬುದನ್ನು ಒತ್ತಿ ಹೇಳುವುದಕ್ಕೆ ಅವರು **ಸೇವಿಸುವಂಥಾದ್ದು** ಎಂದಿರುವುದು ಸೇವಿಸುವುದೂ ಒಂದೊಂದಾವರ್ತಿ ಪ್ರಮಾದದಿಂದಲೋ ಆಲಸ್ಯದಿಂದಲೋ ಬುದ್ಧಿಮಾಲಿನ್ಯ ದಿಂದಲೋ ಮಾಡುವುದು ಅಧರ್ಮವಾದರೂ ಆಗಿರಬಹುದು, ಅಂಥಾದ್ದು ಆದರ್ಶ ವಲ್ಲ, ಅವರು ಸರ್ವದಾ ಏಕರೂಪವಾಗಿ ಆಚರಿಸುವುದು ಆದರ್ಶವು ಎನ್ನುವುದಕ್ಕೆ **ನಿತ್ಯ**ವೆಂದಂದಿರುವುದು ಆದರ್ಶವನ್ನು ಅನುಕರಣ ಮಾಡುವುದಷ್ಟೇ ಅಲ್ಲ, ಅದು ನಮ್ಮ ಮನಸ್ಸಿಗೆ ಒಪ್ಪಿ ಅದನ್ನು ಮಾಡು ಎಂದು ಅಂತಃಪ್ರೇರಣೆಯಾಗುವಂಥಾದ್ದಾಗಿರಬೇಕು. ಕಾರಣಾಂತರಗಳಿಂದಲೋ ಸಂಪ್ರದಾಯ ಭೇದದಿಂದಲೋ ಆದರ್ಶವು ನಮ್ಮ ಮನಸ್ಸಿಗೆ ಒಪ್ಪದಿರಬಹುದು ಹಾಗಿದ್ದರದು ನಮಗನುಷ್ಠೇಯುವಲ್ಲ ಎನ್ನುವುದಕ್ಕೆ ನಮ್ಮ ಅಂತಃಕರಣಕ್ಕೆ ಸಮರ್ಪಕವಾಗಿ ಕಂಡುಬಂದು **ಅಂತಃಪ್ರೇರಣೆಯಾಗುವಹಾಗೂ ಇರಬೇಕು** ಎಂದಿರುವುದು ಒಟ್ಟಿನಲ್ಲಿ ಉಕ್ತ ವಿಶೇಷಣಯುಕ್ತರಾದ ಮಹಾತ್ಮ ಸಂತರು ತಪ್ಪದೆ ಸತತವಾಗಿ ಅನುಷ್ಠಾನ ಮಾಡುವುದೂ ನಮ್ಮ ಅಂತಃಕರಣಕ್ಕೆ ಆಪ್ಯಾಯಮಾನವಾಗುವುದೂ ಧರ್ಮವು[24] ಇದೇ ಅರ್ಥವನ್ನು ಬೋಧಿಸುವ **ಮನು** ವಾಕ್ಯಗಳು ಇನ್ನೂ ಇವೆ, ಅವು ಯಾವುವೆಂದರೆ :—

"ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಂ ।
"ಆಚಾರಶ್ಚೈವ ಸಾಧೂನಾ ಮಾತ್ಮನಸ್ತುಷ್ಟಿರೇವ ಚ ॥೬॥
"ವೇದಸ್ಸ್ಮೃತಿಸ್ಸದಾಚಾರ ಸ್ಸ್ವಸ್ಯಚಪ್ರಿಯಮಾತ್ಮನಃ ।
"ಏತಚ್ಚತುರ್ವಿಧಂ ಪ್ರಾಹು ಸ್ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥೧೨॥[25]

ನಾಲ್ಕು ವೇದಗಳೂ, ವೇದಜ್ಞರ ಸ್ಮೃತಿಶೀಲಗಳೂ, ಧಾರ್ಮಿಕರ ಆಚಾರವೂ ಅಂದರೆ ಶಿಷ್ಟಾಚಾರವೂ, ತನ್ನ ಆತ್ಮವು ಒಪ್ಪುವಂಥಾದ್ದೂ, ಇವು ಧರ್ಮಮೂಲವು ಎಂದು ಮೊದಲನೆಯ ವಚನದ ಅರ್ಥವು. ವೇದವೂ, ಸ್ಮೃತಿಯೂ, ಸದಾಚಾರವೂ, ತನ್ನ ಆತ್ಮಕ್ಕೆ ಪ್ರಿಯವಾಗಿ ತೋರುವುದೂ, ಈ ನಾಲ್ಕೂ ಧರ್ಮದ ಲಕ್ಷಣಗಳು ಎಂದು ಎರಡನೆಯ ವಾಕ್ಯದ ಅರ್ಥವು. **ಯಾಜ್ಞವಲ್ಕ್ಯರೂ** ಈ ಅರ್ಥವನ್ನೇ ವಿಸ್ತರಿಸಿ ಹೇಳಿದ್ದಾರೆ :—

"ಶ್ರುತಿಸ್ಸ್ಮೃತಿಸ್ಸದಾಚಾರ ಸ್ಸ್ವಸ್ಯ ಚ ಪ್ರಿಯಮಾತ್ಮನಃ ।
"ಸಮ್ಯಕ್ಸಂಕಲ್ಪಜಃ ಕಾಮೋಧರ್ಮಮೂಲಮಿದಂಸ್ಮೃತಂ ॥[26]

ವೇದವೂ, ಸ್ಮೃತಿಯೂ(ಧರ್ಮಶಾಸ್ತ್ರವೂ), ಸದಾಚಾರವೂ(ಶಿಷ್ಟಾಚಾರವೂ), ತನ್ನ

---

24 ವಿಸ್ತಾರವನ್ನು ಮೇಧಾತಿಥಿಗಳ ಭಾಷ್ಯದಲ್ಲಿ ಕಾಣಬಹುದು.
25 ಮ-ii ॥ 26 ಯಾ-1-೭॥

ಆತ್ಮಕ್ಕೆ ಒಪ್ಪುವಂಥಾದ್ದೂ, ಯುಕ್ತಾಯುಕ್ತ ವಿವೇಕಜನ್ಯವಾದ ಸಂಕಲ್ಪದಿಂದುಂಟಾಗುವ ಕಾಮವೂ, ಧರ್ಮಕ್ಕೆ ಪ್ರಮಾಣವು.

ಈ ವಚನಗಳಲ್ಲಿ ಹೇಳುವ ಕ್ರಮವೂ ಪ್ರಯೋಗಿಸಿರುವ ಪದಗಳೂ ಅರ್ಥ ಗರ್ಭಿತವಾಗಿವೆ. ಕ್ರಮದ ಭಾವವೇನೆಂದರೆ ಇವುಗಳಲ್ಲಿ ಪರಸ್ಪರ ವಿರೋಧವು ಕಂಡುಬಂದರೆ ಅಂಥಾ ಸಂದರ್ಭದಲ್ಲಿ ಹಿಂದೆ ಹಿಂದೆ ಹೇಳಿದವುಗಳಿಗೇ ಪ್ರಾಧಾನ್ಯವು, ಮುಂದೆ ಮುಂದೆ ಹೇಳಿದವುಗಳಿಗಿಲ್ಲ ಎಂಬುದು. **ವೇದಕ್ಕೆ** ಧರ್ಮಮೂಲಗಳಲ್ಲಿ ಪ್ರಧಮಸ್ಥಾನವೆಂದು ಹೇಳುವುದಕ್ಕೆ ಅದನ್ನು ಮೊದಲು ಹೇಳಿರುವುದು. ಪ್ರಧಮ ಸ್ಥಾನವೆಂಬುದಕ್ಕೆ "ಧರ್ಮಜಿಜ್ಞಾಸವನ್ನು ಮಾಡುವವರಿಗೆ ಶ್ರುತಿಯು ಸರ್ವೋತ್ಕೃಷ್ಟವಾದ ಪ್ರಮಾಣವು"[27] ಎಂದು ವಚನವೇ ಇದೆ. ವೇದವು ಯಾವುದು? ಕಲ್ಪದ ಆದಿಯಲ್ಲಿ ಪರಮೇಶ್ವರನು ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ಕೊಟ್ಟದು.[28] ಕೊಡುವುದಕ್ಕೆಲ್ಲಿತ್ತು? ಪರಮೇಶ್ವರನಲ್ಲಿ ಸುಸ್ಥಿರವಾಗಿತ್ತು. ಅಂದರೆ ಕಲ್ಪಾಂತದಲ್ಲಿ (ಪ್ರಯಳಯದಲ್ಲಿ)ಯೂ ಸಹ ನಾಶವಾಗದೆ ಈಶ್ವರನ ಆತ್ಮದಲ್ಲಿ ನೆಲೆಸಿತ್ತು. ಹೀಗೆಯೇ ಪ್ರತಿಕಲ್ಪದ ಹಿಂದಣ ಕಲ್ಪದಲ್ಲಿಯೂ ಇರುತ್ತಾ ಬಂದುದರಿಂದ ಅದು ಅನಾದಿಯಾದುದು, ಪ್ರಳಯದಲ್ಲಿಯೂ ನಾಶವಾಗದೆ ಇರುವುದರಿಂದ ನಿತ್ಯವಾದುದು. ಕೊಟ್ಟನೆಂದರೆ ಒಬ್ಬನು ತನ್ನ ಪದಾರ್ಥವನ್ನು ಮತ್ತೊಬ್ಬನಿಗೆ ಕೊಡುವಹಾಗೆ ಕೊಟ್ಟದಲ್ಲ, ಗುರುವು ತನ್ನಲ್ಲಿರುವ ವಿದ್ಯವನ್ನು ಶಿಷ್ಯನಿಗೆ ಕೊಡುವಂತೆ ಕೊಟ್ಟದು, ಅಂದರೆ ಮೂಲದಲ್ಲಿ ಕೊಟ್ಟದರ ನಿವೃತ್ತಿಯಲ್ಲ. ಪ್ರವಚನ[29] ಪೂರ್ವಕವಾಗಿ ಕೊಟ್ಟದಲ್ಲ, ಪರಮೇಶ್ವರನು ನಿರಾಕಾರನಾದುದರಿಂದ ಪ್ರವಚನಕ್ಕೆ ಅವಕಾಶವೇ ಇಲ್ಲ. ಬ್ರಹ್ಮನಿಗದು ಪರಮೇಶ್ವರನ ಅನುಗ್ರಹದಿಂದ ತಾನಾಗಿ ಶ್ರುತವಾಯಿತು. ಶ್ರುತವಾದುದರಿಂದಲೇ ಅದಕ್ಕೆ ಶೃತಿಯೆಂದು ಹೆಸರು.[30] ಅದರಿಂದಲೇ ಪರಾಶರರು "ವೇದಂ ಶ್ರುತ್ವಾ ಚತುರ್ಮುಖಃ"[31]—ವೇದವನ್ನು ಕೇಳಿ ಚತುರ್ಮುಖ ಬ್ರಹ್ಮನು ಎಂದು ಮುಂತಾಗಿ ಶಾಸ್ತ್ರವನ್ನು ಹೇಳುವುದು. ವೇದವನ್ನು ರಚಿಸಿದವರು ಯಾರೂ ಅಲ್ಲ,[32] ಅದು ರಚನೆಯೇ ಅಲ್ಲ, ಅಪೌರುಷೇಯವು, ವೇದದ ಬೇರೆ ಬೇರೆ ಭಾಗಗಳಿಗೆ ಬೇರೆ ಬೇರೆ ಋಷಿಗಳು ದೇವತೆಗಳೂ ಛಂದಸ್ಸೂ ಇವೆಯಲ್ಲ, ಆಯಾ ಭಾಗಗಳನ್ನು ಆಯಾ ಋಷಿಗಳು ಆಯಾ ದೇವತೆಗಳನ್ನುದ್ದೇಶಿಸಿ ಆಯಾ ಛಂದಸ್ಸುಗಳಲ್ಲಿ ರಚಿಸಿದುವಲ್ಲವೆ? ಅಲ್ಲ—ಅವರು ರಚಿಸಲಿಲ್ಲ. ಆಯಾ ದೇವತೆಗಳ ಪರವಾಗಿ

---

27 ಧರ್ಮಂ ಜಿಜ್ಞಾಸಮಾನಾನಾಂ ಪ್ರಮಾಣಂ ಪರಮಂ ಶ್ರುತಿಃ ॥ ಮ-ii-೧೩॥

28 ಬ್ರಹ್ಮಾಣಂ ಮುನಯಃ ಪೂರ್ವಂ ಸೃಷ್ಟ್ವಾ ತಸ್ಮೈ ಮಹೇಶ್ವರಃ। ದತ್ತವಾನಖಿಲಾನ್ ವೇದಾನ್ ವಿಪ್ರಾ ಆತ್ಮನಿ ಸುಸ್ಥಿತಾನ್ ॥ ಮತ್ಸ್ಯ-ಪು ॥ 29 ಪಾಠ ಹೇಳಿಕೊಡುವುದು.

30 ಶ್ರು ಶ್ರವಣೇ ಇತಿಧಾತೋಃ ನಿಷ್ಪತ್ತಿಃ॥ ಶ್ರೂಯತ ಏವ, ಪರಂ ನ ಕೇನಾಪಿ ಕ್ರಿಯತ ಇತಿ ಶ್ರುತಿಃ ॥ 31 ವೇದಂ ಶ್ರುತ್ವಾ ಚತುರ್ಮುಖಃ ॥ ಪರಾಶರಃ॥

32 ನ ಕಶ್ಚಿದ್ವೇದಕರ್ತಾ ಚ ॥ ಪರಾಶರಃ॥

ಛಂದೋಬದ್ಧವಾಗಿ ಸದಾ ಇರುವ ಮಂತ್ರಗಳು ಆಯಾ ಋಷಿಗಳ ನಿರ್ಮಲಾಂತಃಕರಣದಲ್ಲಿ ಪ್ರಸ್ಫುರಿತವಾಗಿ[33] ಹಾಗೆ ತಮಗೆ ಭಾಸವಾದುದನ್ನು ಅವರವರು ಬಹಿರಂಗಪಡಿಸಿದುದು, ಅದರಿಂದ ಯಾವ ಮಂತ್ರವು ಯಾವ ಋಷಿಗೆ ಭಾಸವಾದುದೋ, ಆ ಮಂತ್ರಕ್ಕೆ ಆ ಋಷಿಯೆಂದು ಹೇಳುವುದಷ್ಟೇ ವಾಡಿಕೆಯು. ವೇದದಲ್ಲಿ ಹೇಳುವ ವಿಷಯಗಳಿಗೆ ಬೇರೆ ಆಧಾರವಿಲ್ಲ. ಅದು ಸದಾ ಇದ್ದೇ ಇರುವುದು. ಅದಕ್ಕೆ ಆದಿಯೇ ಇಲ್ಲ. ಆದಿಯೇ ಇಲ್ಲುದಕ್ಕೆ ಆಧಾರವೇ ಇಲ್ಲ ವೇದವೇತಕ್ಕೆ ಪ್ರಮಾಣವು ? ವೇದವು ಈಶ್ವರೀವಾಣಿಯು, ಅಪೌರುಷೇಯವು, ಅನಾದ್ಯನಂತವು, ನಿತ್ಯವು, ಶಾಶ್ವತವು, ಆದುದರಿಂದ ವೇದದ ಪ್ರಾಮಾಣ್ಯವು ಸ್ವತಸ್ಸಿದ್ಧವಾದುದು—ಪ್ರಮಾಣಾಂತರವನ್ನವಲಂಬಿಸಿದುದಲ್ಲ. ಪ್ರಮಾಣಕ್ಕೆ ಪ್ರಮಾಣಾಂತರದ ಅಪೇಕ್ಷೆಯಿಲ್ಲ. ಮನುವು "ಶ್ರುತಿಸ್ಮೃತಿಗಳಿಂದ ಧರ್ಮವು ಉದ್ಭವಿಸಿದುದು, ಅದರಿಂದ ಅವುಗಳನ್ನು ಪ್ರತಿಕೂಲ ತರ್ಕಗಳಿಂದ ಮೀಮಾಂಸೆ ಮಾಡಬಾರದು"[34]—ಎಂದಿದ್ದಾನೆ. ವೈಶೇಷಿಕ ದರ್ಶನದಲ್ಲಿ ಕಣಾದರು "ವೇದವು ಈಶ್ವರೀವಾಣಿಯಾದುದರಿಂದ ಅದಕ್ಕೆ ಪ್ರಾಮಾಣ್ಯವು, ವೇದವು ಯಥಾತಥ್ಯವಾಗಿ ಧರ್ಮವನ್ನು ಪ್ರತಿಪಾದಿಸುವುದರಿಂದ ಧರ್ಮಕ್ಕೆ ವೇದವು ಪ್ರಮಾಣವು"[35] ಎಂದಿದ್ದಾರೆ. ನೈಯಾಯಿಕರೂ ಕೂಡ "ವೇದವಾಕ್ಯವು ಈಶ್ವರೀವಚನವಾದುದರಿಂದ ಅದೆಲ್ಲವೂ ಪ್ರಮಾಣವು"[36]—ಎಂದು ಹೇಳುತ್ತಾರೆ. ಸಾಂಖ್ಯರೂ ಯೋಗಶಾಸ್ತ್ರಪ್ರಣೇತರೂ ವೇದಾಂತಿಗಳೂ ಎಲ್ಲರೂ ವೇದದ ಪ್ರಾಮಾಣ್ಯವನ್ನು ಒಪ್ಪಿದ್ದಾರೆ. ಹೀಗೆ ವೇದದ ಪ್ರಾಮಾಣ್ಯವು ನಿರ್ವಿವಾದವಾದುದು. ಬ್ರಹ್ಮನಿಗೆ ವೇದವು ಶ್ರುತವಾದಂತೆಯೇ ಮನುವಿಗೆ ಪ್ರತಿಕಲ್ಪಾದಿಯಲ್ಲಿ ಧರ್ಮವು ಸ್ಮೃತಿಗೆ ಬರುವುದು—ಸ್ಮೃತಿಗೆ ಬಂದುದನ್ನೇ ಮನುವು ಹೇಳುವುದು—ಸ್ಮೃತಿಗೆ ಬಂದುದನ್ನು ಹೇಳಿರುವುದರಿಂದಲೇ ಮನೂಕ್ತಿಯು **ಸ್ಮೃತಿಯು.** ಮನು ಮೊದಲಾದ ಸ್ಮೃತಿಕಾರರು ವೇದಜ್ಞರು. ಅದರಿಂದಲೇ ಅವರ ವಚನವು **ಧರ್ಮವು.** ವೇದವೇ ಮೂಲವಾದುದರಿಂದ ಸ್ಮೃತಿಗಳಿಗೆ ಪ್ರಾಮಾಣ್ಯವು—ಸ್ಮೃತಿಗೆ ಪ್ರಮಾಣ ಪ್ರಣಾಳಿಯಲ್ಲಿ ದ್ವಿತೀಯಸ್ಥಾನವು. ವೇದಕ್ಕೆ ಪ್ರಥಮಸ್ಥಾನವು. **ಶೀಲವೆಂದರೆ—**

---

33 ಋಷಯೋ ಮಂತ್ರದ್ರಷ್ಟಾರಃ । ತಥಾ ಅತೀಂದ್ರಿಯಸ್ಯ ವೇದಸ್ಯ ಪರಮೇಶ್ವರಾನುಗ್ರಹೇಣಪ್ರಥಮತೋದರ್ಶನಾತ್ ಋಷಿತ್ವಂ ॥ಇತಿಭಾಷ್ಯೆ॥
ಯುಗಾಂತೇಽಂತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ। ಲೇಭಿರೇ ತಪಸಾ ಪೂರ್ವಮನುಜ್ಞಾತಾ ಸ್ವಯಂಭುವಾ ॥ಇತಿಸ್ಮರಣಾತ್॥

34 ಶ್ರುತಿಸ್ತು 'ವೇದೋ ವಿಜ್ಞೇಯೋ ಧರ್ಮಶಾಸ್ತ್ರಂ ತು ವೈ ಸ್ಮೃತಿಃ । ತೇಸರ್ವಾರ್ಥೇಷ್ವಮೀಮಾಂಸ್ಯೇ ತಾಭ್ಯಾಂ ಧರ್ಮೋ ಹಿ ನಿರ್ಬಭೌ ॥ಮನು-ii-೧೦॥

35 ತದ್ವಚನಾದಾಮ್ನಾಯಸ್ಯ ಪ್ರಾಮಾಣ್ಯಂ ॥ವೈ. ದ,-ಅ. ೧, ಆ. ೧, ಸೂ. ೩॥

36 ವೈದಿಕಮೀಶ್ವರೋಕ್ತತ್ವಾತ್ ಸರ್ವಮೇವ ಪ್ರಮಾಣಂ ॥ತರ್ಕಸಂಗ್ರಹ॥

ಶುದ್ಧಚಾರಿತ್ರವು.[37] ಇದನ್ನೇ ಮನುವೂ ಯಾಜ್ಞವಲ್ಕ್ಯರೂ ಸದಾಚಾರವೆಂದಿರುವುದು. ಸದಾಚಾರವೆಂದರೆ ಶಿಷ್ಟಾಚಾರವು, ವೇದತತ್ತ್ವಾರ್ಥಜ್ಞರು ಒಂದೇ ಸಮವಾಗಿ ಅನುಷ್ಠಾನದಲ್ಲಿಟ್ಟುಕೊಂಡಿರುವುದು ಅದಕ್ಕೇ ಮನುವು ವೇದಜ್ಞರ ಶೀಲ[38] ವೆಂದು ಹೇಳುವುದು ಪ್ರಮಾಣಪ್ರಣಾಲಿಯಲ್ಲಿ ಶೀಲ ಅಥವಾ ಸದಾಚಾರಕ್ಕೆ ತೃತೀಯ ಸ್ಥಾನವನ್ನು ಕಲ್ಪಿಸಿರುತ್ತಾರೆ. ಆಮೇಲೆ **ಆತ್ಮಸಂತುಷ್ಟಿಯೂ** ಪ್ರಮಾಣವು **ಸಮೀಚೀನವಾದ ಸಂಕಲ್ಪದಿಂದ ಹುಟ್ಟಿದ ಕಾಮವೂ** ಪ್ರಮಾಣವೆಂದು ಐದನೆಯದೊಂದನ್ನು ಯಾಜ್ಞವಲ್ಕ್ಯರು ಹೆಚ್ಚಾಗಿ ಹೇಳಿದ್ದಾರೆ. ಈ ಕ್ರಮವ್ಯವಸ್ಥೆಯ ಅಭಿಪ್ರಾಯವೇನೆಂದರೆ ಪೂರ್ವಪೂರ್ವೋಕ್ತವಾದವುಗಳಿಗೆ ಪರಪರೋಕ್ತವಾದವುಗಳಿಗಿಂತ ಹೆಚ್ಚು ಪ್ರಾಶಸ್ತ್ಯವೆನ್ನುವುದು. ವೇದದಲ್ಲಿ ಪರಸ್ಪರ ವಿರುದ್ಧವಾದ ವಚನಗಳು—"ಉದಿತೇಹೋತವ್ಯಂ" = ಸೂರ್ಯೋದಯವಾದಮೇಲೆ ಹೋಮವನ್ನು ಮಾಡಬೇಕು, "ಅನುದಿತೇಹೋತವ್ಯಂ" = ಸೂರ್ಯೋದಯಕ್ಕೆ ಮೊದಲು ಹೋಮವನ್ನು ಮಾಡುವುದು, ಎಂಬಂತೆ ಇದ್ದರೆ ಎರಡೂ ಪ್ರಮಾಣಗಳೇ.[39] ಪರಸ್ಪರ ವಿರುದ್ಧವಾದ ಕಾಲನಿರ್ವಚನಗಳು ವಿಕಲ್ಪವು. ಎರಡು ಕಾಲದಲ್ಲಿ ಯಾವುದರಲ್ಲಿ ಬೇಕಾದರೂ ಹೋಮವನ್ನು ಮಾಡಬಹುದು. ವೇದವಿರುದ್ಧವಾದ ಸ್ಮೃತಿ ವಚನವಿದ್ದರೆ ಅದು ಪ್ರಮಾಣವಲ್ಲ. ಶ್ರುತಿವಚನದಂತೆಯೇ ನಡೆಯಬೇಕು. ಶ್ರುತಿಗೆ ವಿರೋಧವಲ್ಲದ ಸ್ಮೃತಿವಚನವಿದ್ದರೆ ಅಂಥಾದ್ದನ್ನು ಶ್ರುತಿವಚನವನ್ನು ಪರಿಪಾಲಿಸುವಂತೆಯೇ ಪಾಲಿಸಬೇಕು.[40] ಸ್ಮೃತಿಯಲ್ಲೂ ವಿಕಲ್ಪಗಳಿರುತ್ತವೆ. ಶ್ರುತಿಸ್ಮೃತಿಗಳ ಅನಂತರ ಶೀಲ ಅಥವಾ ಸದಾಚಾರವನ್ನು ಹೇಳಿರುವುದು ಶ್ರುತಿ ಸ್ಮೃತಿಗಳಿಗೆ ವಿರುದ್ಧವಾದ ಶೀಲವು ಗ್ರಾಹ್ಯವು, ವಿರುದ್ಧವಾದುದಲ್ಲ ಎನ್ನುವುದಕ್ಕೆ. ಅವಿರುದ್ಧವಾದ ಶೀಲವು ಯಾವಾಗ ಪ್ರಮಾಣವೆಂದರೆ ಕರ್ಮಗಳಲ್ಲಾಗಲೀ ವೃತ್ತ ಅಥವಾ ಚಾರಿತ್ರದಲ್ಲಾಗಲೀ ಸಂಶಯವು ಪ್ರಾಪ್ತವಾದರೆ ಆಗ ಶಿಷ್ಟಾಚಾರವು ಪ್ರಮಾಣವು.[41] ನಾಲ್ಕನೆಯದು ಆತ್ಮಸಂತುಷ್ಟಿಯು. ಮೊದಲಣ ಮೂರಕ್ಕೂ

---

37 ಶುಚೌ ತು ಚರಿತೇ ಶೀಲಂ ॥ಅಮರ॥
ಬ್ರಹ್ಮಣ್ಯತಾ, ದೇವಪಿತೃಭಕ್ತತಾ, ಸೌಮ್ಯತಾ, ಅಪರೋಪತಾಪಿತಾ, ಅನಸೂಯತಾ, ಮೃದುತಾ, ಅಪಾರುಷ್ಯಂ, ಮೈತ್ರತಾ, ಪ್ರಿಯವಾದಿತ್ವಂ, ಕೃತಜ್ಞತಾ, ಶರಣ್ಯತಾ, ಕಾರುಣ್ಯಂ, ಪ್ರಶಾಂತಿಶ್ಚೇತಿ, ತ್ರಯೋದಶ ವಿಧಂ ಶೀಲಂ ॥ಹಾರೀತಃ॥

38 (ಸ್ಮೃತಿ) ಶೀಲೇಚತದ್ವಿದಾಂ ॥ಮ-1i-೬॥

39 ಶ್ರುತಿದ್ವೈಧಂ ತು ಯತ್ರ ಸ್ಯಾತ್ತತ್ರ ಧರ್ಮಾವು ಭೌ ಸ್ಮೃತೌ ॥ಮ-11-೧೪॥

40 ಶ್ರುತಿಸ್ಮೃತಿವಿರೋಧೇತು ಶ್ರುತಿರೇವ ಗರೀಯಸೀ । ಅವಿರೋಧೇ ಸದಾ ಕಾರ್ಯಂ ಸ್ಮಾರ್ತಂ ವೈದಿಕವತ್ಸದಾ ॥ಜಾಬಾಲಿ॥

41 ಅಥ ಯದಿ ತೇ ಕರ್ಮ ವಿಚಿಕಿತ್ಸಾವಾ ವೃತ್ತ ವಿಚಿಕಿತ್ಸಾವಾ ಸ್ಯಾತ್ । ಯೇ ತತ್ರ ಬ್ರಾಹ್ಮಣಾ ಸ್ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಸ್ಯುಃ। ಯಥಾ ತೇ ತತ್ರ ವರ್ತೇರನ್ । ತಥಾ ತತ್ರ ವರ್ತೇಥಾಃ ॥ತೈ-ಆ. ಶಿಕ್ಷಾವಲ್ಲಿ॥

ಅವಿರುದ್ಧವಾದ ವೈಕಲ್ಪಿಕ ವಚನಗಳು ಇದ್ದರೆ ಆಗ ಆತ್ಮಸಂತುಷ್ಟಿಯೇ ಪ್ರಮಾಣವು. ಅಂದರೆ ತಮಗೆ ಯಾವುದು ಇಷ್ಟವೋ ಅದನ್ನು ಮಾಡಬಹುದು. ಉದಾಹರಣೆಗಾಗಿ ಗರ್ಭಾಷ್ಟಮ (ಅಂದರೆ ಗರ್ಭೋತ್ಪತ್ತಿಕಾಲದಿಂದ ಎಂಟನೆಯ) ವರ್ಷದಲ್ಲಾಗಲೀ ಅಷ್ಟಮ (ಜನನ ಕಾಲದಿಂದ ಎಂಟನೆಯ) ವರ್ಷದಲ್ಲಾಗಲೀ ಉಪನಯನವನ್ನು ಮಾಡುವುದು ಎಂದೆರಡು ವಚನಗಳಿವೆ[42] ಅವು ವಿಕಲ್ಪವಾದುದರಿಂದ ತಮಗೆ ಯಾವುದು ಇಷ್ಟವೋ ಅದೇ ಗ್ರಾಹ್ಯವು. ಯಾಜ್ಞವಲ್ಕ್ಯರ ಐದನೆಯ ಪ್ರಮಾಣವು ಮೊದಲನೆಯ ನಾಲ್ಕಕ್ಕೆ ವಿರೋಧವಾಗಿರಬಾರದು. "ನಾನು ಊಟದ ಕಾಲದಲ್ಲಿಯೇ ನೀರು ಕುಡಿಯುವುದು, ಆಮೇಲೆ ಕುಡಿಯುವುದಿಲ್ಲ" ಇತ್ಯಾದಿ ಸಂಕಲ್ಪದಿಂದ ಜನಿಸುವ ಕಾಮವೂ ಮಾನ್ಯವೇ. ಹೀಗೆ ಧರ್ಮಕ್ಕೆ ಶ್ರುತಿಸ್ಮೃತಿಗಳು ಪ್ರಮಾಣಗಳು. ಸದಾಚಾರವು ಆದರ್ಶವು[43] ಆತ್ಮಸಂತುಷ್ಟಿಯು ಒರೆಗಲ್ಲು. ಧರ್ಮಾವಿರುದ್ಧವಾದ ಕಾಮವು ವ್ಯಕ್ತಿಸ್ವಾತಂತ್ರ್ಯವು. ಎಲ್ಲವೂ ಪ್ರಮಾಣಗಳೇ. ಹೀಗೆ ಪ್ರಮಾಣಗಳನ್ನು ವಿಚಾರಮಾಡಿ ವರ್ತಿಸಬೇಕು ಎಂಬುದೇ ಸಾರಾಂಶವು.



---

ತ್ರೈವಿದ್ಯವೃದ್ಧಾ ಯಂ ಬ್ರೂಯುರ್ಧರ್ಮಂ ಧರ್ಮವಿದೋ ಜನಾಃ । ಪವನೇ ಪಾವನೇ ಚೈವ ಸಧರ್ಮೋ ನಾತ್ರ ಸಂಶಯಃ ॥ವಸಿಷ್ಠಃ॥

42 ಗರ್ಭಾಷ್ಟಮೇಽಷ್ಟಮೇವಾಬ್ದೇ ಬ್ರಾಹ್ಮಣಸ್ಯೋಪನಾಯನಂ ॥ಯಾ-i-೧೪॥

43 ಶ್ರುತಿಸ್ಮೃತಿವಿಹಿತೋ ಧರ್ಮಃ । ತದಲಾಭೇ ಶಿಷ್ಟಾಚಾರಃ ಪ್ರಮಾಣಂ । ಶಿಷ್ಟಃ ಪುನರಕಾಮಾತ್ಮಾ । ಅಗೃಹ್ಯಮಾಣಕಾರಣೋ ಧರ್ಮಃ ॥ವಸಿಷ್ಠಃ॥

# ೨ನೆಯ ಪ್ರಕರಣ—ಧರ್ಮಶಾಸ್ತ್ರ

ಲೋಕದಲ್ಲಿ ಜನರು:ತಾತ್ಕಾಲಿಕವಾದ ಸುಖಕ್ಕೆ ಮರುಳಾಗುವುದೂ ಕಷ್ಟಕ್ಕೆ ಇಷ್ಟಪಡದಿರುವುದೂ ಸ್ವಾಭಾವಿಕವಾದುದು. ಹಾಗಾದರೆ ಪುಣ್ಯದಲ್ಲಿ ಜಿಹಾಸೆಯೂ ಪಾಪದಲ್ಲಿ ಆಸಕ್ತಿಯೂ ಕೂಡ ಸ್ವಾಭಾವಿಕವೇ ಎಂದರೆ—ಅದೂ ಅಲ್ಲ. ಪುಣ್ಯದ ಫಲವು ಸರ್ವರಿಗೂ ಇಷ್ಟವೇ—ಆದರೆ ಪುಣ್ಯಕಾರ್ಯದಲ್ಲಿ ಪ್ರವೃತ್ತರಾಗುವುದಿಲ್ಲ. ಪಾಪದ ಫಲವನ್ನು ಯಾರೂ ಅಪೇಕ್ಷಿಸುವುದಿಲ್ಲ—ಆದರೂ ಪಾಪವನ್ನೇನೋ ಮಾಡುತ್ತಾರೆ.[1] ಏಕೆ? ಜನರಿಗೆ ಸಾಮಾನ್ಯವಾಗಿ ಪಾಪಪುಣ್ಯಗಳ ಸ್ವರೂಪಜ್ಞಾನವಿರುವುದಿಲ್ಲ, ಪರಿಣಾಮಪರಿಜ್ಞಾನವಂತೂ ವಿರಳವೇ. ಇದರ ಮೇಲೆ ಪುಣ್ಯಕಾರ್ಯವು ಆರಂಭದಲ್ಲಿ ಕಷ್ಟವಾಗಿ ತೋರುವುದು, ಪಾಪಕಾರ್ಯವು ಆರಂಭದಲ್ಲಿ ಸುಖವಾಗಿ ಕಾಣುವುದು, ಇದೇ ಕಾರಣವು. ಇದರಿಂದಲೇ ಲೋಕವು ಅಧರ್ಮದಲ್ಲಿ ಪ್ರವರ್ತಿಸುವುದು. ಇಂಥಾ ಪರಿಸ್ಥಿತಿಯಲ್ಲಿ ಜನರು ತಪ್ಪುದಾರಿಗೆ ಬೀಳದಂತೆ ಅವರನ್ನು ಸನ್ಮಾರ್ಗಪ್ರವರ್ತಕರನ್ನಾಗಿ ಮಾಡಿ ತನ್ಮೂಲಕವಾಗಿ ಮಾನವಜೀವನಕ್ಕೇ ಸಂಸ್ಕಾರವನ್ನು ಕೊಟ್ಟು ಎಲ್ಲರನ್ನೂ ಧರ್ಮೈಕಪರಾಯಣರಾಗಿ ಮಾಡುವ ಸದುದ್ದೇಶದಿಂದ[2] ವೇದಾಧ್ಯಯನ ಸಂಪನ್ನರೂ ಜ್ಞಾನಿಗಳೂ ನಿಸ್ಸ್ಪೃಹರೂ ಆದ ಮಹರ್ಷಿಗಳು ಇದು ಕಾರ್ಯ, ಇದು ಅಕಾರ್ಯ, ಇದು ವಿಧಿ, ಇದು ನಿಷೇಧ, ಇದು ಪುಣ್ಯ, ಇದು ಪಾಪ, ಇದರಿಂದ ಶ್ರೇಯಸ್ಸು ಇದರಿಂದಲ್ಲ, ಇತ್ಯಾದಿಯಾಗಿ ತಮ್ಮ ನಿರ್ಮಲಾಂತಃಕರಣದಲ್ಲಿ ಪ್ರಸ್ಫುರಿತವಾದುದನ್ನು ಹೇಳಿರುವುದೇ ಧರ್ಮಶಾಸ್ತ್ರವು. ಧರ್ಮಶಾಸ್ತ್ರವೆಂದರೆ ಸ್ಮೃತಿಯು.[3] ದೈಹಿಕವ್ಯಾಪಾರಗಳು ಸತತವಾಗಿ ನಡೆಯುತ್ತಲೇ ಇರುತ್ತವೆ. ಕರ್ಮೇಂದ್ರಿಯಗಳೂ ಜ್ಞಾನೇಂದ್ರಿಯಗಳೂ ವಿಷಯಗಳಲ್ಲಿ ಆಸಕ್ತವಾಗಿದ್ದೇ ಇರುತ್ತವೆ. ಜನರೆಲ್ಲರೂ ರಾಗದ್ವೇಷೋಪಹತರಾಗಿ ಬಹಿಃಕರಣಗಳೂ ಅಂತಃಕರಣಗಳೂ ಯಾವ ಕಡೆಗೆಳೆದರೆ ಆ ಕಡೆಗೇ ಓಡುತ್ತಾರೆ. ಯಾವ ಕರ್ಮವನ್ನೂ ಮಾಡದೆ ಕ್ಷಣಮಾತ್ರವೂ ಸುಮ್ಮನಿರುವುದು ಜೀವಿ ಮಾತ್ರಕ್ಕೆ ಸಾಧ್ಯವಲ್ಲ.[4]

---

1 ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ । ನ ಪಾಪಫಲಮಿಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥

2 ಏವಂ ಸ ಭಗವಾನ್ ದೇವೋ ಲೋಕಾನಾಂ ಹಿತಕಾಮ್ಯಯಾ । ಧರ್ಮಸ್ಯ ಪರಮಂ ಗುಹ್ಯಂ ಮಮೇದಂ ಸರ್ವಮುಕ್ತವಾನ್ ॥ಮ-xii-೧೧೭॥

3 ಧರ್ಮಶಾಸ್ತ್ರಂ ತು ವೈ ಸ್ಮೃತಿಃ ॥ಮ-ii-೧೦॥

4 ನ ಹಿ ಕಶ್ಚಿತ್ಕ್ಷಣ ಮಪಿ ಜಾತು ತಿಷ್ಠತ್ಯಕರ್ಮಕೃತ್ । ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ಭ. ಗೀ.॥

ಅನಿವಾರ್ಯವಾಗಿ ನಡೆಯುವ ಪ್ರವೃತ್ತಿಯನ್ನು ಹೋದ ದಾರಿಗೇ ಬಿಟ್ಟರೆ ಕಾಮ ಕ್ರೋಧಗಳು ವ್ಯಕ್ತಿಯನ್ನು ಉಪಭೋಗದ ಕಡೆಗೆ ಎಳೆದುಕೊಂಡು ಹೋಗುತ್ತವೆ. ಆ ಕಾಮವೋ, ಉಪಭೋಗದಿಂದೆಂದಿಗೂ ಶಮನವಾಗುವುದಲ್ಲ; ತುಪ್ಪವನ್ನು ಸುರಿಯುತ್ತಾ ಹೋದಹಾಗೆಲ್ಲ ಅಗ್ನಿಯು ಹೇಗೆ ಹೆಚ್ಚು ಹೆಚ್ಚಾಗಿ ಪ್ರಜ್ವಲಿಸುತ್ತಾ ಹೋಗುವುದೋ ಹಾಗೆ, ಉಪಭೋಗದಿಂದ ಮತ್ತಷ್ಟು ವೃದ್ಧಿಯಾಗುತ್ತಾ ಹೋಗುತ್ತದೆ.[5] "ವಿಷಯಾಸಕ್ತಿಯಲ್ಲಿಯೇ ನನಗೆ ವರ್ಷಗಳು ಕಳೆದವು, ಆದರೂ ದಿನದಿನಕ್ಕೂ ಕಾಮೋಪಭೋಗದಲ್ಲಿ ತೃಷ್ಣೆಯು ಹೆಚ್ಚುತ್ತಲೇ ಇದೆ;"[6] "ಪೃಥ್ವಿಯಲ್ಲಿರುವ ಎಲ್ಲಾ ಧಾನ್ಯಗಳೂ ಎಲ್ಲಾ ಗೋಧನವೂ ಎಲ್ಲಾ ಸುವರ್ಣವೂ ಎಲ್ಲಾ ಸ್ತ್ರೀಯರೂ ಆದರೂ ಒಬ್ಬ ವ್ಯಕ್ತಿಯ ಆಸೆಗೇ ಸಾಕಾಗುವುದಿಲ್ಲ; ಆದಕಾರಣ ಅತ್ಯಾಶೆಯನ್ನು ವರ್ಜ್ಯಮಾಡಬೇಕು"[7] ಎಂಬುದು ಯಯಾತಿಯ ಅನುಭವದ ಮಾತು. ಅಷ್ಟೇ ಅಲ್ಲ, ಕಾಮವು ಮಹಾ ಪಾಪಿಯು.[8] ಅದರ ವಿಕಾರಗಳನ್ನು ಹೇಳಲೇ ಸಾಧ್ಯವಿಲ್ಲ; ಉಪಭೋಗಿಸುತ್ತಾ ಉಪಭೋಗಿಸುತ್ತಾ ಇನ್ನೂ ಇನ್ನೂ ಎಂದು ಲೋಭದಲ್ಲಿಯೂ, ಉಪಹತವಾದರೆ ಕ್ರೋಧದಲ್ಲಿಯೂ, ಕ್ರೋಧವು ಹೆಚ್ಚಿದರೆ ಮೋಹದಲ್ಲಿಯೂ, ಅಪಹೃತವಾದರೆ ಮಾತ್ಸರ್ಯದಲ್ಲಿಯೂ, ಹೆಚ್ಚಾಗಿ ಲಭಿಸಿದರೆ ಮದದಲ್ಲಿಯೂ, ಪರಿಣಮಿಸುತ್ತದೆ. ಇವೆಲ್ಲವೂ ಮಾನವನ ಶ್ರೇಯೋಭಿವೃದ್ಧಿಗೆ ಪ್ರತಿಬಂಧಕಗಳಾದ ಅರಿಷಡ್ವರ್ಗಗಳು, ಮಾನವನನ್ನು ಅಧೋಗತಿಗೆಳೆದು ಜೀವನವನ್ನೇ ಹಾಳುಮಾಡಿಬಿಡುತ್ತವೆ. ಆದುದರಿಂದ ಕಾಮದ ನಿರರ್ಗಳ ಪ್ರವೃತ್ತಿಯನ್ನು ಸರ್ವಥಾ ನಿಗ್ರಹಿಸಲೇಬೇಕು,[9] ನಿಂದಿತ ಕರ್ಮಗಳನ್ನು ವರ್ಜ್ಯಮಾಡಬೇಕು. ಬಂಧಕಗಳನ್ನು ಬಿಡಬೇಕು, ಅನಾಸಕ್ತಿಯಿಂದ ಕರ್ಮಗಳನ್ನು ಆಚರಿಸಬೇಕು; ಈಶ್ವರಪ್ರೀತಿಗಾಗಿ ಕರ್ಮಗಳನ್ನು ಮಾಡಬೇಕೇ ವಿನಾ ಫಲಪ್ರಾಪ್ತಿಗಾಗಿ ಮಾಡಬಾರದು.[10] ಶರೀರ ರಕ್ಷಣಾರ್ಥವಾಗಿಯೂ ಕುಟುಂಬ ಭರಣಾರ್ಥವಾಗಿಯೂ ಯಾವುದಾದರೊಂದು ವೃತ್ತಿಯನ್ನವಲಂಬಿಸಿ ಆರ್ಜನೆಯನ್ನು ಮಾಡಲೇಬೇಕಾದುದ

---

5 ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ಮ.ii-೯೪॥

6 ಪೂರ್ಣಂ ವರ್ಷಸಹಸ್ರಂ ಮೇ ವಿಷಯಾಸಕ್ತಚೇತಸಃ । ತಥಾಪ್ಯನುದಿನಂ ತೃಷ್ಣಾ ಯತ್ತೇಷ್ವೇವ ಹಿ ಜಾಯತೇ ॥ಯಯಾತಿಃ-ಮಹಾ-ಭಾ.॥

7 ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವ ಸ್ತ್ರಿಯಃ । ಏಕಸ್ಯಾಪಿ ನ ಪರ್ಯಾಪ್ತಂ ತದಿತ್ಯತಿ ತೃಷಂ ತ್ಯಜೇತ್ ॥ ಯಯಾತಿಃ-ವಿ-ಪು.॥

8 ಕಾಮ ಏಷ ಕ್ರೋಧ ಏಷಃ ರಜೋಗುಣಸಮುದ್ಭವಃ । ಮಹಾಶನೋ ಮಹಾಪಾಪ್ಮಾವಿದ್ಧ್ಯೇನಮಿಹ ವೈರಿಣಂ ॥ಭ.ಗೀ.॥

9 ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ ॥ಭ.ಗೀ.॥

10 ಯಜ್ಞಾರ್ಥಾತ್ಕರ್ಮಣೋನ್ಯತ್ರ ಲೋಕೋಯಂ ಕರ್ಮಬಂಧನಃ । ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಸ್ಸಮಾಚರ ॥ಭ.ಗೀ.॥.

ರಿಂದ ಅದನ್ನು ಧರ್ಮವಾಗಿಯೇ ಮಾಡಬೇಕು. ದೇಹಿಸಾಮಾನ್ಯಕ್ಕೆ ಕಾಮವನ್ನು ಸಂಪೂರ್ಣವಾಗಿ ತ್ಯಜಿಸುವುದು ಸಾಧ್ಯವೂ ಅಲ್ಲ, ಅನೇಕ ಸಂದರ್ಭಗಳಲ್ಲಿ ಸಾಧುವೂ ಅಲ್ಲ. ಆದುದರಿಂದ ಧರ್ಮಕ್ಕೆ ಅವಿರುದ್ಧವಾದ ಕಾಮದಲ್ಲಿ ಮಾತ್ರ, ಅದೂ ನಿಯತ ಕಾಲದಲ್ಲಿ, ನಿಯತರೂಪದಲ್ಲಿ, ನಡೆಯಬೇಕು. ಈ ಪ್ರಕಾರವಾಗಿ ಅನರ್ಥನಿವಾರಣೆಗೂ ಶ್ರೇಯೋವಾಪ್ತಿಗೂ ಸಾಧಕವಾದ ನಿಯಮಾವಳಿಗಳನ್ನು ಮಹರ್ಷಿಗಳು ಶ್ರುತ್ಯಾದಿಗಳ ಆಧಾರದಮೇಲೆ ರಚಿಸಿ ಅನುಗ್ರಹಿಸಿದ್ದಾರೆ. ಅದರಲ್ಲಿ ಅವರಿಗೆ ಯಾವ ಸ್ವಕಾರ್ಯವಾಗಲೀ ಸ್ವಾಮಿಕಾರ್ಯವಾಗಲೀ ಇಲ್ಲ, ದುರಾಶೆಯಾಗಲೀ ದುರಾಶಯವಾಗಲೀ ಇಲ್ಲ, ದುರಭಿಮಾನ ಕೃತ್ರಿಮಸಂಧಾನಗಳಂತೂ ಇಲ್ಲವೇ ಇಲ್ಲ. ಎರಡು ಮಾರ್ಗಗಳೊಡೆಯುವ ಸ್ಥಳದಲ್ಲಿ ನಿಂತ ಕೈಮರದಂತೆ ಇದು ಸನ್ಮಾರ್ಗ, ಇದು ದುರ್ಮಾರ್ಗ, ಎಂದು ಸೂಚಿಸುವುದು ಮಾತ್ರವೇ ಅಲ್ಲದೆ ಅನ್ಯಥಾ ಅಲ್ಲ. ರಾಜಶಾಸನದಂತೆ ಅದರಲ್ಲಿ ನಿರ್ಬಂಧವೇನೂ ಇಲ್ಲ. ಅದರಂತೆ ನಡೆದರೆ ಇಹದಲ್ಲಿ ಅಭೀಷ್ಟಾವಾಪ್ತಿರೂಪದ ಪ್ರತ್ಯಕ್ಷಫಲವೂ, ಪರದಲ್ಲಿ ಸುಖಾವಾಪ್ತಿರೂಪದ ಅಪ್ರತ್ಯಕ್ಷ ಫಲವೂ, ನಡೆಯದಿದ್ದರೆ ಅವಮತಿಯೂ ಅಪಕೀರ್ತಿಯೂ ದುರ್ಗತಿಯೂ ಪ್ರಾಪ್ತವಾಗುವುದೆಂದು ಉಕ್ತವಾಗಿದ್ದರೂ[11] ಅನುಷ್ಠಾನಮಾಡುವುದು ವ್ಯಕ್ತಿಯ ಐಚ್ಛಿಕಕ್ಕೇ ಬಿಟ್ಟಿರುವ ಆದೇಶವು, ಉಪದೇಶವು, ಅನುಶಾಸನವು, ಬೇಕಾದರೆ ಮಾಡಬಹುದು, ಬೇಡವಾದರೆ ಬಿಡಬಹುದು. ಸ್ಮೃತಿಕಾರರ ಮೇಲೂ ವ್ಯಾಖ್ಯಾನಕಾರರ ಮೇಲೂ ಮಾಡುವ ಆಕ್ಷೇಪದಲ್ಲಿ ತಿರುಳಿಲ್ಲ. ಅಂದರೆ ಶಾಸ್ತ್ರಕಾರರು ಬೇಕಾದರೆ ಮಾಡಬಹುದು ಬೇಡವಾದರೆ ಬಿಡಬಹುದು ಎಂದು ನಿಯಮಗಳನ್ನು ಮಾಡಿಟ್ಟಿದ್ದಾರೆಂದರ್ಥವಲ್ಲ. ಮಾಡಬೇಕಾದುದನ್ನು ಮಾಡಲೇಬೇಕು ಮಾಡಬಾರದುದನ್ನು ಮಾಡಲೇಬಾರದು ಎಂದೇ ಅವರು ಧರ್ಮವಚನಗಳನ್ನು ಹೇಳಿರುವುದು. ಶಾಸ್ತ್ರಕಾರರು ಯಥಾರ್ಥವಾದಿಗಳು, ಹಿತವನ್ನು ಬೋಧಿಸುವವರು, ಆಪ್ತರು, ಎಂದು ಭಾವಿಸಿ ಆಸ್ತಿಕರು ಅವರು ಹೇಳಿದಂತೆ ನಡೆದುಕೊಳ್ಳಬೇಕು. ನಡೆಯದಿದ್ದರೆ ರಾಜದಂಡದಂತೆ ಶಿಕ್ಷೆಯಿಲ್ಲ. ವಿಧ್ಯನಾಚರಣಕ್ಕೂ ನಿಷಿದ್ಧಾಚರಣಕ್ಕೂ ಪ್ರಾಯಶ್ಚಿತ್ತ

---

11 ತೇಷು ಸಮ್ಯಗ್ವರ್ತಮಾನೋ ಗಚ್ಛತ್ಯಮರಲೋಕತಾಂ । ಯಥಾ ಸಂಕಲ್ಪಿತಾಂಶ್ಚೇಹ ಸರ್ವಾನ್ ಕಾಮಾನ್ ಸಮಶ್ನುತೇ ॥೫॥ ಶ್ರುತಿಸ್ಮೃತ್ಯುದಿತಂ ಧರ್ಮಮನು ಶಿಷ್ಠನ್ ಹಿ ಮಾನವಃ । ಇಹ ಕೀರ್ತಿಮವಾಪ್ನೋತಿ ಪ್ರೇತ್ಯ ಚಾನುತ್ತಮಂ ಸುಖಂ ॥೯॥ ಮ-ii॥

ಇಂದ್ರಿಯಾಣಾಂ ಪ್ರಸಂಗೇನ ಧರ್ಮಸ್ಯಾಸೇವನೇನ ಚ । ಪಾಪಾನ್ ಸಂಯಾನ್ತಿ ಸಂಸಾರಾನವಿದ್ವಾಂಸೋ ನರಾಧಮಾಃ ॥೫೨॥ ತಾಮಿಸ್ರಾದಿಷು ಚೋಗ್ರೇಷು ನರಕೇಷು ವಿವರ್ತನಂ । ಅಸಿಪತ್ರವನಾದೀನಿ ಬಂಧನಚ್ಛೇದನಾನಿ ಚ ॥೭೫॥ ಬಂಧುಪ್ರಿಯವಿಯೋಗಾಂಶ್ಚ ಸಂವಾಸಂ ಚೈವ ದುರ್ಜನೈಃ। ದ್ರವ್ಯಾರ್ಜನಂ ಚ ನಾಶಂ ಚ ಮಿತ್ರಾಮಿತ್ರಸ್ಯ ಚಾರ್ಜನಂ ॥೭೯॥ ಜರಾಂ ಚೈವಾಪ್ರತೀಕಾರಾಂ ವ್ಯಾಧಿಭಿಶ್ಚೋಪಪೀಡನಂ । ಕ್ಲೇಶಾಂಶ್ಚ ವಿವಿಧಾನ್ ಸ್ತಾಂಸ್ತಾನ್ಮೃತ್ಯುಮೇವ ಚ ದುರ್ಜಯಂ ॥೮೦॥ ಮ-xii ॥

ಗಳನ್ನು ವಿಧಿಸಿದ್ದಾರೆ. ಆ ಪ್ರಾಯಶ್ಚಿತ್ತಗಳನ್ನೂ ತಾವಾಗಿ ತಾವು ಮಾಡಿಕೊಳ್ಳ ಬೇಕೇ ವಿನಾ ಅದನ್ನು ಮಾಡುವವರೂ ಬೇರೆಯವರಲ್ಲ. ನಿರ್ಬಂಧವು ಅವರಿಗೆ ಪ್ರಕೃತವಲ್ಲ. ಅಂತಶ್ಶುದ್ಧಿ ದ್ವಾರಾ ಆತ್ಮೋದ್ಧಾರವನ್ನು ಸಾಧಿಸಬೇಕೆಂಬುದೇ ಅವರ ಧ್ಯೇಯವು. ಉದಾಹರಣೆಗಾಗಿ "ನ ಸ್ತೇನ ನ್ಯಾಸ್ಯನ್ನವಾರ್ಧುಷೀ"[12] ಎಂಬ ಸ್ಮೃತಿ ವಚನವನ್ನೇ ವಿಮರ್ಶೆ ಮಾಡೋಣ: ಸ್ತೇಯವೂ (ಕಳ್ಳತನವೂ) ವೃದ್ಧಿ ಜೀವನವೂ (ಬಡ್ಡಿಯಿಂದ ಜೀವಿಸುವುದೂ) ಎರಡೂ ನಿಷಿದ್ಧವು. ಶಾಸ್ತ್ರಕಾರರ ದೃಷ್ಟಿಯಲ್ಲಿ ಎರಡೂ ನಿಂದ್ಯವು. ರಾಜಶಾಸನದ ದೃಷ್ಟಿಯಲ್ಲಿ ಸ್ತೇಯವು ನಿಷಿದ್ಧವು, ವೃದ್ಧಿ ಜೀವನವು ನಿಷಿದ್ಧವಲ್ಲ. ಶಾಸ್ತ್ರದೃಷ್ಟಿಯಲ್ಲಿಯೂ ರಾಜಕೀಯದಲ್ಲಿಯೂ ಸ್ತೇಯವು ನಿಷಿದ್ಧವಾದುದೇ ಆದರೂ ತತ್ತ್ವದಲ್ಲಿ ವ್ಯತ್ಯಾಸವಿದೆ. ಕಳ್ಳತನವನ್ನು ನಿಷೇಧಿಸುವ ರಾಜನೀತಿಯ ತತ್ತ್ವವು ಪರದ್ರೋಹವು, ಸಮಾಜದ ಸ್ಥಿತಿಗೆ ಭಂಗವನ್ನು ತರುವಂಥಾದ್ದು, ಎಂಬುದು; ಕಳ್ಳತನವನ್ನು ಮಾಡಿದರೆ ಕದ್ದುದನ್ನು ಹಿಂತಿರುಗಿಸಲೂ ಬೇಕು, ಜತೆಗೆ ಉಕ್ತರಾಜದಂಡಕ್ಕೆ ಗುರಿಯಾಗಲೂಬೇಕು ಎಂಬುದೇ ರಾಜನೀತಿಯ ಕಟ್ಟಳೆಯು. ಕಳ್ಳನ ಅಂತಶ್ಶುದ್ಧಿಗಾಗಿ ಶಿಕ್ಷೆಯೆಂದು ಪ್ರಧಾನೋದ್ದೇಶವಲ್ಲ, ಶಿಕ್ಷೆಯ ಭೀತಿಗೆ ಯಾರೂ ಕಳ್ಳತನವನ್ನು ಮಾಡದಿರಲೆಂಬುದೇ ಮುಖ್ಯೋದ್ದೇಶವು. ಶಾಸ್ತ್ರಕಾರರ ದೃಷ್ಟಿಯಲ್ಲಿ ಸ್ತೇಯವು ಪರದ್ರೋಹಮಾತ್ರವೇ ಅಲ್ಲ, ಆತ್ಮಾಪಕಾರವು, ಮಹಾಪಾತಕವು. ಆತ್ಮೋದ್ಧಾರಕ್ಕೂ, ಸ್ವಶ್ರೇಯಸ್ಸಿಗೂ, ಹಾನಿಕರವಾದ ದುರ್ವೃತ್ತವು. ದಂಡಭೀತಿಗಾಗಿ ವರ್ಜ್ಯವೆಂದಲ್ಲ, ಕಾರ್ಯವೇ ಅಕಾರ್ಯವು, ಅದರಿಂದಲೇ ಅದನ್ನು ಮಾಡಬಾರದು. ಸ್ತೇಯವು ಪ್ರಕಾಶವಾಗುವ ಸಂಭವವೇ ಇಲ್ಲದಿದ್ದರೂ ಅದನ್ನು ಮಾಡಕೂಡದು. ಅದಕ್ಕೆ ಸಾಕ್ಷ್ಯಂತರಾಪೇಕ್ಷೆಯೇ ಇಲ್ಲ, ಆತ್ಮಕ್ಕೆ ಆತ್ಮವೇ ಸಾಕ್ಷಿಯು. ಕೃಚ್ಛ್ರಪ್ರಾಯಶ್ಚಿತ್ತಗಳು ಉಕ್ತವಾಗಿರುವುದು ಪಾಪಕ್ಷಯಕ್ಕಾಗಿ, ಅಂತಶ್ಶುದ್ಧಿಗಾಗಿ. ಇದೇ ಧರ್ಮವಚನದ ವೈಶಿಷ್ಟ್ಯವು. ಸುಜನ ವ್ಯಕ್ತಿಗಳನ್ನೂ ಸಜ್ಜನ ಸಮಾಜವನ್ನೂ ರಚಿಸಿ ಲೋಕೋದ್ಧಾರವನ್ನು ಮಾಡುವುದೇ ಧರ್ಮಶಾಸ್ತ್ರದ ಉಚ್ಚ ಧ್ಯೇಯವು. ಇಂಥಾ ವಿಶಾಲವಾದ ಧ್ಯೇಯದ ಮೇಲೆ ರಚಿತವಾಗಿರುವ ಧರ್ಮಶಾಸ್ತ್ರವನ್ನು ಕೇವಲ ಮತಗ್ರಂಥವೆಂದಾಗಲೀ, ಪಂಥವೆಂದಾಗಲೀ, ತಂತ್ರವೆಂದಾಗಲೀ, ಆಗಮವೆಂದಾಗಲೀ, ಕರ್ಮಕಾಂಡವೆಂದಾಗಲೀ, ನ್ಯಾಯ(ಕಾನೂನು)ವೆಂದಾಗಲೀ, ಲಘುವಾಗೆಣಿಸುವುದು ಅಯುಕ್ತವು.

ನಮ್ಮ ಧರ್ಮವಚನಗಳು ಸರ್ವರಿಗೂ ಅನ್ವಯಿಸುವುದಲ್ಲ. ಐಶ್ವರ್ಯವು ಹಿಂದೆ ಲಭಿಸಲಿಲ್ಲವೆಂದು ತನ್ನನ್ನು ತಾನೇ ನಿಂದಿಸಿಕೊಳ್ಳಬಾರದು, ಜೀವಂತನಾಗಿದ್ದರೆ ಕಾಲಾನುಕಾಲಕ್ಕೆ ಐಶ್ವರ್ಯವು ಲಭಿಸಿಯೇ ಲಭಿಸುವುದೆಂಬ ಆಶೋತ್ತರವನ್ನು

12 ಯಾ-i-೧೪೨॥

ಇಟ್ಟುಕೊಂಡೇ ಪ್ರಯತ್ನವನ್ನು ಮಾಡುತ್ತಿರಬೇಕು, ದುರ್ಲಭವೆಂದು ಭಾವಿಸಿ ಪ್ರಯತ್ನಕ್ಕೆ ವಿಮುಖರಾಗಬಾರದು, ಸತ್ಯವನ್ನೇ ನುಡಿಯಬೇಕು, ಪ್ರಿಯವನ್ನೇ ಆಡಬೇಕು, ಅಪ್ರಿಯವಾದ ಸತ್ಯವನ್ನೂ ಆಡಬಾರದು, ಪ್ರಿಯವಾದರೂ ಅನೃತವನ್ನಾಡಬಾರದು, ಅಕಾರಣ ವೈರವನ್ನೂ, ಶುಷ್ಕವಿವಾದವನ್ನೂ, ವರ್ಜ್ಯಮಾಡಬೇಕು, ಪ್ರತ್ಯೂಷದಲ್ಲಿಯೂ, ಮಟ್ಟಮಧ್ಯಾಹ್ನದಲ್ಲಿಯೂ, ಪ್ರದೋಷ ಸಮಯದಲ್ಲಿಯೂ, ಅಪರಿಚಿತನ ಜತೆಯಲ್ಲಿ ಒಬ್ಬನೇ ಹೋಗಬಾರದು, ಅಂಗಹೀನರನ್ನೂ ಅಧಿಕಾಂಗರನ್ನೂ ಮೂಢರನ್ನೂ ವಯೋವೃದ್ಧರನ್ನೂ ಕುರೂಪಿಗಳನ್ನೂ ಧನಹೀನರನ್ನೂ ಹೀನಜಾತಿಯವರನ್ನೂ ಹಳಿಯಬಾರದು[13] ಮುಂತಾದ ನಿಯಮಗಳು ಮಾನವಜಾತಿಗೇ ಅನ್ವಯಿಸುವಂಥಾವುಗಳೇ ಆದರೂ ನಮ್ಮ ಸ್ಮೃತಿಕಾರರು ಅವುಗಳನ್ನು ಸರ್ವರಿಗೂ ವಿಧಿಸಿರುವುವೆಂದು ಹೇಳಿಲ್ಲ. ಇತರರೂ ಅಂಥಾ ನಿಯಮಗಳನ್ನೇ ಅನುಸರಿಸಿದರೆ ಅದು ಅವರವರ ಮತಾಚಾರ್ಯರೂ ಕೂಡ ಅಂಥಾ ನಿಯಮಗಳನ್ನೇ ವಿಧಿಸಿದ್ದರೆ ಆ ವಚನಗಳ ಪ್ರಮಾಣದ ಮೇಲೆಯೇ ವಿನಾ ಸ್ಮೃತಿವಾಕ್ಯಗಳಿಂದಲ್ಲ. ಅಂಥಾ ಸಮಾನ ನಿಯಮಗಳಲ್ಲದೆ ಬೇಕಾದಷ್ಟು ವಚನಗಳು ನಮ್ಮ ದೇಶದವರಿಗೆ ಮಾತ್ರವೇ ಹೇಳಿದವೂ ಇವೆ. ಉದಾರಣೆಗಾಗಿ ನದೀಹ್ರದಾದಿಗಳ ಜಲದಲ್ಲಿ ಅವಗಾಹನಸ್ನಾನವನ್ನು ಮಾಡಬೇಕು[14] ಎಂಬ ವಚನವನ್ನೇ ಪರಿಶೀಲಿಸೋಣ. ಈ ನಿಯಮವು ಶೀತದೇಶದಲ್ಲಿ ದುಸ್ಸಾಧ್ಯವಾದುದರಿಂದಲೂ ಮರುಪ್ರದೇಶದಲ್ಲಿ ಅಸಾಧ್ಯವಾದುದರಿಂದಲೂ ಅಂಥಾ ದೇಶಗಳಿಗೆ ಉಕ್ತವಲ್ಲವೆಂಬುದು ಸ್ವತಸ್ಸಿದ್ಧವು. ಧರ್ಮವಚನಗಳು ಕೃಷ್ಣಮೃಗವು ಸ್ವಾಭಾವಿಕವಾಗಿ ವಾಸಿಸುವ ಪ್ರದೇಶಕ್ಕೆ ಮಾತ್ರವೇ ಅನ್ವಯಿಸುವುವೆಂದು ವ್ಯಕ್ತವಾಗಿಯೇ ಹೇಳಿದ್ದಾರೆ.[15] ಅಂಥಾ ದೇಶವೇ ನಮ್ಮ ಭಾರತವು. ಧರ್ಮಗಳು ನಮ್ಮ ಭಾರತಕ್ಕೇ ಉಕ್ತವಾದುವು. ಭಾರತಕ್ಕೇ ಎಂದರೆ ಸಮಗ್ರ ಭಾರತಕ್ಕೆ ಎಂದರ್ಥವಲ್ಲ. ಇಲ್ಲೂ ಹಿಮವತ್ಪರ್ವತದ ಮೇಲೂ ರಾಜಾಸ್ಥಾನದ ಮರುಭೂಮಿಯಲ್ಲಿಯೂ ಶೀತೋದಕಸ್ನಾನವೂ ಅವಗಾಹನಸ್ನಾನವೂ ಸಾಧ್ಯವಲ್ಲ,

---

13 ನಾತ್ಮಾನ ಮವಮನ್ಯೇತ ಪೂರ್ವಾಭಿರಸಮೃದ್ಧಿಭಿಃ । ಆಮೃತ್ಯೋಃ ಶ್ರಿಯಮನ್ವಿಚ್ಛೇ ನ್ನೈನಾಂ ಮನ್ಯೇತ ದುರ್ಲಭಾಂ ॥೧೩೭॥ ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನ ಬ್ರೂಯಾತ್ಸತ್ಯಮಪ್ರಿಯಂ । ಪ್ರಿಯಂ ಚ ನಾನೃತಂ ಬ್ರೂಯಾ ದೇಷಧರ್ಮಸ್ಸನಾತನಃ ॥೧೩೮॥ ಶುಷ್ಕವೈರಂ ವಿವಾದಂ ಚ ನ ಕುರ್ಯಾತ್ಕೇನ ಚಿತ್ಸಹ ॥೧೩೯॥ ನಾತಿಕಲ್ಯಂ ನಾತಿಸಾಯಂ ನಾತಿಮಧ್ಯಂ ದಿನೇ ಸ್ಥಿತೇ । ನಾ ಜ್ಞಾತೇನ ಸಮಂ ಗಚ್ಛೇನ್ನೈಕೋ ನ ವೃಷಲೈಸ್ಸಹ ॥೧೪೦॥ ಹೀನಾಂಗಾನತಿರಿಕ್ತಾಂಗಾನ್ವಿದ್ಯಾಹೀನಾನ್ವಯೋಧಿಕಾನ್ । ರೂಪದ್ರವಿಣಹೀನಾಂಶ್ಚ ಜಾತಿ ಹೀನಾಂಶ್ಚ ನಾಕ್ಷಿಪೇತ್ ॥೧೪೧॥ ಮ-iv॥

14 ಸ್ನಾಯಾನ್ನದೀದೇವಖಾತ ಹ್ರದಪ್ರಸ್ರವಣೇಷು ಚ ॥ಯಾ-i-೧೫೯॥

15 ಯಸ್ಮಿನ್ ದೇಶೇ ಮೃಗಃ ಕೃಷ್ಣಸ್ತಸ್ಮಿನ್ ಧರ್ಮಾನ್ನಿಬೋಧತ ॥ಯಾ-i-೨॥

ಅದರಿಂದ ಅಲ್ಲಿಗೆ ಅನ್ವಯಿಸುವುದಿಲ್ಲ. ಹಾಗೆಯೇ ಬಹೂದಕಸ್ನಾನವು ಅನುದಕ ಪ್ರದೇಶಕ್ಕೂ ಸ್ವಲ್ಪೋದಕ ಪ್ರದೇಶಕ್ಕೂ ಉಕ್ತವಲ್ಲ. ನದೀಸ್ನಾನವು ನದೀತೀರವಾಸಿಗಳಿಗೆ ಮಾತ್ರವಲ್ಲದೆ ಇತರರಿಗೆ ಸಾಧ್ಯವಲ್ಲ. ಪ್ರಸ್ರವಣಸ್ನಾನವು ಪ್ರಸ್ರವಣಗಳಿರುವ ಗಿರಿದುರ್ಗ ಪ್ರದೇಶದ ನಿವಾಸಿಗಳಿಗಲ್ಲದೆ ಮೈದಾನದಲ್ಲಿರುವವರಿಗಲ್ಲ. ಬಹಿರ್ಗಮನಾದಿ ಶೌಚವಿಧಾನಗಳು ಗ್ರಾಮಾಂತರ ನಿವಾಸಿಗಳಿಗೆ ನಗರವಾಸಿಗಳಿಗಲ್ಲ, ಹೀಗೆಯೇ ಧರ್ಮಚನಗಳ ವ್ಯಾಪ್ತಿಯನ್ನು ಯಾವುದು ಯಾವ ಪ್ರದೇಶಕ್ಕೆ ಸಾಧ್ಯವು, ಎಂದು **ದೇಶವ್ಯವಸ್ಥೆ**ಯನ್ನು ಮೀಮಾಂಸಮಾಡಿಕೊಂಡು ಅನುಷ್ಠಾನ ಮಾಡಬೇಕು.

ಭಾರತಕ್ಕೆ ಅನ್ವಯಿಸುವುವು ಎಂದರೆ ಇಲ್ಲಿನ ನಿವಾಸಿಗಳೆಲ್ಲರಿಗೂ ಎಂದೂ ಅರ್ಥವಲ್ಲ. ಅನ್ಯದೇಶದಿಂದ ವಲಸೆ ಬಂದು ಇಲ್ಲಿ ನೆಲೆಸಿರುವವರಿಗಾಗಲೀ ಇಲ್ಲಿಯೇ ಹುಟ್ಟಿ ಬೆಳೆದ ಅನ್ಯಧರ್ಮಾವಲಂಬಿಗಳಿಗಾಗಲೀ ಈ ಧರ್ಮಗಳು ಉಕ್ತವಾಗಿಲ್ಲ. ಸನಾತನಿಗಳಿಗೆ ಮಾತ್ರವೇ ಉಕ್ತವಾಗಿವೆ. ಸನಾತನ ಧರ್ಮವನ್ನು ಒಪ್ಪದವರೂ ವಿರೋಧಿಸುವವರೂ ಸನಾತನಿಗಳೇ ಆದರೂ ಅಂಥಾವರಿಗೂ ನಿರ್ಬಂಧವಿಲ್ಲ, ಅಂಥಾವರು ನಟನೆ ಮಾಡಿ ವಿಧ್ಯಾಚಾರಿಗಳಾಗಬೇಕಾದುದಿಲ್ಲ.[16] ಆಸ್ತಿಕರಿಗೆ ಮಾತ್ರ ಧರ್ಮನಿಯಮಗಳು ಉಕ್ತವಾಗಿವೆ. ಆಸ್ತಿಕರೆಲ್ಲರಿಗೂ ಎಲ್ಲಾ ಧರ್ಮಗಳೂ ಉಕ್ತವಲ್ಲ. ವರ್ಣಾಶ್ರಮ ಧರ್ಮಗಳು ಆಯಾ ವರ್ಣದವರಿಗೂ ಆಶ್ರಮದವರಿಗೂ ಮಾತ್ರವೇ ಅನುಷ್ಠೇಯಗಳು. ಅವೂ ಸರ್ವಾವಸ್ಥೆಯಲ್ಲಿಯೂ ಅನುಷ್ಠೇಯಗಳಲ್ಲ. ಬಾಲಕರಿಗೂ ವೃದ್ಧರಿಗೂ ಆತುರರಿಗೂ ರೋಗಿಗಳಿಗೂ ಬಾಣಂತಿಯರಿಗೂ ಸ್ನಾನ ಭೋಜನಾದಿಗಳ ಕಟ್ಟುನಿಟ್ಟಿಲ್ಲ. ಅವಸ್ಥಾನುಗುಣವಾಗಿಯೂ ಶಕ್ತಿಸಾಮರ್ಥ್ಯಾನುಗುಣವಾಗಿಯೂ ಸಾಧ್ಯವಾದುದನ್ನು ಅನುಷ್ಠಾನವನ್ನು ಮಾಡಬೇಕೆಂಬುದೇ ವ್ಯವಸ್ಥೆಯು. ಹಾಗೆಯೇ ಮೂಗನಿಗೆ ವೇದಾದಿಗಳ ಅಧ್ಯಯನವೂ ಪ್ರವಚನವೂ ಸಂಧ್ಯಾವಂದನಾದಿ ಕರ್ಮಗಳೂ ಸಾಧ್ಯವಲ್ಲ. ನಿರ್ಗತಿಕನಿಗೆ ದಾನವು ಸಾಧ್ಯವಲ್ಲ. ಕ್ಷಾಮದಲ್ಲಿ ಅನ್ನದಾನವೂ ದೈವಿಕರಾಜಿಕೋಪದ್ರವಗಳ ಕಾಲದಲ್ಲಿ ಕಾಲಕಾಲಕ್ಕೆ ಸರಿಯಾಗಿ ನಿತ್ಯಕರ್ಮಗಳನ್ನು ಮಾಡುವುದೂ ತೀರ್ಥಯಾತ್ರಾದಿ ನೈಮಿತ್ತಿಕಗಳನ್ನು ಮಾಡುವುದೂ ಸಾಧ್ಯವಲ್ಲ. ಆದುದರಿಂದ ಸಾಧ್ಯಾಽಸಾಧ್ಯಗಳನ್ನೂ ಕಾಲಾಽಕಾಲಗಳನ್ನೂ ನಿರ್ಣಯಿಸಿಕೊಂಡು ಧರ್ಮವನ್ನಾಚರಿಸಬೇಕು. ಒಟ್ಟಿನಲ್ಲಿ ವಯಸ್ಸು ಕರ್ಮ, ಶಕ್ತಿ, ವಿದ್ಯೆ, ಕುಲ, ವೇಷ, ವಾಕ್ಕು, ಬುದ್ಧಿ, ಅವಸ್ಥೆ,

16 ಸಂಕಲ್ಪ ಮೂಲಃ ಕಾಮೋ ವೈ ಯಜ್ಞಾಃ ಸಂಕಲ್ಪಸಂಭವಾಃ । ವ್ರತಾನಿ ಯಮ ಧರ್ಮಾಶ್ಚ ಸರ್ವೇ ಸಂಕಲ್ಪಜಾಃ ಸ್ಮೃತಾಃ ॥೩॥ ಅಕಾಮಸ್ಯ ಕ್ರಿಯಾ ಕಾಚಿ ದ್ದೃಶ್ಯತೇ ನೇಹ ಕರ್ಹಿ ಚಿತ್ । ಯದ್ಯದ್ಧಿ ಕುರುತೇ ಕಿಂಚಿತ್ತತ್ತತ್ಕಾಮಸ್ಯ ಚೇಷ್ಟಿತಂ ॥೪॥ ಮ-11 ॥

ಮುಂತಾದವುಗಳಿಗನುಗುಣವಾಗಿ ನಿಯಮಗಳನ್ನು ವ್ಯವಸ್ಥೆ ಮಾಡಿಕೊಂಡು ಆಚರಿಸಬೇಕು.[17]

ಇನ್ನೂ ಅನೇಕ ಪ್ರಕಾರದ ಸಂದಿಗ್ಧತೆಗಳೂ ಒದಗುತ್ತವೆ. ಸ್ಮೃತಿಗಳೂ ಅನೇಕವಾಗಿವೆ, ಸ್ಮೃತಿವಚನಗಳೂ ಅನೇಕವಾಗಿವೆ, ಎಲ್ಲವೂ ಒಂದೇ ಸಮವಾಗಿಲ್ಲ—ಸಮವಾಗಿರುವುವೂ ಇವೆ, ವಿರುದ್ಧವಾಗಿರುವುವೂ ಇವೆ, ಸ್ಥೂಲವಾದುವೂ ಇವೆ, ಸೂಕ್ಷ್ಮವಾದುವೂ ಇವೆ, ಗಣವರ್ಗಗಳನ್ನು ನಿರ್ದೇಶಿಸುವುವೂ ಇವೆ, ವಿವರಗಳನ್ನು ಹೇಳುವುವೂ ಇವೆ, ಒಂದೇ ವಿಷಯದಲ್ಲಿ ಒಂದರಲ್ಲಿ ಒಂದನ್ನೂ ಇನ್ನೊಂದರಲ್ಲಿ ನ್ನೊಂದನ್ನೂ ಹೇಳಿರುವುವೂ ಇವೆ. ಇವುಗಳ ಇತ್ಯರ್ಥವು ಮೀಮಾಂಸಕ್ಕೆ ಸಂಬಂಧಪಟ್ಟುದು. ಮೀಮಾಂಸ ಮಾಡುವುದು ಅವರವರ ಬುದ್ಧಿಕುಶಲತೆಗೆ ಬಿಟ್ಟಿಲ್ಲ. ಅದಕ್ಕೆ ಮೀಮಾಂಸಾಶಾಸ್ತ್ರವೇ ಏರ್ಪಟ್ಟಿದೆ ಜೈಮಿನಿಗಳು ಪೂರ್ವಮೀಮಾಂಸವೆಂಬ ದರ್ಶನವನ್ನೇ ರಚಿಸಿಟ್ಟಿದ್ದಾರೆ. ಆ ಶಾಸ್ತ್ರದಲ್ಲಿ ಮೀಮಾಂಸ ಮಾಡುವ ನಿಯಮ ನಿಬಂಧನೆಗಳಿವೆ. ಧರ್ಮಶಾಸ್ತ್ರಕಾರರೂ ಮೀಮಾಂಸಾಶಾಸ್ತ್ರದಲ್ಲಿ ನಿಷ್ಣಾತರೇ. ಧರ್ಮವಚನಗಳನ್ನು ಆ ನಿಯಮಗಳ ಪ್ರಕಾರವೇ ಇತ್ಯರ್ಥ ಮಾಡಬೇಕು. ಅದರ ವಿಸ್ತಾರವು ಈ ಲೇಖಕ್ಕೆ ಪ್ರಕೃತವಿಲ್ಲ. ಸ್ಥೂಲವಾಗಿ ಒಂದೆರಡು ಮಾತು ಹೇಳಿದರೆ ಸಾಕು, ವಿಸ್ತಾರವನ್ನು ಶಾಸ್ತ್ರದಲ್ಲಿ ನೋಡಬಹುದು.

ಮೊದಲು ಮೀಮಾಂಸ ಮಾಡತಕ್ಕ ವಚನಗಳು ಯಾವುವೆಂದು ನಿರ್ಧಾರವಾಗಬೇಕು. ಶ್ರುತಿಸ್ಮೃತಿಗಳು ಮೀಮಾಂಸ್ಯಗಳಲ್ಲ. ಶ್ರುತಿಯು ಈಶ್ವರೋಕ್ತಿಯು. ಅದರ ಪ್ರಾಮಾಣ್ಯವು ಸ್ವತಸ್ಸಿದ್ಧ.[18] ಸ್ಮೃತಿಯು ವೇದವಲ್ಲದಿದ್ದರೂ ವೇದಜ್ಞರು ವೇದದ ಆಧಾರದ ಮೇಲೆಯೇ ಹೇಳಿದುದು, ಅದೂ ಪ್ರಮಾಣವೇ. ಶ್ರುತಿಸ್ಮೃತಿಗಳಿಂದಲೇ ಧರ್ಮವು ಪ್ರಕಾಶಕ್ಕೆ ಬಂದುದು. ಅದರಿಂದ ಅವೆರಡೂ ಮೀಮಾಂಸ್ಯವಲ್ಲ.[19] ಪ್ರಮಾಣಕ್ಕೆ ಪ್ರಮಾಣಾಂತರದ ಅಪೇಕ್ಷೆಯಿಲ್ಲ. ಹಾಗೆ ಹುಡುಕುತ್ತಾ ಹೋದರೆ ಆಕಾಂಕ್ಷೆಗೆ ಕೊನೆಯೇ ಇಲ್ಲ. ಹುಡುಕಿದರೂ ಕಡೆಗಾದರೂ ಯಾವುದಾದರೊಂದನ್ನು ಕೊನೆಯೆಂದು ಅದರಲ್ಲಿ ಶ್ರದ್ಧೆಯನ್ನಿಡಲೇಬೇಕಾಗುವುದು. ಇಡ

---

17 ವಯಸಃ ಕರ್ಮಣೋऽರ್ಥಸ್ಯ ಶ್ರುತಸ್ಯಾಭಿಜನಸ್ಯ ಚ। ವೇಷವಾಗ್ಬುದ್ಧಿಸಾರೂಪ್ಯಮಾಚರನ್ ವಿಚರೇದಿಹ ॥ಮ-iv-೧೮॥ ಏವಂ ಕರ್ಮಾದಿಷ್ವಪ್ಯನ್ವೇಯಂ ॥ಕುಲ್ಲೂಕಃ॥

ದೇಶೇ ಕಾಲ ಉಪಾಯೇನ ದ್ರವ್ಯಂ ಶ್ರದ್ಧಾ ಸಮನ್ವಿತಂ। ಪಾತ್ರೇ ಪ್ರದೀಯತೇ ಯತ್ತತ್ಸಕಲಂ ಧರ್ಮಲಕ್ಷಣಂ ॥ಯಾ-i-೬॥ ಸಕಲಮಿತಿ। ಅನ್ಯದಪಿ ಶಾಸ್ತ್ರೋಕ್ತಂ ಜಾತಿಗುಣಹೋಮಯಾಗಾದಿ ತತ್ಸಕಲಂ ಧರ್ಮಲಕ್ಷಣಂ। ತತ್ಸಕಲಂ ಸಮಸ್ತಂವ್ಯಸ್ತಂ ವಾ ಯಥಾಶಾಸ್ತ್ರಂ ದ್ರಷ್ಟವ್ಯಂ। ಶ್ರದ್ಧಾ ಸರ್ವತ್ರಾನು ವರ್ತತ ಏವ ॥ಮಿತಾಕ್ಷರ॥

18 ವೈದಿಕಂ ಈಶ್ವರೋಕ್ತಿತ್ವಾತ್ ಸರ್ವ ಏವ ಪ್ರಮಾಣಂ ॥

19 ಶ್ರುತಿಸ್ತು ವೇದೋ ವಿಜ್ಞೇಯೋ ಧರ್ಮಶಾಸ್ತ್ರಂ ತು ವೈ ಸ್ಮೃತಿಃ। ತೇ ಸರ್ವಾರ್ಥೇಷ್ವ ಮೀಮಾಂಸ್ಯೇ ತಾಭ್ಯಾಂ ಧರ್ಮೋ ಹಿ ನಿರ್ಬಭೌ ॥ಮ-ii-೧೦॥

ದಿದ್ದರೆ ಅನನ್ವಯಕ್ಕೇ ಇಟ್ಟುಕೊಳ್ಳುತ್ತದೆ. ಸಾಂಪ್ರದಾಯಿಕವಾಗಿಯೂ ತತ್ತ್ವಾತ್ಮಿಕವಾಗಿಯೂ ಶ್ರುತಿಸ್ಮೃತಿಗಳಲ್ಲಿ ಪ್ರಮಾಣಬುದ್ಧಿಯನ್ನಿಡುವುದು ಪ್ರಶಸ್ತವು. ಮೀಮಾಂಸದ ಕೆಲವು ನ್ಯಾಯಗಳನ್ನೇ ಇಲ್ಲಿ ಸೂಚಿಸಿದೆ.

ಶ್ರುತಿಸ್ಮೃತಿಗಳಲ್ಲುಕ್ತವಾದುವೆಲ್ಲವೂ ಧರ್ಮವೇ. ಎಲ್ಲವನ್ನೂ ಸಮನ್ವಯ ಮಾಡಿಕೊಳ್ಳಬೇಕು. ಎರಡು ಪರಸ್ಪರ ವಿರುದ್ಧವಾದ ವಚನಗಳಿದ್ದರೆ ವಿರೋಧವು ತೋರುವಿಕೆ ಮಾತ್ರವೇ, ಎರಡೂ ವಿಕಲ್ಪಗಳು[20] ಎಂದು ತಿಳಿಯಬೇಕು. "ಉದಿತೇಜುಹೋತಿ, ಅನುದಿತೇಜುಹೋತಿ" ಎಂಬ ಶ್ರುತಿವಚನಗಳನ್ನೂ, "ಅಷ್ಟಮೇವರ್ಷೇ ಗರ್ಭಾಷ್ಟಮೇವಾ ಉಪನಯೀತ" ಎಂಬ ಸ್ಮೃತಿವಚನಗಳನ್ನೂ ವಿಕಲ್ಪಗಳೆಂದು ಹಿಂದೆಯೇ ಸೂಚಿಸಿದೆ ಹಾಗೆಯೇ ಒಂದು ಕಡೆ ಸಾಮಾನ್ಯ ವಚನ[21] ವಿರುತ್ತದೆ, ಇನ್ನೊಂದು ಕಡೆ ವಿವರಣೆಯಿರುತ್ತದೆ ಒಂದು ಕಡೆ ಉತ್ಸರ್ಗ[22] ವಿರುತ್ತದೆ, ಮತ್ತೊಂದು ಕಡೆ ಅಪವಾದವಿರುತ್ತದೆ. ಕೆಲವು ಸಾಕಾಂಕ್ಷ[23] ವಚನಗಳೂ ಇರುತ್ತವೆ, ಆಕಾಂಕ್ಷೆಯನ್ನು ಬೇರೆ ವಚನಗಳಿಂದ ಪರಿಪೂರ್ಣ ಮಾಡಿಕೊಳ್ಳಬೇಕು. ಅನುಕ್ತವನ್ನು ಬೇರೆ ವಚನಗಳಿಂದ ಸಂಗ್ರಹಿಸಲೂಬೇಕಾಗುತ್ತದೆ. ವರ್ಗ[24] ಕ್ಕೆ ವ್ಯಕ್ತಿ[25] ನಿರ್ದೇಶವಿದ್ದರೆ ವ್ಯಕ್ತಿಯನ್ನು ವರ್ಗಕ್ಕೆ ಉಪಲಕ್ಷಣವೆಂದು ತಿಳಿಯಬೇಕಾಗುತ್ತದೆ. ಕೆಲವು ವಿಧಿ[26] ಯಾಗಿ ಮಾಡಲೇಬೇಕಾದವೂ ಇವೆ, ಕೆಲವು ಐಚ್ಛಿಕ[27] ವಾಗಿ ಮಾಡಬಹುದಾದವೂ ಇವೆ ಇಂಥಾವುಗಳನ್ನೆಲ್ಲ ನ್ಯಾಯಬದ್ಧವಾಗಿ ವಿಮರ್ಶಿಸಿ ವರ್ತಿಸಬೇಕು

ಧರ್ಮಶಾಸ್ತ್ರದಲ್ಲಿ ಪ್ರಯೋಗಿಸುವ ಪದಗಳಿಗೆ ಸಾಧ್ಯವಾದ ಮಟ್ಟಿಕ್ಕೂ ಪ್ರಸಿದ್ಧಾರ್ಥವನ್ನೇ ಮಾಡಬೇಕು[28] ಅಂಥಾ ಅರ್ಥವು ಕ್ರಮಕ್ಕೂ ಪ್ರಕೃತಕ್ಕೂ ಪ್ರಕರಣಕ್ಕೂ ಹೊಂದದ ಪಕ್ಷದಲ್ಲಿ ಅಪ್ರಸಿದ್ಧವೂ ಅಥವಾ ಪಾರಿಭಾಷಿಕವೂ[29] ಆದ

---

20 Alternatives; optionals. 21 General rule; e-g. ಸತ್ಯಂ ಬ್ರೂಯಾತ್, ಪ್ರಿಯಂ ಬ್ರೂಯಾತ್ । 22 Exception; e-g. ನಬ್ರೂಯಾತ್ ಸತ್ಯಮಪ್ರಿಯಂ, ಪ್ರಿಯಂ ಚ ನಾನೃತಂ ಬ್ರೂಯಾತ್ ।

23 Absence of a word to complete the sense. 24 Gems.

25 Species; e-g ಕಾಕೇಭ್ಯೋ ದಧಿ ರಕ್ಷತಾಂ, ಎಂಬಲ್ಲಿ ಕಾಕ = ಕಾಗೆ ಎಂದಿರುವುದು ಮೊಸರನ್ನು ಹಾಳುಮಾಡುವ ಎಲ್ಲಾ ಪ್ರಾಣಿವರ್ಗಕ್ಕೂ ಉಪಲಕ್ಷಣವು.

26 Obligatory rules. e-g ಅಹರಹಃಸಂಧ್ಯಾಮುಪಾಸೀತ.

27 Recommendatory e-g. ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ.

28 ಲೋಕೇ ಯೇಷ್ವರ್ಥೇಷು ಪ್ರಸಿದ್ಧಾನಿ ಪದಾನಿ ತಾನಿ ಸತಿ ಸಂಭವೇ ತದರ್ಥಾನ್ಯೇವ ಸೂತ್ರೇಷ್ವಿತಿ ಅವಗಂತವ್ಯಂ. ನಾಧ್ಯಾಹಾರಾದಿಭಿರೇತೇಷಾಂ ಪರಿಕಲ್ಪನೀಯೋರ್ಥಃ ಪಾರಿಭಾಷಿತ ವ್ಯೋವಾ ॥ಶಾಬರಭಾಷ್ಯ॥ (This is called the principle of Sruthi, [ಶ್ರುತಿ]) 29 ಸಾಂಕೇತಿಕ, Technical.

ಅರ್ಥವನ್ನು ಮಾಡಬೇಕು.[30] ಶಬ್ದಗಳಾಗಲೀ ವಾಕ್ಯಗಳಾಗಲೀ ಅಸಂಪೂರ್ಣವಾಗಿದ್ದರೆ ಅದನ್ನು ಅದೇ ಪ್ರಕರಣದಲ್ಲಿ ಉಕ್ತವಾದ ಅರ್ಥಕ್ಕೆ ಅನ್ವಯಿಸುವಂತೆ ಪೂರ್ಣಮಾಡಿಕೊಳ್ಳಬೇಕು.[31] ಸಾಧ್ಯವಾದ ಮಟ್ಟಕ್ಕೂ ಆನರ್ಥಕ್ಯವನ್ನೂ[32] ವೈಕಲ್ಪವನ್ನೂ[33] ಕಲ್ಪಿಸಬಾರದು. ವಚನಗಳನ್ನು ವಿಧಿನಿಷೇಧ[34] ಅರ್ಥವಾದ[35] ಗಳೆಂದೂ ಪ್ರಧಾನ[36] ಲಿಂಗ[37] ಗಳೆಂದೂ, ಮುಖ್ಯ[38] ಗೌಣ[39] ಗಳೆಂದೂ, ಗುರು[40] ಲಘು[41] ಗಳೆಂದೂ ಸಾಮಾನ್ಯ[42] ವಿಶೇಷ[43] ಗಳೆಂದೂ, ವಿಂಗಡಿಸಿಕೊಂಡು ನಡೆಯಬೇಕು. ಅಥವಾ ತಿಳಿದು ನಡೆಯುವವರ ನಡತೆಯಂತೆ ನಡೆಯಬೇಕು.[44]

ಮೀಮಾಂಸವನ್ನು ಮಾಡಿ ಮಾಡಿ ನಿರ್ಣಯಮಾಡಿಕೊಳ್ಳಬೇಕಾದುದು ಎಂಥಾ ಧರ್ಮ? ಧರ್ಮವಿಂಥಾದ್ದು ಎಂದು ವ್ಯವಸ್ಥೆಯೇ ಆಗಿಲ್ಲವೇ? ಅಂಥಾ ಅವ್ಯವಸ್ಥಿತವಾದ ಧರ್ಮದ ಚಿಂತೆಯಿಂದೇನೂ ಪ್ರಯೋಜನವಿಲ್ಲ. ಮೊದಲು ಧರ್ಮವೆಂಬುದೊಂದು ಇದೆಯೋ ಇಲ್ಲವೋ ಎಂಬುದೇ ಸಂದೇಹಾಸ್ಪದವಾಗಿದೆ. ಅದನ್ನು ಕಂಡವರಿಲ್ಲ. ಫಲವನ್ನು ವಿಮರ್ಶಿಸಿ ಅದರ ಅಸ್ತಿತ್ವವನ್ನು ಊಹಿಸೋಣವೆಂದರೆ ಅನುಭವವು ವಿರುದ್ಧವಾಗಿ ಕಂಡುಬರುತ್ತದೆ. ಧರ್ಮದ ಫಲವು ಅಭ್ಯುದಯವು ಶ್ರೇಯಸ್ಸು, ಅಧರ್ಮದ ಫಲವು ವಿನಾಶವು ತಾನೆ. ಶ್ರೀರಾಮಚಂದ್ರ ಯುಧಿಷ್ಠಿರಾದಿಗಳೂ ಜಾನಕೀ ದ್ರೌಪದ್ಯಾದಿಗಳೂ, ಧರ್ಮಜೀವಿಗಳಷ್ಟೆ. ಆದರೂ ಅವರು ಪಡಬಾರದ ಕಷ್ಟಗಳಿಗೊಳಗಾದರು. ರಾವಣ ದುರ್ಯೋಧನಾದಿಗಳು ಇರುವವರೆಗೂ ಯಥೇಷ್ಟವಾಗಿ ಸೌಖ್ಯವನ್ನನುಭವಿಸಿದರು. ಆಮೇಲೆ ವೀರಸ್ವರ್ಗಕ್ಕೆ ಹೋದರು. ಅಂದರೇನಾಯಿತು? ಧರ್ಮಿಷ್ಠರಿಗೆ ಅತಿಕ್ಲೇಶವೂ ಅಧರ್ಮಿಗಳಿಗೆ ಅಭ್ಯುದಯವೂ ಲಭಿಸಿತು ಎಂದಹಾಗಾಯಿತು. ಅಷ್ಟೇ ಅಲ್ಲ, ಧರ್ಮಾಚರಣೆಯಲ್ಲಿಯೂ ಕ್ಲೇಶವೇ, ಸುಖವಿಲ್ಲ ಹೀಗೆ ಧರ್ಮವು ಆಚರಣೆಯಲ್ಲಿಯೂ ಪರಿಣಾಮದಲ್ಲಿಯೂ ಕ್ಲೇಶದಾಯಕವೆಂದು ಹೇಳಬೇಕಾಯಿತು.[45] ಹೀಗೆ ಕ್ಲೇಶದಾಯಕ

---

30 This is known as the principle of Linga, (ಲಿಂಗ)

31 This is called the principle of Prakarana(ಪ್ರಕರಣ), context.

32 Meaninglessness, uselessness. 33 ಐಚ್ಛಿಕ – (optionals)

34 ವಿಧಿ is a positive mandatory rule. ನಿಷೇಧ is a negative mandatory rule. Both are obligatory. 35 Recommendatory rule. 36 Main rule. 37 Auxiliary rule. 38 Essential or primary rule 39 Secondary rule. 40 More important. 41 Less important. 42 General rule. 43 Special rule.

44 ಅಥಯದಿ ತೇ ಕರ್ಮವಿ ಚಿಕಿತ್ಸಾವಾ ವೃತ್ತ ವಿಚಿಕಿತ್ಸಾವಾ ಸ್ಯಾತ್। ಯೇತತ್ರ ಬ್ರಾಹ್ಮಣಾಃ ಸಂಮರ್ಶಿನಃ। ಯುಕ್ತಾ ಆ ಯುಕ್ತಾಃ। ಅಲೂಕ್ಷಾ ಧರ್ಮಕಾಮಾಃ ಸ್ಯುಃ। ಯಥಾ ತೇ ತತ್ರವರ್ತೇರನ್। ತಥಾ ತತ್ರವರ್ತೇಥಾಃ ॥ ತೈ.-ಉ. ಶಿಕ್ಷಾವಲ್ಲಿ॥

45 ಯಸ್ಮಾದರ್ಥಾ ವಿವರ್ತಂತೇ ಯೇಷ್ವಧರ್ಮಃ ಪ್ರತಿಷ್ಠಿತಃ। ಕ್ಲಿಶ್ಯಂತೇ ಧರ್ಮಶೀಲಾಶ್ಚ ತಸ್ಮಾದೇತೌ ನಿರರ್ಥಕೌ ॥ರಾ-ಯು.-ಕಾಂ-ಸ.೮೩॥

ವಾದುದನ್ನು ಧರ್ಮವೆನ್ನುವುದು ಸರಿಯಲ್ಲ, ಅಧರ್ಮವೆಂದೇ ಹೇಳಬೇಕಾಗುವುದು.[46] ಧರ್ಮದ ಫಲವು ತತ್ಕ್ಷಣವೇ ಪ್ರಾಪ್ತವಾಗುವುದೆಂಬ ನಿಯಮವಿಲ್ಲ. ಮುಂದೆಂದೋ ಆಗುವುದು, ಅಥವಾ ಇಹದಲ್ಲಲ್ಲದಿದ್ದರೆ ಪರದಲ್ಲಿಯೋ ಜನ್ಮಾಂತರದಲ್ಲಿಯೋ ಲಭಿಸಿಯೋ ಲಭಿಸುವುದು ಎಂದರೆ ಅದು ಸರ್ವಥಾ ನಂಬಲು ಅರ್ಹವಲ್ಲ. ಮೃಷ್ಟಾನ್ನವನ್ನು ಭೋಜನ ಮಾಡುವಾಗಲೇ ಅದರ ಮಾಧುರ್ಯದ ಅನುಭವವು, ಮುಂದೆ ಎಂದೋ ಅಲ್ಲ. ಪರಲೋಕವಿದೆಯೋ ಇಲ್ಲವೋ ಕಂಡವರಿಲ್ಲ,[47] ಇದ್ದರಲ್ಲಿ ಸುಖವಾಗುವುದೋ ಇಲ್ಲವೋ ಅದೂ ಗೊತ್ತಿಲ್ಲ. ಅಲ್ಲಿಗೆ ಹೋದವರು ಯಾರೂ ಹಿಂತಿರುಗಿ ಬಂದು ಹೇಳಿಲ್ಲ. ಜನ್ಮಾಂತರವಿದೆಯೆಂದೊಪ್ಪಲು ಜೀವವು ಪೂರ್ವದೇಹವನ್ನು ತ್ಯಜಿಸಿ ಬೇರೆ ದೇಹಕ್ಕೆ ಹೋಗುವುದನ್ನು ಯಾರೂ ನೋಡಿಯೇ ಇಲ್ಲ. ಅಂಥಾದ್ದರಲ್ಲಿ ಜನ್ಮಾಂತರವಾದವೆಂಥಾದ್ದು ? ಧರ್ಮಮಾರ್ಗದಲ್ಲಿ ಮೊದಲು ಕ್ಲೇಶ, ಆಮೇಲೆ ಸುಖ. ಅಧರ್ಮದಲ್ಲಿ ಮೊದಲು ಸುಖ ಪರಿಣಾಮದಲ್ಲಿ ಕ್ಲೇಶ ಎಂಬುದು ತಾನೆ ಧರ್ಮಾಚಾರ್ಯರ ವಾದ? ಧರ್ಮವೋ ಅಧರ್ಮವೋ ಅದರ ಚಿಂತೆಯನ್ನೇ ಬಿಟ್ಟು, ಹಸ್ತಗತವಾದ ಸೌಖ್ಯವನ್ನು ಅನುಭವಿಸಿಯೇ ಬಿಡೋಣ. ಮುಂದೆ ಇಹದಲ್ಲೋ ಪರದಲ್ಲೋ ಕಷ್ಟವು ಪ್ರಾಪ್ತವಾದರೆ ಆಗ ನೋಡಿಕೊಳ್ಳೋಣ. ಕರ್ತನೂ ಕರ್ಮವೂ ದ್ರವ್ಯವೂ ನಾಶವಾದಮೇಲೆ ಎಂದೋ ಧರ್ಮಾಚರಣದ ಫಲವು ಲಭಿಸುವುದೆಂಬ ವಾದವೇ ನಂಬಲರ್ಹವಲ್ಲ.[48] ಹಸ್ತಗತವಾದ ಸೌಖ್ಯವನ್ನು ತೊರೆದು ಮುಂದೆಂದೋ ಆಗುವುದೆಂಬ ಸುಖಕ್ಕೆ ಮರುಳಾಗುವುದು ವಿವೇಕವಲ್ಲ, ಆಶಾಮೋದಕಕ್ಕೆ ಕೈ ಒಡ್ಡುವುದು ಮೂರ್ಖತನವು.[49] ಜನ್ಮಾಂತರ ವಾದದಲ್ಲಿನ್ನೂ ಹೆಚ್ಚು ಪ್ರತಿಬಂಧಕವಿದೆ, ಏನೆಂದರೆ ಈ ಜನ್ಮದ ಧರ್ಮಾನುಷ್ಠಾನದ ಫಲವಾಗಿ ಲಭಿಸುವ ಸೌಖ್ಯವನ್ನು ಆ ಜನ್ಮದ ಧರ್ಮಾನುಷ್ಠಾನಕ್ಕಾಗಿ ಮತ್ತೆ ಕೈ ಬಿಡಬೇಕು, ಅದರಲ್ಲಿ

---

46 ತಸ್ಯ (ರಾವಣಸ್ಯ) ಚ ವ್ಯಸನಾಭಾವಾತ್ ವ್ಯಸನಂ ಚ ಗತೇ ತ್ವಯಿ (ರಾಮೇ)। ಧರ್ಮೋ ಭವತ್ಯಧರ್ಮಶ್ಚ ಪರಸ್ಪರವಿರೋಧಿನೌ ॥ರಾ-ಯು. ಕಾಂ-ಸ-೬೩॥

47 ಸ ನಾಸ್ತಿ ಪರಮಿತ್ಯೇವ ಕುರು ಬುದ್ಧಿಂ ಮಹಾಮತೇ ॥ರಾ-ಅಯೋ. ಕಾಂ.ಸ. ೧೦೮-ಜಾಬಾಲಿಃ॥ ನಾಸ್ತಿ ಪರಲೋಕಃ ॥ಪ್ರ. ಚಂ.-ಚಾರ್ವಾಕಃ॥

48 ಸ್ವರ್ಗಃ ಕರ್ತೃಕ್ರಿಯಾದ್ರವ್ಯವಿನಾಶೇ ಯದಿ ಯಜ್ವನಾಂ। ತತೋ ದಾವಾಗ್ನಿದಗ್ಧಾನಾಂ ಫಲಂ ಸ್ಯಾದ್ಭೂರಿ ಭೂರುಹಾಂ ॥ಪ್ರ.ಚಂ.-ಚಾರ್ವಾಕಃ॥

49 ಶಿಷ್ಯಃ-(ಚಾರ್ವಾಕಂಪ್ರತಿ) ಯದ್ಯೇಷ ಏವ ಪರಮಾರ್ಥಃ ಪುರುಷಸ್ಯ ಯತ್ಖಾದ್ಯತೇ ಪೀಯತೇ। ತರ್ಹಿ ಕಿಮಿತ್ಯೇತೈಸ್ತೀರ್ಥ್ಯೈಃ ಸಂಸಾರಸೌಖ್ಯಂ ಪರಿಹೃತ್ಯ ಆತ್ಮಾ ಘೋರಘೋರತರೈಃ ಪರಾಕಸಾಂತಪನ ಷಷ್ಠಕಾತ್ಮಾಶನ ಪ್ರಭೃತಿಭಿರ್ದುಃಖೈಃ ಕಸ್ಮಾತ್ಕ್ಲಿಶ್ಯತೇ ॥ ಚಾರ್ವಾಕಃ—ಧೂರ್ತಪ್ರಣೀತಾಗಮಪ್ರತಾರಿತಾನಾಮಾಶಾಮೋದಕೈರಿಯಂ ತೃಪ್ತಿರ್ಮೂರ್ಖಾಣಾಂ ॥ . ತ್ಯಾಜ್ಯಂ ಸುಖಂ ವಿಷಯಸಂಗಮಜನ್ಮ ಪುಂಸಾಂ ದುಃಖೋಪಸೃಷ್ಟಮಿತಿ ಮೂರ್ಖವಿಚಾರಣೈಷಾ। ವ್ರೀಹೀನ್ ಜಿಹಾಸತಿ ಸಿತೋತ್ತಮತಂಡುಲಾಢ್ಯಾನ್ ಕೋ ನಾಮ ಭೋಃ ತುಷಕಣೋಪಹಿತಾನ್ ಹಿತಾರ್ಥೀ ॥ಪ್ರ.ಚಂ.-ಚಾರ್ವಾಕಃ॥

"ಅಂತೂ ಇಂತೂ ಕುಂತೀ ಮಕ್ಕಳಿಗೆ ರಾಜ್ಯವಿಲ್ಲ"ವೆಂಬ ಗತಿಯೇ ವಿನಾ ಅನ್ಯಥಾ ಇಲ್ಲ. ಇದೆಲ್ಲ ನೋಡಿದರೆ ಧರ್ಮವಾದದಲ್ಲಿ ತಿರುಳಿಲ್ಲ. ಪ್ರತ್ಯಕ್ಷವನ್ನು ಕೈಬಿಡ ಬಾರದು, ಪರೋಕ್ಷಕ್ಕೆ ಕೈನೀಡಬಾರದು.[50] ಅರ್ಥಕಾಮಗಳೇ ಪುರುಷಾರ್ಥಗಳು.[51] ಮರಣವೇ ಮುಕ್ತಿಯು.[52] ತಿನ್ನುವ ಅನ್ನವನ್ನೂ ಅನುಭವಿಸುವ ಹೊನ್ನನ್ನೂ ಯಜ್ಞಾದಿ ಕರ್ಮಗಳಲ್ಲಿ ವಿನಿಯೋಗ ಮಾಡುವುದು ನಮ್ಮ ಸುಖಾನುಭವಕ್ಕೆ ಉಪ ದ್ರವವು.[53] ಯಜ್ಞಮಾಡು, ದಾನಮಾಡು, ತ್ಯಾಗಮಾಡು, ನೀನು ದೀಕ್ಷಿತನಾಗಿ ಅಕಿಂಚನನಾಗು ಇತ್ಯಾದಿ ಗ್ರಂಥಗಳನ್ನು ಮೇಧಾವಿಗಳೂ ಧೂರ್ತರೂ ಭಂಡರೂ ಮಾಡಿಟ್ಟಿರುವುದು[54] ಇತ್ಯಾದಿಯಾಗಿ ದೊಡ್ಡವರು ಹೇಳಿದ್ದಾರೆ. ಅದೇ ಅನುಭವ ಸಿದ್ಧವಾದ ಮಾತು, ಅದೇ ನಂಬಲರ್ಹವಾದುದು, ಧರ್ಮಕ್ಕಾಗಿ ಶ್ರಮಿಸೆವು, ಎಂದಾಕ್ಷೇಪಿಸಬಹುದು. ಅಂಥಾವು ಹೊಸದೇನೂ ಅಲ್ಲ.

ಅಂದರೆ ಹಾಗಲ್ಲ. ಈ ವಿಧದ ವಾದವು ನಾಸ್ತಿಕವಾದ ಮಾತ್ರವೇ ಅಲ್ಲ. ನ್ಯಾಯಕ್ಕೂ ವಾಸ್ತವಕ್ಕೂ ವಿರುದ್ಧವಾದುದು. ಧರ್ಮದ ವಿಷಯದಲ್ಲಿ ಮಾತ್ರವೇ ಅಲ್ಲ, ಎಲ್ಲಾ ವ್ಯವಹಾರಗಳಲ್ಲಿಯೂ ಫಲಪ್ರಾಪ್ತಿಯ ವಿಷಯದಲ್ಲಿ ನಂಬಿಕೆಯೂ ವಿಶ್ವಾಸವೂ ಇದ್ದೇ ಇದೆ. ಫಲಪ್ರಾಪ್ತಿಯು ಖಂಡಿತವೆಂದು ತಿಳಿದುಕೊಂಡೇ ಪ್ರವರ್ತಿಸುವುದಿಲ್ಲ. ಪ್ರಯತ್ನದೊಡನೆಯೇ ಪ್ರಾಪ್ತಿಯೂ ಆಗುವುದಿಲ್ಲ. ಎಲ್ಲರೂ ಫಲವು ಪ್ರಾಪ್ತವಾಗುವುದೆಂಬ ಆಶೋತ್ತರದಿಂದಲೇ ಪ್ರಯತ್ನವನ್ನು ಮಾಡುವುದು, ಮುಂದೆಂದೋ ಆಗುವುದೆಂದೇ ಕಾಲವನ್ನು ನಿರೀಕ್ಷಿಸುವುದು. ಆಶೋತ್ತರಗಳೆಲ್ಲವೂ ನೆರವೇರುವುದೂ ಇಲ್ಲ, ಕಾಲವನ್ನು ನಿರೀಕ್ಷಿಸುವವರೆಲ್ಲರೂ ಅಮರ್ತ್ಯರೂ ಅಲ್ಲ. ಬಿತ್ತಿದುದೆಲ್ಲವೂ ಹುಟ್ಟುವುದಿಲ್ಲ, ಹುಟ್ಟಿದುದೆಲ್ಲವೂ ಬೆಳೆಯುವುದಿಲ್ಲ, ಬೆಳೆದುದೆಲ್ಲವೂ ಫಲಿಸುವುದಿಲ್ಲ, ಫಲಿಸಿದುದೆಲ್ಲವೂ ಹಸ್ತಗತವಾಗುವುದಿಲ್ಲ, ಹಸ್ತಗತವಾದುದೆಲ್ಲವೂ ನಮ್ಮ ಹೊಟ್ಟೆಗೇ ಹೋಗುವುದಿಲ್ಲ, ಹೊಟ್ಟೆಗೆ ಹೋದುದೆಲ್ಲವೂ ಜೀರ್ಣಿಸುವುದೂ ಇಲ್ಲ. ಹಾಗೆಂದು ಬಿತ್ತದೆ ಇರುವುದಿಲ್ಲ. ಸಾಲವನ್ನು ಮಾಡಿದ ತುಪ್ಪವನ್ನು ಕುಡಿದ, ಪರಸ್ವವನ್ನಪಹರಿಸಿದ ಸುಖವನ್ನು ಉಪಭೋಗಿಸಿದ ! ಎಂಬುದು ಸರಾಗದ ಮಾತು, ಕಾರ್ಯವು ಸರಾಗವಲ್ಲ. ಸಾಲವನ್ನು ಕೊಡುವವನೇನೂ ಬುದ್ಧಿಹೀನನಲ್ಲ.

---

50 ಪ್ರತ್ಯಕ್ಷಂಯತ್ತದಾತಿಷ್ಠ ಪರೋಕ್ಷಂ ಪೃಷ್ಠತಃ ಕುರು ॥ ರಾ.-ಅಯೋ-ಕಾಂ-ಸ. ೧೦೮-ಜಾಬಾಲಿಃ॥ 51 ಅರ್ಥಕಾಮೌ ಪುರುಷಾರ್ಥೌ ॥ ಪ್ರ. ಚಂ.॥

52 ಮೃತ್ಯುರೇವಾಪವರ್ಗಂ ॥ ಪ್ರ. ಚಂ.॥

53 ಅಷ್ಟಕಾಪಿತೃದೈವತ್ಯಮಿತ್ಯಯಂ ಪ್ರಸೃತೋ ಜನಃ । ಅನ್ನಸ್ಯೋಪದ್ರವಂ ಪಶ್ಯ ಮೃತೋ ಹಿ ಕಿಮಶಿಷ್ಯತಿ ॥ ರಾ-ಅ. ಕಾಂ-ಸ. ೧೦೮ ಜಾಬಾಲಿಃ॥

54 ದಾನಸಂವನನಾ ಹ್ಯೇತೇ ಗ್ರಂಥಾಮೇಧಾವಿಭಿಃ ಕೃತಾಃ। ಯಜಸ್ವ ದೇಹಿ ದೀಕ್ಷಸ್ವ ತಪಸ್ತಪ್ಯಸ್ವ ಸಂತ್ಯಜ ॥.... ಧೂರ್ತಪ್ರಣೀತಾಗಮಪ್ರತಾರಿತಾನಾಮಾಶಾಮೋದಕೈರಿಯಂ ತೃಪ್ತಿರ್ಮೂರ್ಖಾಣಾಂ ॥ ಪ್ರ. ಚಂ.- ಚಾರ್ವಾಕಃ॥
ತ್ರಯೋ ವೇದಸ್ಯ ಕರ್ತಾರೋ ಭಂಡಧೂರ್ತನಿಶಾಚರಾಃ ॥ ಸರ್ವದರ್ಶನ ಸಂಗ್ರಹ॥

ಕೊಟ್ಟಿದನ್ನು ವೃದ್ಧಿಸಹಿತವಾಗಿ ಬರಮಾಡಿಕೊಳ್ಳಲು ತಕ್ಕ ವ್ಯವಸ್ಥೆಯನ್ನು ಮಾಡಿಕೊಂಡೇ ಸಾಲವನ್ನು ಕೊಡುತ್ತಾನೆ. ಸ್ವತ್ತಿಗೆ ಸ್ವಾಮಿಯಾದವನು ತನ್ನ ಸ್ವತ್ತನ್ನು ರಕ್ಷಿಸಿಕೊಳ್ಳಲು ತಕ್ಕ ಪೌರುಷವಂತನೂ ಸಹಾಯವಂತನೂ ಆಗಿರುತ್ತಾನೆ. ಪರಸ್ವವನ್ನಪಹರಿಸುವುದಕ್ಕೆ ಹೋಗುವುದು ಅಪಾಯ. ಪಾಪವೇ ಇಲ್ಲ, ಬೇಕಾದುದನ್ನು ಮಾಡುತ್ತೇನೆ ಅಂದರೆ, ಪಾಪವು ಆತ್ಮಾಪಕಾರದಲ್ಲಿ ಮಾತ್ರವೇ ಪರಿಸಮಾಪ್ತಿಯಾಗುವವರೆಗೂ ನಡೆದರೆ ನಡೆಯಬಹುದು, ಆದರಿಂದ ಇತರರಿಗೆ ಅಪಕಾರವೂ ಅಪಚಾರವೂ ಸಂಭವಿಸುವುದಾದರೆ ಅವರು ಸುಮ್ಮನೆ ಬಿಡುವುದಿಲ್ಲ. ಪ್ರಪಂಚದಲ್ಲಿ ನಾವೊಬ್ಬರೇ ಇಲ್ಲ. ಸೃಷ್ಟಿಗೆಲ್ಲ ನಾವೇ ಅಧೀಶ್ವರರಲ್ಲ. ನಮಗೆ ನಾವೇ ಅಪಕಾರವನ್ನು ಮಾಡಿಕೊಂಡರೆ ಇತರರು ತಿರಸ್ಕರಿಸುತ್ತಾರೆ ಬಹಿಷ್ಕರಿಸುತ್ತಾರೆ. ನಮ್ಮ ಪಾಪದ ಪರಿಣಾಮವು ಅವರಿಗೆ ತಟ್ಟುವುದಾದರೆ ಅದನ್ನು ಮಾಡಲು ಬಿಡುವುದೂ ಇಲ್ಲ, ಮಾಡಿದರೆ ತಕ್ಕ ಪ್ರತೀಕಾರವನ್ನು ಮಾಡಿಯೇ ಮಾಡುತ್ತಾರೆ. ನಾವು ಸ್ವಕಾರ್ಯವನ್ನು ಮಾಡಿಕೊಳ್ಳುತ್ತೇವೆಂದರೆ ಇತರರೂ ನಮ್ಮ ಹಾಗೆಯೇ ಅನ್ನುತ್ತಾರೆ. ಪರಸ್ಪರ ವಿರೋಧವಾಗದಂತೆ ಅನ್ಯೋನ್ಯವಾಗಿ ಎಷ್ಟು ಸಾಧ್ಯವೋ ಸಾಧುವೋ ಅಷ್ಟು ಸ್ವಕಾರ್ಯವನ್ನು ಸಾಧಿಸಿಕೊಳ್ಳಬಹುದೇ ವಿನಾ ಮನಸ್ವಿಯಾಗಿ ವರ್ತಿಸುವುದಕ್ಕಾಗುವುದಿಲ್ಲ. ಪಾಪಿಯು ಸುಖಿಯಾಗಿರುತ್ತಾನೆ, ಧರ್ಮಿಷ್ಠನು ದುಃಖಿಯಾಗಿರುತ್ತಾನೆ, ಎಂಬುದು ಪಾಪಿಷ್ಠನಿಗೆ ತೋರುವ ಭ್ರಾಂತಿ. ಪಾಪಿಗೆ ನೀನು ಪಾಪವನ್ನು ಮಾಡುತ್ತಿದ್ದೀಯೆ ಎಂದು ಅಂತರಾತ್ಮವು ಒಳಗೊಳಗೆ ಕುಕ್ಕುತ್ತಲೇ ಇರುತ್ತದೆ. ಅಂತರಂಗದಲ್ಲಿ ಶಾಂತಿ ಸಮಾಧಾನವಿರುವುದಿಲ್ಲ. ಹೊರಗೆ ಕಂಡುಕೇಳಿದವರು ನಿಂದಿಸುತ್ತಾರೆ, ಶಾಂತಿಸಮಾಧಾನಗಳನ್ನು ಕಳೆದುಕೊಂಡು ಮಾನಮರ್ಯಾದೆಗಳಿಲ್ಲದೆ ತುಚ್ಛನಾಗಿ ಜೀವಿಸುವುದೇನೂ ಸುಖವೂ ಸಂತೋಷವೂ ಅಲ್ಲ. ಧರ್ಮವನ್ನು ಮಾಡುವವನು ಕಷ್ಟಪಡುತ್ತಾನೆ, ದುಃಖಿಯಾಗುತ್ತಾನೆ, ಎಂಬುದು ಅಧರ್ಮಿಯ ಭಾವನೆ. ಧರ್ಮಿಷ್ಠನಿಗೆ ಧರ್ಮಜೀವನವೇ ಸುಖ, ಅಧರ್ಮಾಚರಣೆಯಂಥಾ ಯಾತನೆಯಿನ್ನೊಂದಿಲ್ಲ. ಬರದವರಿಗೆ ಕುಸ್ತಿ ಕಷ್ಟವು. ಪೈಲ್ವಾನನಿಗೆ ಕುಸ್ತಿ ಕಷ್ಟವಲ್ಲ. ಕುಸ್ತಿಗೆ ಕರೆದಾಗ ಒಲ್ಲೆ ಎನ್ನುವುದು ದುಃಖ ಅಂದಹಾಗೆ. ಸುಖದುಃಖ ಭಾವನೆಯು ಅವರವರ ಸಂಸ್ಕಾರಾನುಗುಣವಾದುದು. ಧರ್ಮಿಷ್ಠರಿಗೂ ಅಧರ್ಮಪ್ರವರ್ತಕರಿಗೂ ಪಾಪದ ಫಲವು ಬೇಡವಾದುದು, ಪುಣ್ಯದ ಫಲವು ಹಿತವಾದುದು. ಧರ್ಮಿಷ್ಠರು ಪಾಪವನ್ನು ಮಾಡುವುದಿಲ್ಲ, ಪುಣ್ಯವನ್ನಾಚರಿಸುತ್ತಾರೆ, ಅಧರ್ಮಪ್ರವರ್ತಕರು ಪಾಪವನ್ನು ಮಾಡುತ್ತಾರೆ ಪುಣ್ಯವನ್ನಾಚರಿಸುವುದಿಲ್ಲ ಅಷ್ಟೇ ವ್ಯತ್ಯಾಸ[55]—ಶ್ರೀರಾಮನಿಗೂ ಯುಧಿಷ್ಠಿರನಿಗೂ ಸತ್ಯ

55 ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ । ನ ಪಾಪಫಲಮಿಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥

ಧರ್ಮಗಳೇ ಪ್ರಿಯಹಿತವಾದುವು, ಅದರಿಂದಲೇ ಅವರಾದಾರಿಯನ್ನು ಹಿಡಿದುದು, ಅವರಿಗೆ ಅದೇ ಸುಖವಾಗಿತ್ತು. ಇಹಲೋಕದಲ್ಲಿ ಧರ್ಮಿಷ್ಠರೆಂಬ ಕೀರ್ತಿಯೂ ಲಭಿಸಿತು, ಉತ್ತಮಗತಿಯಾಗುತ್ತದೆಂಬ ದೃಢಭಾವನೆಯಿಂದ ಚಿತ್ತಕ್ಕೆ ಸಮಾಧಾನವೂ ಲಭಿಸಿತು. ಯಾರೂ ತಾವಾಗಿ ತಾವು ಕಷ್ಟವನ್ನೂ ದುಃಖವನ್ನೂ ಬಯಸುವುದಿಲ್ಲ, ಬೇಕೆಂದು ಕಷ್ಟದ ದಾರಿಯನ್ನು ಹಿಡಿಯುವುದೂ ಇಲ್ಲ, ದುಃಖವನ್ನು ಕೂಗಿ ಕರೆಯುವುದೂ ಇಲ್ಲ. ಕಷ್ಟವನ್ನೂ ದುಃಖವನ್ನೂ ನಿವಾರಿಸಿ ಸುಖಸಂತೋಷದ ಹಾದಿಯನ್ನೇ ಹಿಡಿಯುತ್ತಾರೆ, ಅಥವಾ ಕಷ್ಟತರವಾದುದನ್ನು ಬಿಟ್ಟು ಸ್ವಲ್ಪಕಷ್ಟವನ್ನೂ, ದುಃಖಕರವಾದುದನ್ನು ಬಿಟ್ಟು ಅಲ್ಪದುಃಖದಾಯಕವಾದುದನ್ನೂ ಕೈಗೊಳ್ಳುತ್ತಾರೆ. ರಾವಣನಿಗೂ ದುರ್ಯೋಧನನಿಗೂ ಸುಖವಾಯಿತೆಂಬುದು ಭ್ರಮೆ. ಅಕಾರ್ಯವನ್ನು ದಕ್ಕಿಸಲಾರದೆ ಅಪಕೀರ್ತಿಗೆ ಪಾತ್ರರಾಗಿ, ಬಲವದ್ವೈರವನ್ನು ಕಟ್ಟಿಕೊಂಡು ಯಾವ ಗಳಿಗೆಗೇನು ಬರುವುದೋ ಎಂಬ ಭೀತಿಯಿಂದ ಸರ್ವದಾ ಹೆದರುತ್ತಿದ್ದುದೇನೂ ಸುಖವಲ್ಲ. ರಾವಣನು ಒಂದು ವನಮೃಗದಿಂದ ಪರಾಜಿತನಾಗಿ ಪರಾಭವವನ್ನು ಅನುಭವಿಸಿ ಆಮೇಲೆ ಕ್ರಮೇಣ ಪುತ್ರಮಿತ್ರ ಬಂಧುಬಾಂಧವರನ್ನು ಒಬ್ಬೊಬ್ಬರನ್ನಾಗಿ ಕಳೆದುಕೊಂಡು ಅವರಿಗಾದ ಅಪಮಾನವನ್ನೂ ಅಪಮೃತ್ಯುವನ್ನೂ ಕಣ್ಣಾರೆ ನೋಡಿ ತಾನು ಸುಖಪಡುವುದಕ್ಕೆಂದು ಗಳಿಸಿದುದೆಲ್ಲವನ್ನೂ ಕಳೆದುಕೊಂಡು ಕಡೆಗೆ ತಾನೂ ನಾಶವಾಗಿಹೋದನು. ದುರ್ಯೋಧನನ ಜೀವನವೂ ಹಾಗೆಯೇ ದುಃಖಮಯವಾಗಿದ್ದಿತು. ಕಡೆಗೆ ಅವರಿಗೆ ವೀರಸ್ವರ್ಗವಾಯಿತು ನಿಜ. ವೀರಸ್ವರ್ಗವಾದುದು ಅವರು ಮಾಡಿದ ಪಾಪದ ಫಲವಲ್ಲ. ಅವರು ಸ್ವಧರ್ಮವಾದ ಕ್ಷಾತ್ರವನ್ನು ಬಿಡದೆ ಮಡಿದುದರ ಪರಿಣಾಮವು. ಅನ್ನವನ್ನೂ ಹೊನ್ನನ್ನೂ ಇತರರಿಗೆ ವಿನಿಯೋಗ ಮಾಡುವುದೇ ಒಂದು ಸಂತೋಷದ ಕಾರ್ಯವು. ದಾನದಿಂದ ತನ್ನ ಅನುಭವಕ್ಕೆ ಉಪದ್ರವವಾಗುತ್ತದೆನ್ನುವುದು ತಪ್ಪು. ತನಗೂ ತಮ್ಮವರಿಗೂ ಇಲ್ಲದಂತೆ ಎಲ್ಲವನ್ನೂ ಕೊಟ್ಟು ನಿರಾಧಾರಪರಂಜ್ಯೋತಿಯಾಗಬೇಕೆಂದು ಯಾವ ಶಾಸ್ತ್ರದಲ್ಲೂ ಹೇಳಿಲ್ಲ, ಮತ್ತೆ ತನ್ನ ಕುಟುಂಬಕ್ಕೆ ಬಾಧೆಯು ಬಾರದಂತೆ ದಾನಮಾಡಬೇಕೆಂದೇ ಶಾಸ್ತ್ರವು ಹೇಳುವುದು.[56] ಅತಿದಾನದಿಂದ ಕರ್ಣನು ಹತನಾದನು, ಅತಿಯನ್ನು ವರ್ಜ್ಯಮಾಡಬೇಕು[57]. ಎಂದೇ ಶಾಸ್ತ್ರವಿರುವುದು. ಮೃಷ್ಟಾನ್ನಭೋಜನಾದಿಗಳ ಉಪಮಾನದಿಂದ ಪ್ರಕೃತವನ್ನು ಸಾಧಿಸುವುದು ಅಸಾಧುವು. ಮೃಷ್ಟಾನ್ನಭೋಜನದಿಂದ ರುಚಿಯ ಆಸ್ವಾದನರೂಪದ ತಾತ್ಕಾಲಿಕ ಸುಖವಾಗುವುದು ನಿಜ. ಮೃಷ್ಟಾನ್ನಭೋಜನದ ಫಲವು ರುಚಿಯಿಂದ ರಸನೆಯನ್ನು ಆರಾಧಿಸುವುದಲ್ಲ, ತಿಂದುದು ಜೀರ್ಣಿಸಿ ಶರೀರವನ್ನು ರಕ್ಷಿಸಿ ಪೋಷಣೆ ಮಾಡುವುದೇ ಉದ್ದೇಶವು. ಹಾಗಿಲ್ಲದೆ ಜಿಹ್ವಾರಾಧನೆ ಮಾತ್ರವೇ

56 ಸ್ವಂ ಕುಟುಂಬಾವಿರೋಧೇನ ದೇಯಂ ॥ಯಾ-ii-೧೭೦॥

57 ಅತಿದಾನೇ ಹತಃ ಕರ್ಣಃ ...। .. ಅತಿಸರ್ವತ್ರ ವರ್ಜಯೇತ್ ॥ಸ್ಮರಣಾತ್॥

ಆಗಿದ್ದರೆ ಅನ್ನವನ್ನು ಯಾರೂ ನುಂಗುತ್ತಲೂ ಇರಲಿಲ್ಲ, ಅಥವಾ ಅರುಚಿಯಾದುದನ್ನು ಬಾಯಿಗೆ ಹಾಕುತ್ತಲೂ ಇರಲಿಲ್ಲ. ಔಷಧವು ಕಹಿಯಾಗಿ ನಾಲಿಗೆಗೆ ಅಸಹ್ಯವಾಗುವುದೆಂದು ಯಾರೂ ಅದನ್ನು ಸೇವಿಸುತ್ತಲೂ ಇರಲಿಲ್ಲ. ಅನ್ನವು ತಿಂದೊಡನೆಯೇ ಜೀರ್ಣಿಸುವುದಿಲ್ಲ, ಔಷಧವನ್ನು ಸೇವಿಸಿದೊಡನೆಯೇ ವ್ಯಾಧಿನಿವಾರಣೆಯಾಗುವುದಿಲ್ಲ. ಆಯಾಯಾ ಫಲಾನುಗುಣವಾಗಿ ಕಾಲಾಪೇಕ್ಷೆಯೂ ಅವಶ್ಯವೇ. ಐಹಿಕಫಲಾಪ್ರಾಪ್ತಿಗೇ ಕಾಲಾಪೇಕ್ಷೆಯು ಇರಬೇಕೆಂದಮೇಲೆ ಆಮುಷ್ಮಿಕಕ್ಕೂ ಜನ್ಮಾಂತರಭಾವಿಗೂ ಕಾಲವು ಬೇಕೆಂದು ಹೇಳಬೇಕಾದುದೇ ಇಲ್ಲ.

ಧರ್ಮವು ಸರ್ವಥಾ ಶ್ರೇಯಸ್ಕರವು. ಧರ್ಮಾನುಷ್ಠಾನದಿಂದ ತಾತ್ಕಾಲಿಕ ಸಂತುಷ್ಟಿಯೂ ಉಂಟು. ಅಥವಾ ಆದಿಯಲ್ಲಿ ಕಷ್ಟವಾಗಿ ಕಂಡರೂ ಪರಿಣಾಮದಲ್ಲಿ ಶ್ರೇಯಸ್ಕರವು. ಅಂಥಾ ಸುಖವೇ ಸಾತ್ವಿಕವು.[58] ಆದಿಯಲ್ಲಿ ಅಮೃತಪ್ರಾಯವಾಗಿ ಪರಿಣಾಮದಲ್ಲಿ ವಿಷಮಯವಾಗುವುದು ರಾಜಸವು.[59] ಅಂಥಾದ್ದಕ್ಕೆ ಮರುಳಾಗಬಾರದು. ತಾತ್ಕಾಲಿಕವಾದ ಅಶಾಶ್ವತ ಸುಖಕ್ಕಿಂತಲೂ ಅವಶ್ಯಂಭಾವಿಯೂ ಶಾಶ್ವತವೂ ಆದ ಪರಿಣಾಮಸುಖವು ಶ್ಲಾಘ್ಯವೂ ಶ್ರೇಯಸ್ಕರವೂ ಆದುದು. ನಿಧಾನವಾಗಿ ಪ್ರಾಪ್ತವಾದರೂ ನಿಯಮವಾಗಿ ಬರುವ ಸುಖವು ಒಳ್ಳೆಯದು ದುಃಖವನ್ನು ಅನುಭವಿಸಿದಮೇಲೆ ಬರುವ ಸುಖವೇ ಆಪ್ಯಾಯಮಾನವಾಗುವುದು. ಸುಖವಾದಮೇಲೆ ಬರುವ ದುಃಖವು ಅತಿದಾರುಣವಾಗುವುದು. ಪರಿಣಾಮ ಸುಖಪ್ರಾಯವಾದ ಧರ್ಮವು ಸರ್ವಥಾ ಅನುಷ್ಠೇಯವು. ಪರಲೋಕವಿದೆ ಜನ್ಮಾಂತರವುಂಟು. ಮಾಡಿದುದು ಯಾವುದೂ ವ್ಯರ್ಥವಾಗುವುದಿಲ್ಲ. ಎಂದಾದರೂ, ಎಲ್ಲಿಯಾದರೂ, ಯಾವ ಜನ್ಮದಲ್ಲಾದರೂ ಫಲಿಸಿಯೇ ಫಲಿಸಬೇಕು. ಮಾತಾಪಿತೃಗಳೂ ಪತಿಪತ್ನಿಯರೂ ಪುತ್ರಮಿತ್ರರೂ ಜ್ಞಾತಿಬಾಂಧವರೂ ಗುರುಶಿಷ್ಯರೂ ಸ್ವಾಮಿಭೃತ್ಯರೂ ಆಶ್ರಿತಪರಿಚಿತರೂ ಎಲ್ಲರೂ ಯಥಾಯಥರಾಗುವರು. ಮೃತನ ಜತೆಯಲ್ಲಿ ಯಾರೂ ಹೋಗುವುದಿಲ್ಲ ಧರ್ಮವೊಂದೇ ಜತೆಯಲ್ಲಿ ಹೋಗುವುದು.[60] ಹುಟ್ಟುವವನೂ ಒಬ್ಬನೇ ಹೋಗುವವನೂ ಒಬ್ಬನೇ. ಸುಕೃತದುಷ್ಕೃತಗಳ ಫಲವನ್ನನುಭವಿಸುವವನೂ ಒಬ್ಬನೇ,[61] ಯಾರೂ ಭಾಗಿಗಳಾಗುವುದಿಲ್ಲ.

---

- 58 ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಂ । ತತ್ಸುಖಂ ಸಾತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಂ ॥ ಭ. ಗೀ. ॥

59 ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಂ । ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಂ ॥ ಭ. ಗೀ. ॥

60 ನಾಮುತ್ರ ಹಿ ಸಹಾಯಾರ್ಥಂ ಪಿತಾ ಮಾತಾ ಚ ತಿಷ್ಠತಃ । ನ ಪುತ್ರದಾರಾ ನ ಜ್ಞಾತಿರ್ಧರ್ಮಸ್ತಿಷ್ಠತಿ ಕೇವಲಂ ॥ ಮ-iv-೨೩೯ ॥

61 ಏಕಃ ಪ್ರಜಾಯತೇ ಜಂತುರೇಕ ಏವ ಪ್ರಲೀಯತೇ। ಏಕೋಽನು ಭುಂಕ್ತೇ ಸುಕೃತಮೇಕ ಏವ ಚ ದುಷ್ಕೃತಂ ॥೨೪೦॥ ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಠಸಮಂ ಕ್ಷಿತೌ। ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥೨೪೧॥ ಮ-iv ॥

ಗರ್ಭೋಪನಿಷತ್ತಿನಲ್ಲೀವಿಷಯವು ಬಹು ಸ್ವಾರಸ್ಯವಾಗಿ ಉಕ್ತವಾಗಿದೆ :–"ಗರ್ಭಸ್ಥವಾದ ಶಿಶುವು ನವಮಾಸವು ತುಂಬಿದಾಗ ಸರ್ವಲಕ್ಷಣಗಳಿಂದಲೂ ಜ್ಞಾನಕರಣಿಗಳಿಂದಲೂ ಸಂಪನ್ನವಾಗುತ್ತದೆ. ಆಗ ಅದಕ್ಕೆ ಜನ್ಮಾಂತರಗಳ ಸ್ಮೃತಿಯಾಗುತ್ತದೆ, ಪುಣ್ಯಪಾಪಗಳ ಅರಿವಾಗುತ್ತದೆ. ಆಗಾಶಿಶುವು ತನ್ನಲ್ಲಿ ತಾನು ಅಂದುಕೊಳ್ಳುತ್ತದೆ:—ಇಲ್ಲಿಯವರೆಗೆ ಎಷ್ಟೋ ಸಾವಿರ ಯೋನಿಗಳಲ್ಲಿ ಜನಿಸಿದೆ. ಆಯಾ ಜನ್ಮಜಾತಿಗನುಗುಣವಾಗಿ ವಿಧವಿಧವಾದ ಆಹಾರವನ್ನು ತಿಂದೆ, ನಾನಾ ವಿಧವಾದ ಸ್ತನ್ಯಗಳನ್ನು ಕುಡಿದೆ, ಪುನಃ ಪುನಃ ಹುಟ್ಟಿದೆ, ಪುನಃ ಪುನಃ ಸತ್ತೆ, ಸತ್ತವನು ಮತ್ತೆ ಜನ್ಮವನ್ನೆತ್ತಿದೆ ಆಯಾ ಜನ್ಮಗಳಲ್ಲಿ ನನಗೊದಗಿದ ಪರಿಜನರಿಗಾಗಿ ನಾನು ಮಾಡಿದ ಪುಣ್ಯಪಾಪಗಳು ನನ್ನೊಬ್ಬನನ್ನೇ ದಹಿಸುತ್ತಿದೆ ಫಲವನ್ನು ಉಪಭೋಗಿಸಿದಾಪರಿಜನರು ಯಥಾಯಥರಾದರು, ಅಯ್ಯೋ ! ನಾನೀ ಸಂಸಾರವೆಂಬ ದುಃಖಸಾಗರದಲ್ಲಿ ಮುಳುಗಿದ್ದೇನೆ, ಇದಕ್ಕೆ ಪ್ರತೀಕಾರವು ನನಗೆ ಕಾಣುವುದಿಲ್ಲ ಆಗಲಿ, ಈ ಸಲ ಈ ಯೋನಿಯಿಂದ ವಿಮುಕ್ತನಾದರೆ ದುರಿತಕ್ಷಯಕರ್ತನೂ ಭುಕ್ತಿಮುಕ್ತಿದಾಯಕನೂ ಆದ ಪರಮೇಶ್ವರನ ಶರಣವನ್ನೇ ಹೊಗುತ್ತೇನೆ ...ಸನಾತನವಾದ ಪರಬ್ರಹ್ಮನನ್ನು ಧ್ಯಾನಿಸುತ್ತೇನೆ" ಎಂದು[62] ಪ್ರಕೃತವೇನಂದರೆ ನಾವು ಮಾಡಿದ ಶುಭಾಶುಭ ಕರ್ಮಗಳ ಫಲವಾದ ಪುಣ್ಯಪಾಪಗಳು ನಮ್ಮ ಬೆನ್ನನ್ನು ಹತ್ತೇ ಹತ್ತುತ್ತವೆ. ಅವನ್ನು ನಾವು ಅನುಭವಿಸಿಯೇ ತೀರಬೇಕು ನಾವು ಮಾಡಿದ ಕರ್ಮವು ನಾವು ಕಟ್ಟಿಕೊಂಡ ಬುತ್ತಿಯ ಹಾಗೆ, ಅದನ್ನು ನಾವುಣಲೇಬೇಕು. ಜೀವವಿರುವವರೆಗೂ ಒಂದು ಕ್ಷಣವೂ ಯಾವ ಕೆಲಸವನ್ನೂ ಮಾಡದೆ ಯಾರೂ ಸುಮ್ಮನಿರುವುದಕ್ಕಾಗುವುದಿಲ್ಲ. ಏನಾದರೂ ಒಂದು ಕೆಲಸವನ್ನು ಮಾಡುತ್ತಲೇ ಇರಬೇಕು. ಪ್ರಕೃತಿಸಂಭವವಾದ ಗುಣಗಳಿಗೆ ಅಧೀನನಾಗಿ ಅವಶನಾಗಿ ಏನನ್ನಾದರೂ ಮಾಡು

---

62 ಅಥನವಮೇ ಮಾಸಿ ಸರ್ವಲಕ್ಷಣಜ್ಞಾನಕರಣಸಂಪೂರ್ಣೋ ಭವತಿ ಪೂರ್ವಜಾತಿಂ ಸ್ಮರತಿ ಶುಭಾಶುಭಂ ಚ ಕರ್ಮ ವಿಂದತಿ॥ ಪೂರ್ವಯೋನಿಸಹಸ್ರಾಣಿ ದೃಷ್ಟ್ವಾಚೈವ ತತೋ ಮಯಾ। ಆಹಾರಾ ವಿವಿಧಾ ಭುಕ್ತಾಃ ಪೀತಾ ನಾನಾವಿಧಾಸ್ತನಾಃ ॥ ಜಾತಶ್ಚೈವ ಮೃತಶ್ಚೈವ ಜನ್ಮಚೈವ ಪುನಃ ಪುನಃ। ಯನ್ಮಯಾಪರಿಜನಸ್ಯಾರ್ಥೇ ಕೃತಂ ಕರ್ಮ ಶುಭಾಶುಭಂ॥ ಏಕಾಕೀ ತೇನ ದಹ್ಯೇಹಂಗತಾಸ್ತೇ ಫಲಭೋಗಿನಃ। ಅಹೋದುಃಖೋದಧೌ ಮಗ್ನೋ ನ ಪಶ್ಯಾಮಿ ಪ್ರತಿಕ್ರಿಯಾಂ ॥ ಯದಿಯೋನ್ಯಾಃ ಪ್ರಮುಚ್ಯೇಹಂ ತತ್ಪ್ರಪದ್ಯೇ ಮಹೇಶ್ವರಂ। ಅಶುಭಕ್ಷಯಕರ್ತಾರಂ ಫಲಮುಕ್ತಿ ಪ್ರದಾಯಕಂ ॥ ಯದಿಯೋನ್ಯಾಃ ಪ್ರಮುಚ್ಯೇಹಂ ತತ್ಪ್ರಪದ್ಯೇನಾರಾಯಣಂ। ಅಶುಭಕ್ಷಯಕರ್ತಾರಂ ಫಲಮುಕ್ತಿ ಪ್ರದಾಯಕಂ ॥ ಯದಿಯೋನ್ಯಾಃ ಪ್ರಮುಚ್ಯೇಹಂ ತತ್ಸಾಂಖ್ಯಂ ಯೋಗಮಭ್ಯಸೇ। ಅಶುಭಕ್ಷಯಕರ್ತಾರಂ ಫಲಮುಕ್ತಿ ಪ್ರದಾಯಕಂ ॥ ಯದಿಯೋನ್ಯಾಃ ಪ್ರಮುಚ್ಯಾಮಿ ಧ್ಯಾಯೇ ಬ್ರಹ್ಮ ಸನಾತನಂ ॥ ಅಥಯೋನಿದ್ವಾರಂ ಸಂಪ್ರಾಪ್ತೋ ಯಂತ್ರೇಣಾಪೀಡ್ಯಮಾನೋ ಮಹತಾ ದುಃಖೇನ ಜಾತಮಾತ್ರಸ್ತು ವೈಷ್ಣವೇನ ವಾಯುನಾ ಸಂಸ್ಪೃಷ್ಟಸ್ತದಾ ನ ಸ್ಮರತಿ ಜನ್ಮಾಂತರಾಣಿ ನ ಚ ಕರ್ಮ ಶುಭಾಶುಭಂ ವಿಂದತಿ ॥

ತ್ತಲೇ ಇರುವುದೇ ಜೀವಿಧರ್ಮವು.[63] ಕರ್ಮವನ್ನು ಮಾಡುವುದು ಅನಿವಾರ್ಯವೇ ಆದುದರಿಂದ ವಿಹಿತಕರ್ಮವನ್ನೇ ಮಾಡುವುದು ಯುಕ್ತವು. ಅವಿಹಿತವಾದುದನ್ನು ಮಾಡದಿರುವುದೂ ಯುಕ್ತವೇ. ಅದೇ ಧರ್ಮವು. ಗೆಜ್ಜಲು ಹುತ್ತವನ್ನು ಕಟ್ಟುವಂತೆ ಆದ ಆದಹಾಗೆಲ್ಲ ಮೆಲ್ಲಮೆಲ್ಲಗೆ ಧರ್ಮವನ್ನು ಸಂಗ್ರಹಮಾಡುತ್ತಾ ಹೋಗಬೇಕು.[64] ಶ್ರುತಿಸ್ಮೃತ್ಯುಕ್ತವಾದ ಧರ್ಮವನ್ನು ತಪ್ಪದೆ ಅನುಷ್ಠಾನ ಮಾಡಬೇಕು, ಮನಸ್ಸಿನಿಂದಲೂ ಮಾತಿನಿಂದಲೂ ಕೆಲಸದಿಂದಲೂ ಪ್ರಯತ್ನಪೂರ್ವಕವಾಗಿ ಧರ್ಮಾಚರಣದಲ್ಲಿ ಪ್ರವರ್ತಿಸಬೇಕು. ಧರ್ಮಸ್ವರೂಪವನ್ನು ಯಥಾರ್ಥವಾಗಿ ಅರಿಯಲು ಶಾಸ್ತ್ರಾದಿಗಳನ್ನು ನಿತ್ಯವೂ ಅವಲೋಕಿಸುತ್ತಿರಬೇಕು.[65] ಹೀಗೆ ಸರ್ವಪ್ರಯತ್ನದಿಂದಲೂ ಧರ್ಮಸ್ವರೂಪವನ್ನು ಅರಿತು ಅದನ್ನು ಆಚರಿಸಬೇಕು. ನ್ಯಾಯವಿರುದ್ಧವೂ ಯುಕ್ತಿಬಾಹ್ಯವೂ ಆದ ಪ್ರತಿಕೂಲ ತರ್ಕದ ವ್ಯರ್ಥವಾದಕ್ಕೆ ಬೀಳಬಾರದು. ಮುಖ್ಯವಾಗಿ ಅವರವರ ಆತ್ಮವೇ ಅವರಿಗೆ ಸಾಕ್ಷಿ. ಅದು ಕಾರ್ಯಾಕಾರ್ಯಗಳನ್ನು ಸೂಚಿಸುತ್ತಲೇ ಇರುವುದು. ಅದನ್ನೆಂದಿಗೂ ಮರೆಯಬಾರದು.



63 ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ । ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ಭ. ಗೀ. ॥

64 ಧರ್ಮಂ ಶನೈಸ್ಸಂಚಿನುಯಾದ್ವಲ್ಮೀಕಮಿವಪುತ್ತಿಕಾಃ । ಪರಲೋಕ ಸಹಾಯಾರ್ಥಂ ಸರ್ವಭೂತಾನ್ಯಪೀಡಯನ್ ॥ ಮ-iv-೨೩೮॥

65 ನಿತ್ಯಂ ಶಾಸ್ತ್ರಾಣ್ಯವೇಕ್ಷೇತ ಸ್ಯಾತ್ ॥ ವಿ-೭೧-೮॥

## ೩ನೆಯ ಪ್ರಕರಣ—ಸದಾಚಾರ (ಸದ್ವರ್ತನ)

### ೧. ದಿನಚರ್ಯೆ (ಆಹ್ನಿಕ)

[ದಿನಚರ್ಯೆಯ ವಿಸ್ತಾರವನ್ನು ಸ್ಮೃತಿಗಳಲ್ಲಿ ಬರೆದಿದೆ. ಇಲ್ಲಿ ಸೂಕ್ಷ್ಮವಾಗಿ ಸೂಚಿಸಿದೆ.]

ಧರ್ಮಾಚರಣವು ಕೇವಲ ಕಾಯಕ್ಲೇಶದ ಕಲಾಪವೂ ಅಲ್ಲ; ಕೆಲವು ಉತ್ಸಾಹಿಗಳು ಹೇಳುವಂತೆ ಬರಿಯ ಮತಾಚಾರವೂ ಅಲ್ಲ; ನಾಸ್ತಿಕರು ಆಕ್ಷೇಪಿಸುವಂತೆ ಉಪಸ್ಥಿತವಾದ ಸಾಂಸಾರಿಕ ಸುಖಸೌಭಾಗ್ಯಗಳನ್ನು ತ್ಯಜಿಸಿ ಆಶಾಮೋದಕಕ್ಕೆ ಕೈ ಒಡ್ಡುವ ಮೂರ್ಖತನವೂ[1] ಅಲ್ಲ. ಐಹಿಕವನ್ನು ಪರಿತ್ಯಜಿಸಬೇಕೆಂದು ಎಲ್ಲಿಯೂ ಹೇಳಿಲ್ಲ. ಐಹಿಕಾಽಽಮುಷ್ಮಿಕಗಳನ್ನು ಸಮನ್ವಯಮಾಡಿಕೊಂಡು ವರ್ತಿಸಬೇಕೆಂದೇ ಧರ್ಮಶಾಸ್ತ್ರಕಾರರೂ ಹೇಳುವುದು. ಅದಕ್ಕೇ ಎಲ್ಲಾ ಸಂಪೂರ್ಣ ಸ್ಮೃತಿಗಳೂ ನಿರ್ದುಷ್ಟವಾದ ಶಾರೀರಕ ಮಾನಸಿಕ ಸುಖಜೀವನವನ್ನು ವ್ಯವಸ್ಥಿತವಾದ ರೀತಿಯಲ್ಲಿ ನಡೆಸುವುದಕ್ಕೆ ಸಾಧಕಗಳಾದ ನಿಯಮಾವಳಿಗಳಿಂದಲೇ ಆರಂಭವಾಗುವುದೂ ಚತುರ್ವಿಧ ಪುರುಷಾರ್ಥಗಳೂ ಏರ್ಪಟ್ಟಿರುವುದು. ಐಹಿಕವೇ ಪ್ರಧಾನ ಧ್ಯೇಯವಾದ ಆಯುರ್ವೇದದಲ್ಲಿ ಇಂಥಾ ಧರ್ಮನಿಯಮಗಳಿಗೆ ಅನುಮೋದನವು ದೊರೆತಿರುವುದೇ ಈ ಅರ್ಥಕ್ಕೆ ಸಮರ್ಥನೆಯು. ಒಂದು ವಿಷಯವನ್ನು ಮಾತ್ರ ಸ್ಮೃತಿಯಲ್ಲಿಡಬೇಕು. ನಿಯಮವೆಂದರೇ ಸಂಯಮವು, ನಿಯಮದ ಸಾಧುತ್ವವೂ ಅಸಾಧುತ್ವವೂ ಫಲಾನುಮೇಯವು. ವ್ಯಕ್ತಿಶ್ರೇಯಸ್ಸೇ ಪರಮಧ್ಯೇಯವಲ್ಲ. ಸಾಮೂಹಿಕ ಶ್ರೇಯಸ್ಸಿಗೆ ಬಾಧೆಯಾಗದಂತೆ ಸ್ವಶ್ರೇಯಸ್ಸನ್ನು ಸಾಧಿಸಿಕೊಳ್ಳಬೇಕೇ ವಿನಾ ಅದಕ್ಕೆ ವಿರುದ್ಧವಾಗಿ ಸ್ವಶ್ರೇಯಸ್ಸಾಗುವ ಸಂಭವವೇ ಇಲ್ಲ. ಇದನ್ನು ಮರೆಯದೆ ಧರ್ಮನಿಯಮಗಳನ್ನು ವಿಮರ್ಶಿಸಿದರೆ ಪೂರ್ವಪಕ್ಷಗಳಿಗೆ ಅವಕಾಶವೇ ಇಲ್ಲ.

ಬ್ರಾಹ್ಮಮುಹೂರ್ತವೆಂದರೆ ಸೂರ್ಯೋದಯಕ್ಕೆ ಪೂರ್ವ ೪ ಗಳಿಗೆಗೆ ಆರಂಭವಾಗುವ ಮುಹೂರ್ತವು.[2] ಈಗಿನ ಕಾಲಮಾನದ ಪ್ರಕಾರ ಉದಯಕ್ಕೆ ಮೊದಲು

---

1 ಧೂರ್ತಪ್ರಣೀತಾಽಽಗಮಪ್ರಸಾರಿತಾನಾಂ ಆಶಾಮೋದಕೈರಿಯಂ ತೃಪ್ತಿರ್ಮೂರ್ಖಾಣಾಂ ॥ಚಾರ್ವಾಕಃ॥ ಯಜಸ್ವ ದೇಹಿ ದೀಕ್ಷಸ್ವ ತಪಸ್ತಪ್ಯಸ್ವ ಸಂತ್ಯಜ। ದಾನಸಂವನನಾಹ್ಯೇತೇ ಗ್ರಂಥಾ ಮೇಧಾವಿಭಿಃ ಕೃತಾಃ ॥ಜಾಬಾಲಿಃ॥

2 ರಾತ್ರೇರುಪಾಂತ್ಯೋ ಮುಹೂರ್ತೋ ಬ್ರಾಹ್ಮಃ ॥ಅ. ಸಂ.॥ (ಉಪಾಂತ್ಯ = penultinate ; = ಮುಹೂರ್ತ = ೨ ಗಳಿಗೆ = ೪೮ ನಿಮಿಷ)

೧ ಗಂಟೆ ೩೬ ನಿಮಿಷಕ್ಕೆ ಆರಂಭವಾಗಿ ೪೮ ನಿಮಿಷಗಳ (೨ ಗಳಿಗೆಗಳವರಿಗಿನ ಕಾಲವು.) ಅದು ಪ್ರಶಾಂತವಾದ, ಪ್ರಶಸ್ತವಾದ, ಕಾಲ. ಅದು ಆರಂಭವಾಗುತ್ತಲೇ ಹಾಸಿಗೆಯಿಂದೇಳಬೇಕು.[3] ಎದ್ದಕೂಡಲೇ ಪರಮೇಶ್ವರನನ್ನು ಧ್ಯಾನಮಾಡಬೇಕು.[4] ಆಮೇಲೆ ತನ್ನ ಹಿತಾಹಿತಗಳನ್ನು ಚಿಂತಿಸಿಕೊಳ್ಳಬೇಕು.[5] ಅಂದರೆ ಉಂಡ ಅನ್ನವು ಜೀರ್ಣಿಸಿತೆ ಇಲ್ಲವೆ, ಮಾಡಿದ ಕಾರ್ಯಗಳು ಧರ್ಮವೆ ಅಧರ್ಮವೆ, ಪಾಪವೆ ಪುಣ್ಯವೆ, ಮುಂದೇನು ಮಾಡಬೇಕು ಎಂದು ಪರ್ಯಾಲೋಚಿಸುವುದು.[6] ಅನ್ನವು ಜೀರ್ಣಿಸದಿದ್ದರೆ ಅದು ನೆನೆಯುವಷ್ಟು ಮಾತ್ರವೇ ಹಿತೋಷ್ಣಜಲವನ್ನು ಕುಡಿಯಬೇಕು, ಅದರಿಂದ ಜೀರ್ಣಿಸುವುದು. ಹೆಚ್ಚಾಗಿ ಕುಡಿದರೆ ಅಗ್ನಿನಾಶವಾಗುವುದು.[7] ತಾನು ಮಾಡಿದುದರ ಸಾಧುತ್ವಾಽಸಾಧುತ್ವವನ್ನು ವಿಚಾರಮಾಡುವುದರಿಂದ ಪಶ್ಚಾತ್ತಾಪವು ಹುಟ್ಟಿ ಪೂರ್ವಕೃತ ಪಾಪಗಳಿಗೆ ಪ್ರಾಯಶ್ಚಿತ್ತವೂ ಮುಂದೆ ಪುನಃ ಅಕಾರ್ಯವನ್ನು ಮಾಡದಹಾಗೆ ವರ್ತಿಸುವುದಕ್ಕೂ ಅನುಕೂಲಿಸುವುದು.

ಆಮೇಲೆ ಅದೇ ಮುಹೂರ್ತದಲ್ಲಿ ಮನೆಯಿಂದ (ಅಂದರೆ ಗ್ರಾಮದಿಂದ) ದೂರ ಹೋಗಿ ಅಲ್ಲಿ ದೇಹಬಾಧೆಯನ್ನು ನಿವರ್ತಿಸಿಕೊಳ್ಳಬೇಕು.[8] ಅದು ವಿಸರ್ಜನ ಕಾರ್ಯಕ್ಕೆ ಸಕಾಲವಾದುದರಿಂದ ವೇಗ[9]ವು ತಾನಾಗಿ ಪ್ರಾಪ್ತವಾಗುವುದು. ಪ್ರಾಪ್ತ

---

3 ಬ್ರಾಹ್ಮೇ ಮುಹೂರ್ತೇ ಬುಧ್ಯೇತ ॥ಮ-iv-೯೨॥

4 ಬ್ರಾಹ್ಮೇ ಮುಹೂರ್ತ ಉತ್ಥಾಯ ಧ್ಯಾಯೀತ ಮನಸೇಶ್ವರಂ ॥ಕೂರ್ಮಪುರಾಣ॥

5 ಬ್ರಾಹ್ಮೇ ಮುಹೂರ್ತೇ ಬುಧ್ಯೇತ ಧರ್ಮಾರ್ಥಾವನುಚಿಂತಯೇ ॥ಮ-iv-೯೨॥ ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಚಿಂತಯೇದಾತ್ಮನೋ ಹಿತಂ ॥ಯಾ-i ೧೧೫॥ ಬ್ರಾಹ್ಮೇ ಮುಹೂರ್ತೇ ಉತ್ಥಾಯ ಮಾನಸೇ ಮತಿಮಾ ನೃಪ । ವಿಬುಧ್ಯ ಚಿಂತಯೇದ್ಧರ್ಮಮರ್ಥಂ ಚಾಪ್ಯವಿರೋಧಿನಂ ॥ಅಪೀಡಯಾಸಯೋಃ ಕಾಮಮುಭಯೋರಪಿ ಚಿಂತಯೇತ್ । ಪರಿತ್ಯಜೇದರ್ಥಕಾಮೌ ಧರ್ಮಪೀಡಾಕರೌ ನೃಪ॥ ಧರ್ಮಮಪ್ಯಶುಭೋದರ್ಕಂ ಲೋಕವಿದ್ವಿಷ್ಟಮೇವ ಚ ॥ವಿ.ಪು.॥

6 ಬ್ರಾಹ್ಮೇ ಮುಹೂರ್ತೇ ಉತ್ತಿಷ್ಠೇಜ್ಜೀರ್ಣಾಜೀರ್ಣೇ ನಿರೂಪಯೇ ॥ಅ. ಸಂ. ದಿನಚರ್ಯ॥

7 ಆಮವಿಷ್ಟಬ್ಧಯೋಃ ಕೋಷ್ಣಂ ನಿಷ್ಪಿಬಾಸೋಽಪ್ಯಪಃ ಪಿಬೇತ್ । ಯಾವತ್ಯಃ ಕ್ಲೇದಯಂತ್ಯನ್ನಮತಿಕ್ಲೇದೋಽಗ್ನಿನಾಶಕಃ ॥. ಪಚ್ಯತೇ ಕ್ಷಿಪ್ರಮಾಹಾರಃ ಕೋಷ್ಣತೋಯದ್ರವೀಕೃತಃ ॥ಅ.ಸಂ-ರೋಗಾನುತ್ಪಾದನೀಯ॥

8 ಬ್ರಾಹ್ಮೇ ಮುಹೂರ್ತ ಉತ್ಥಾಯ ಮೂತ್ರಪ್ರರೀಷೋತ್ಸರ್ಜನಂ ಕುರ್ಯಾತ್ ॥ ವಿ-೬೦-೧॥ ಉತ್ಥಾಯಾವಶ್ಯಕಂ ಕೃತ್ವಾ ಕೃತಶೌಚಸ್ಸಮಾಹಿತಃ ॥ಮ-IV-೯೩॥ ಬ್ರಾಹ್ಮೇ ಮುಹೂರ್ತೇ ಉತ್ತಿಷ್ಠೇಜ್ಜೀರ್ಣಾಜೀರ್ಣೇ ನಿರೂಪಯೇ । ರಕ್ಷಾರ್ಥಮಾಯುಷಸ್ಸ್ವಸ್ಥೋ ಜಾತವೇಗಸ್ಸಮುತ್ಸೃಜೇತ್ ॥ಅ.ಸಂ.-ದಿನಚರ್ಯ॥ ದೂರಾದಾವಸಥಾನ್ಮೂತ್ರಪುರೀಷೇ ಕುರ್ಯಾತ್. ॥ ಆಪಸ್ತಂಭಃ ॥ ನೈಋತ್ಯಾಮಿಷುವಿಕ್ಷೇಪಮತೀತ್ಯಾಮಧಿಕಂ ಬುಧಃ । ದೂರಾದಾವಸಥಾನ್ಮೂತ್ರಂ ಪುರೀಷಂ ಚ ಸಮಾಚರೇತ್ ॥ವಿಷ್ಣುಪುರಾಣ॥

9 ಅವಸರ, call,

ವಾದ ವೇಗವನ್ನು ತಡೆಯಬಾರದು, ತಡೆದರೆ ರೋಗವು ಪ್ರಾಪ್ತವಾಗುವುದು.[10] ವಿಸರ್ಜನೆಯು ಮುಗಿದ ಕೂಡಲೇ ಅಲ್ಲಿಂದೆದ್ದು ಬೇರೆ ಕಡೆಯಲ್ಲಿ ಮೊದಲೇ ತಂದು ಸಿದ್ಧವಾಗಿಟ್ಟುಕೊಂಡಿದ್ದ ಮೃತ್ತಿಕೆಯಿಂದಲೂ ಉದ್ಧೃತವಾದ ಜಲದಿಂದಲೂ ಗಂಧವೂ ಲೇಪವೂ ಪರಿಹಾರವಾಗುವಹಾಗೆ ಶೌಚವನ್ನು ಮಾಡಿಕೊಳ್ಳಬೇಕು.[11] ದೇಶದ ಕಾಲದ ಶೌಚಪದಾರ್ಥದ ಅದರ ಲಾಭದ ಮತ್ತು ಉಪಯೋಗದ, ತನ್ನ ಸ್ಥಿತಿಯ ಮತ್ತು ಅವಸ್ಥೆಯಮೇಲೆ ಗಮನವನ್ನಿಟ್ಟು ಅವಕ್ಕೆ ಅನುಸಾರವಾಗಿ ಶೌಚಪ್ರಕಾರವನ್ನು ಹೆವಣಿಸಿಕೊಳ್ಳಬೇಕು ಎಂಬುದು ಸಂಗ್ರಹವಾಕ್ಯವು.[12] ಆಮೇಲೆ ಮುಳ್ಳಿನ ಗಿಡದ ಅಥವಾ ಮುರಿದರೆ ಹಾಲು ಬರುವ ಗಿಡದ, ಕಿರುಬೆರಳುಗಾತ್ರದ ಮತ್ತು ಒಂದಡಿ ಉದ್ದದ ಕಡ್ಡಿಯನ್ನು ಮುರಿದುಕೊಂಡು ಅದನ್ನು ಅಗಿದು ತುದಿಯಲ್ಲಿ ಕೂರ್ಚವನ್ನು (ಜುಂಗನ್ನು) ಮಾಡಿ ಅದರಿಂದ ಒಸಡಿಗೆ ಬಾಧೆಯಾಗದಹಾಗೆ ದಂತಧಾವನ ಮಾಡುವುದು. ಅದನ್ನೇ ಶಿಗಿದು ಬಿಲ್ಲಿನಂತೆ ಬಗ್ಗಿಸಿ ಮೆಲ್ಲಗೆ ನಾಲಿಗೆಯ ಕೊಳೆಯನ್ನೂ ತೆಗೆಯುವುದು. ಆಮೇಲೆ ಮುಖಪ್ರಕ್ಷಾಳನಾದಿಗಳೂ ಆಗಬೇಕು.[13] ಆಯುರ್ವೇದದಲ್ಲಿ ಆ ಕೂಡಲೇ ಕಣ್ಣಿಗೆ ತಣ್ಣೀರನ್ನೆರಚಿಕೊಳ್ಳಬೇಕೆಂಬ

---

10 ನವೇಗಿತೋನ್ಯಕಾರ್ಯಸ್ಸ್ಯಾತ್..॥ ಪ್ರವರ್ತಯೇತ್ತ್ರ ಚಲಿತಂ ನ ತು ಯತ್ನಾದುದೀರಯೇತ್ ॥ಅ.ಸಂ-ದಿನಚರ್ಯಾ॥, ಉತ್ತಿಷ್ಠೇತ ಯಥಾಕಾಲಂ ಮಲಾನಾಂಶೋಧನಂ ಪ್ರತಿ ॥ ಚಯಕಾಷ್ಠಮುಪಾರುಹ್ಯ ಕುರ್ವತೇ ತೇ ಹ್ಯಪೇಕ್ಷಿತಾಃ ॥ ಪ್ರಾಯಶಸ್ಸುಚಿರೇಣಾಪಿ ಭೇಷಜದ್ವೇಷಿಣೋ ಗದಾಃ ॥ (ಚಯಕಾಷ್ಠಾಃ = ಗುದಕಾಷ್ಠಾಃ)॥ ಅ. ಸಂ.-ರೋಗಾನುತ್ಪಾದನೀಯ ॥ ರಕ್ಷಾರ್ಥಮಾಯುಷಸ್ಸ್ವಸ್ಥೋ ಜಾತವೇಗಸ್ಸಮುತ್ಸೃಜೇತ್॥ ಅ.ಸಂ-ದಿನಚರ್ಯಾ॥ ರೋಗಾಶ್ಚ ಸರ್ವೇ ಜಾಯಂತೇ ವೇಗೋದೀರಣಧಾರಣೈಃ॥ಅ. ಸಂ-ರೋಗಾನುತ್ಪಾದನೀಯ॥

11 ವಿಣ್ಮೂತ್ರೋತ್ಸರ್ಗಶುದ್ಧ್ಯರ್ಥಂ ಮೃದ್ವಾರ್ಯಾದೇಯಮರ್ಥವತ್ ॥ ಮ-V ೧೩೪॥ ಗೃಹೀತಶಿಶ್ನಶ್ಚೋತ್ಥಾಯ ಮೃದ್ಭಿರಭ್ಯುದ್ಧೃತೈರ್ಜಲೈಃ । ಗಂಧಲೇಪಕ್ಷಯಕರಂ ಶೌಚಂ ಕುರ್ಯಾದತಂದ್ರಿತಃ ॥ಯಾ-i-೧೭॥ ತೀರ್ಥೇ ಶೌಚಂ ನಕುರ್ವೀತ ಕುರ್ವೀತೋದ್ಧೃತವಾರಿಣಾ ॥ದಕ್ಷಃ॥ ಅಭ್ಯುದ್ಧೃತಾಭಿಶ್ಶುಚಿಭಿರದ್ಭಿರ್ಮೃದ್ಭಿಶ್ಚ ಯೋಜಯೇತ್ । ಲೇಪಗಂಧಾಪಹಂ ಶೌಚಮನುತ್ಪ್ಲುತಿತಬಿಂದುಭಿಃ ॥ಅ. ಸಂ.-ದಿನಚರ್ಯಾ॥

12 ದೇಶಂ ಕಾಲಂ ತಥಾತ್ಮಾನಂ ದ್ರವ್ಯಂ ದ್ರವ್ಯಪ್ರಯೋಜನಂ। ಉಪಪತ್ತಿಮವಸ್ಥಾಂ ಚ ಜ್ಞಾತ್ವಾ ಶೌಚಂ ಪ್ರಕಲ್ಪಯೇತ್ ॥ಬೋಧಾಯನಃ॥

13 ಕಂಟಕಕ್ಷೀರವೃಕ್ಷೋತ್ಥಂ ದ್ವಾದಶಾಂಗುಲಸಮ್ಮಿತಂ । ಕನಿಷ್ಠಕಾಗ್ರವತ್ಸ್ಥೂಲಂ ಪರ್ವಾರ್ಧಕೃತಕೂರ್ಚಕಂ॥ ದಂತಧಾವನಮುದ್ದಿಷ್ಟಂ ಜಿಹ್ವೋಲ್ಲೇಖನಿಕಾ ತಥಾ ॥ವಿಷ್ಣುಃ॥ ಕನೀನ್ಯಗ್ರಸಮಸ್ಥೌಲ್ಯಂ ಸುಕೂರ್ಚಂ ದ್ವಾದಶಾಂಗುಲಂ। ಪ್ರಾತರ್ಭುಕ್ತ್ವಾ ಚ ಯತವಾಗ್ಭಕ್ಷಯೇದ್ದಂತಧಾವನಂ ॥ ವ್ಯಾಪ್ಯ ತ್ರಿವರ್ಗತ್ರಿತಯಕ್ಷೌದ್ರಾಕ್ತೇನ ಚ ಘರ್ಷಯೇತ್ । ಶನೈಸ್ತೇನ ತತೋ ದಂತಾನ್ ದಂತಮಾಂಸಾನ್ಯಬಾಧಯನ್ ॥ ಲಿಖೇದನುಸುಖಂ ಜಿಹ್ವಾಂ ಜಿಹ್ವಾನಿರ್ಲೇಖನೇನ ಚ ॥ (ತ್ರಿವರ್ಗತ್ರಿತಯಂ = ತ್ರಿಕಟುತ್ರಿಫಲತ್ರಿಜಾತಕಾನಿ) ॥ಅ. ಸಂ-ದಿನಚರ್ಯಾ॥

ನಿಯಮವೊಂದು ಹೆಚ್ಚಾಗಿ ಉಕ್ತವಾಗಿದೆ.[14] ಈ ಪ್ರಕಾರವಾಗ ನಿಯಮ[illegible]ದ ನಡೆದರೆ ದೇಹದಲ್ಲಿ ದಾರ್ಢ್ಯವೂ ಮುಖದಲ್ಲಿ ವರ್ಚಸ್ಸೂ, ಹೊದಳಿನಲ್ಲಿ ಮೇಧಾ ಶಕ್ತಿಯೂ ಒಟ್ಟಿನಲ್ಲಿ ದೀರ್ಘಾಯುಷ್ಯವೂ ಲಭಿಸುವುವು.[15] ಮತ್ತು ಬಾಯಿಯಲ್ಲಿ ಕೊಳೆಯಿರುವುದಿಲ್ಲ, ನಾಲಿಗೆಯಲ್ಲಿ ಅರುಚಿಯಿರುವುದಿಲ್ಲ, ಬಾಯಿ ಹಲ್ಲು ನಾಲಿಗೆ ಇವು ದುರ್ಗಂಧಯುತವಾಗುವುದಿಲ್ಲ; ಶುಚಿಯೂ ರು[illegible] [illegible]ವವೂ ಪಾ ಪ ವಾಗುವುವು.[16]

ಇವೆಲ್ಲವೂ ಕೆಲವು ಅಂಗಗಳ ಶೋಧನಪ್ರಕಾರವು. ಸರ್ವಾಂಗಶುದ್ಧಿಗಾಗಿ ಸ್ನಾನವು ಉಕ್ತವಾಗಿದೆ. ಯಾವಾಗಲೋ ಮಾಡಿದರಾಯಿತೆಂದು ಆಲಸ್ಯಮಾಡದೆ ಮುಖಪ್ರಕ್ಷಾಳನವು ಮುಗಿದ ಕೂಡಲೇ ಸ್ನಾನವನ್ನು ಮಾಡಬೇಕು.[17] ದೇಹದ ನವದ್ವಾರಗಳೂ ರೋಮಕೂಪಗಳೂ ಸದಾ ಸ್ರವಿಸುತ್ತಲೇ ಇರುವುದರಿಂದ ತತ್ತತ್ಸಂಭವಾದ ಮಲವು ಶೇಖರವಾಗಿ ದೇಹವು ಅತ್ಯಂತ ಮಲಿನವಾಗಿರುವುದು, ಅದರಿಂದ ಅದನ್ನು ಮೊದಲು ತೊಳೆದು ಶೋಧಿಸಬೇಕೆಂದು ಪ್ರಾತಸ್ಸ್ನಾನವು ವಿಧಾಯಕವಾಗಿರುವುದು.[18] ಸ್ನಾನದಿಂದ ರೂಪವೂ ತೇಜಸ್ಸೂ ಬಲವೂ ಶೌಚವೂ ಆಯಸ್ಸೂ ಆರೋಗ್ಯವೂ ಸಂತೋಷವೂ ತಪಸ್ಸೂ ಮೇಧಾಶಕ್ತಿಯೂ ವೃದ್ಧಿಯಾಗುವುವು, ಮನಸ್ಸು ಪ್ರಸನ್ನವಾಗುವುದು, ದುಃಖಶೋಕಾದ್ಯುದ್ರೇಕಗಳು ಶಮನವಾಗುವುವು, ಮಾನವು ಲಭಿಸುವುದು, ಜ್ಞಾನೋದಯವಾಗುವುದು. ಅಷ್ಟೇ ಅಲ್ಲ ಮಲವೂ, ಬೆವರೂ, ಬಾಯಾರಿಕೆಯೂ, ನೈಕಡಿತವೂ, ಉರಿಯೂ, ಆಯಾಸವೂ, ಆಲಸ್ಯವೂ,

---

14 ದಂತಾನ್ ಪೂರ್ವಮಧೋ ಘರ್ಷೇತ್ತಾತಃ ಸಿಂಚೇಚ್ಚ ಲೋಚನೇ ॥ಅ. ಸಂ.-ದಿನಚರ್ಯಾ॥

15 ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ। ಬ್ರಹ್ಮ ಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥ಕಾತ್ಯಾಯನಃ॥

(ಹೀಗೆಂದು ದಂತಧಾವನಮಂತ್ರವನ್ನೇ ಕಾತ್ಯಾಯನರು ಹೇಳಿದ್ದಾರೆ—ಅಂದರೆ ಅವೆಲ್ಲವೂ ಆಗುವುವು ಎಂದಭಿಪ್ರಾಯವು.)

16 ತಥಾಸ್ಯಮಲವೈರಸ್ಯಜಿಹ್ವಾಗಂಧಾಸ್ಯದಂತಜಾಃ। ರುಚಿವೈಶದ್ಯಲಘುತಾ ನ ಭವಂತಿ ಭವಂತಿ ಚ॥(ಆಸ್ಯಮಲವೈರಸ್ಯಜಿಹ್ವಾಗಂಧಾಸ್ಯದಂತಜಾ ನ ಭವಂತಿ। ರುಚಿವೈಶದ್ಯಲಘುತಾ ಭವಂತಿ ಚ, ಇತ್ಯನ್ವಯಃ) ಅ.ಸಂ.-ದಿನಚರ್ಯಾ॥

17 ಪ್ರಾತಸ್ಸ್ನಾನಂ ಪ್ರಶಂಸಂತಿ ದೃಷ್ಟಾದೃಷ್ಟಫಲಂ ಹಿ ತತ್ । ಸರ್ವಮರ್ಹತಿ ಶುದ್ಧಾತ್ಮಾ ಪ್ರಾತಸ್ಸ್ನಾಯೀ ಜಪಾದಿಕಂ ॥ದಕ್ಷಃ॥ ಪ್ರಕ್ಷಾಳ್ಯ ದಂತಕಾಷ್ಠಂ ವೈ ಭಕ್ಷಯಿತ್ವಾ ಯಥಾವಿಧಿ। ಆಚಮ್ಯ ಪ್ರಯತೋ ನಿತ್ಯಂ ಪ್ರಾತಸ್ಸ್ನಾನಂ ಸಮಾಚರೇತ್ ॥ಕೂರ್ಮಪುರಾಣ॥

18 ಲಾಲಾಸ್ವೇದಸಮಾಕೀರ್ಣಶ್ಶಯನಾದುತ್ಥಿತಃ ಪುಮಾನ್। ಅತ್ಯಂತ ಮಲಿನಃ ಕಾಯೋ ನವಚ್ಛಿದ್ರಸಮನ್ವಿತಃ ॥ ಸ್ರವತ್ಯೇವ ದಿವಾರಾತ್ರೌ ಪ್ರಾತಸ್ಸ್ನಾನಂ ವಿಶೋಧನಂ॥ ವ್ಯಾಸಃ ॥

ಪಾಪವೂ ಪರಿಹಾರವಾಗುವುವು.[19] ನದಿ ಮುಂತಾದ ಹರಿಯುವ ನೀರಿನಲ್ಲಿಯೂ, ನಿಂತ ನೀರಿನಲ್ಲಿಯೇ ಮಾಡಬೇಕಾದರೆ ದೈವನಿರ್ಮಿತವಾದ ಸರೋವರಾದಿಗಳ ಜಲ ಸ್ರೋತಮದಲ್ಲಿಯೂ, ಅದಕ್ಕೂ ಅನುಕೂಲವಿಲ್ಲದಿದ್ದರೆ ಕೆರೆ ಕೊಳಗಳಲ್ಲಿಯೂ, ಸ್ನಾನ ವನ್ನು ಮಾಡಬೇಕು[20] ಯಾವುದೂ ಇಲ್ಲದಿದ್ದರೆ ಕಡೆಗೆ ಕೂಪದ ಜಲವನ್ನು ಮೇಲಕ್ಕೆತ್ತಿ ತಂದು ಹೊರಗೆ ಸ್ನಾನವನ್ನು ಮಾಡಬೇಕು.[21] ಇತರರು ತಮ್ಮ ಪಾನಕ್ಕಾಗಿ ನಿರ್ಮಿಸಿಕೊಂಡ ಜಲದಲ್ಲಿ ಸ್ನಾನವನ್ನು ಮಾಡಬಾರದು.[22] ಈ ಜಲ ನಿರ್ದೇಶದಿಂದ ಶೀತೋದಕ ಸ್ನಾನವೂ,[23] ಅವಗಾಹನಸ್ನಾನವೂ, ಪ್ರಶಸ್ತವೆಂದ ಹಾಗಾಯಿತು. ಇಂಥಾ ಸ್ನಾನವೇ ಮುಖ್ಯ ಕಲ್ಪವು. ದೇಹಧರ್ಮದಿಂದಲಾಗಲೀ ಅವಸ್ಥಾಸ್ಥಿತಿಯಿಂದಲಾಗಲೀ ಶೀತೋದಕಸ್ನಾನವು ಅಹಿತವಾಗುವ ಪಕ್ಷದಲ್ಲಿ ಉಷ್ಣೋದಕದಿಂದ ಮಾಡಬಹುದು.[24] ಉಷ್ಣೋದಕವು ಅಧಃಕಾಯಕ್ಕೆ ಬಲಪ್ರದ ವಾದುದೇನೋ ನಿಜ, ಆದರೆ ಅದರಿಂದ ಉತ್ತಮಾಂಗದ ಬಲವು ಕ್ಷೀಣವಾಗುವುದು.[25] ಸ್ನಾನವು ಶರೀರಸೌಖ್ಯಕ್ಕೆ ಮಾತ್ರವೇ ಅಲ್ಲ, ಸಂಧ್ಯಾವಂದನಾದಿ ಕರ್ಮಗಳನ್ನು ಮಾಡುವುದಕ್ಕೂ ಅವಶ್ಯವಾದುದು. ಸ್ನಾನಮಾಡದೆ ಹಾಗೆಯೇ ಕರ್ಮಗಳನ್ನು ಮಾಡುವುದಕ್ಕೆ ಅಧಿಕಾರವೇ ಇಲ್ಲ.[26]

ಆಮೇಲೆ ಉಕ್ತವಾದ ನಿತ್ಯಕರ್ಮಗಳನ್ನು ಮುಗಿಸಿ ಜೀವಿಕೆಯನ್ನು ಆರ್ಜಿ ಸಲು ತನಗೆ ಯೋಗ್ಯವೂ ಅಭ್ಯಸ್ತವೂ ಆದ ವೃತ್ತಿಯಲ್ಲಿ ಪ್ರವರ್ತಿಸಬೇಕು. ಪ್ರಾಣಿ

---

19 ಗುಣಾ ದಶ ಸ್ನಾನಪರಸ್ಯ ಸಾಧೋ ರೂಪಂ ಚ ತೇಜಶ್ಚ ಬಲಂ ಚ ಶೌಚಂ । ಆಯುಷ್ಯಮಾರೋಗ್ಯಮಲೋಲುಪತ್ವಂ ದುಃಸ್ವಪ್ನಘಾತಶ್ಚ ತಪಶ್ಚ ಮೇಧಾಃ ॥ ಮನಃ ಪ್ರಸಾದಜನನಂ ರೂಪಸೌಭಾಗ್ಯವರ್ಧನಂ । ದುಃಖಶೋಕಾಪಹಂ ಸ್ನಾನಂ ಮಾನದಂ ಜ್ಞಾನದಂ ತಥಾ ॥ದಕ್ಷಃ॥ ದೀಪನಂ ವೃಷಮಾಯುಷ್ಯಂ ಸ್ನಾನಮೋಜೋಬಲಪ್ರದಂ । ಕಂಡೂಮಲಶ್ರಮಸ್ವೇದತಂದ್ರಾತೃಡ್ದಾಹಪಾಪ್ಮಜಿತ್ ॥ಅ.ಸಂ-ದಿನಚರ್ಯ॥

20 ನದೀಷು ದೇವಖಾತೇಷು ತಡಾಗೇಷು ಸರಸ್ಸು ಚ । ಸ್ನಾನಂ ಸಮಾಚರೇನ್ನಿತ್ಯಂ ಗರ್ತಪ್ರಸ್ರವಣೇಷು ಚ ॥ಮ-iv-೨೦೩॥ ಸ್ನಾಯಾನ್ನದೀದೇವಖಾತಹ್ರದಪ್ರಸ್ರವಣೇಷು ಚ॥ ಯಾ-i-೧೫೯॥

21 ಕೂಪೇಷೂದ್ಧೃತತೋಯೇನ ಸ್ನಾನಂ ಕುರ್ವೀತ ವಾ ಭುವಿ ॥ವಿಷ್ಣುಪುರಾಣ॥

22 ಪರಕೀಯನಿಪಾನೇಷು ನ ಸ್ನಾಯಾಚ್ಚ ಕದಾಚನ ॥ಮ-iv-೨೦೧॥

23 ವೃಥಾ ತಪ್ತೋದಕಸ್ನಾನಂ ॥ದಕ್ಷಃ॥

24 ಆದಿತ್ಯಕಿರಣೈಃ ಪೂತಂ ಪುನಃಪೂತಂ ತು ವಹ್ನಿನಾ । ಆಮ್ನಾತಮಾತುರಸ್ನಾನೇ ಪ್ರಶಸ್ತಂ ತು ಕುಶೋದಕಂ ॥ಯಮಃ॥

25 ಉಷ್ಣಾಂಬುನಾಧಃಕಾಯಸ್ಯ ಪರಿಷೇಕೋ ಬಲಾವಹಃ । ತೇನೈವ ಚೋತ್ತಮಾಂ ಗಸ್ಯ ಬಲಹೃತ್ಕೇಶಚಕ್ಷುಷಾಂ ॥ಅ.ಸಂ-ದಿನಚರ್ಯ॥

26 ಸ್ನಾತ್ವಾ ಸಮಾಚರೇನ್ನಿತ್ಯಂ ಜಪಹೋಮಂ ವಿಶೇಷತಃ ॥ದಕ್ಷಃ॥ ನಿತ್ಯಂ ಸ್ನಾತ್ವಾ ಶುಚಿಃ ಕುರ್ಯಾದ್ದೇವರ್ಷಿಪಿತೃತರ್ಪಣಂ। ದೇವತಾಭ್ಯರ್ಚನಂ ಚೈವ ಸಮಿದಾಧಾನಮೇವ ಚ ॥ಮ-ii-೧೭೬॥ ಅಸ್ನಾತ್ವಾನಾಚರೇತ್ಕರ್ಮ ಜಪಹೋಮಾದಿಕಂ ಚ ಯತ್ ॥ವ್ಯಾಸಃ॥

ಮಾತ್ರಕ್ಕೆ ದ್ರೋಹವಾಗದಂತೆಯೂ, ಅಥವಾ ದ್ರೋಹವು ಅನಿವಾರ್ಯವಾದರೆ ಎಷ್ಟಲ್ಪದಿಂದ ಕಾರ್ಯಸಾಧನೆಯಾಗುವುದೋ ಅಷ್ಟು ಮಾತ್ರವೇ ಮಾಡಿ ಕುಟುಂಬ ಭರಣಾರ್ಥವಾಗಿ ಧನವನ್ನಾರ್ಜಿಸಬೇಕು. ಅವಶ್ಯವೂ ಅನಿವಾರ್ಯವೂ ಆದರೆ ಆಗ ಮಾತ್ರ ಆಪದ್ಧರ್ಮವೆಂದು ವಿಧಾಯಕವಾಗಿರುವ ವೃತ್ತಿಗಳಿಂದ ಜೀವಿಕೆಯನ್ನಾರ್ಜಿಸಬಹುದು. ಆರ್ಜನೆಯೆಂದು ಅತ್ಯಾಶೆಗೂ ಅತಿಕ್ಲೇಶಕ್ಕೂ ಒಳಗಾಗಬಾರದು. ಕ್ಷುದ್ರ ವೃತ್ತಿಯನ್ನೂ ಅವಲಂಬಿಸಬಾರದು.[27]

ವೃತ್ತಿಯನ್ನು ಮುಗಿಸಿಕೊಂಡು ಮಧ್ಯಾಹ್ನದಲ್ಲಿ ಮತ್ತೆ ಸ್ನಾನವನ್ನು ಮಾಡಿ ಆ ಕಾಲದ ಕರ್ಮವನ್ನು ಪೂರೈಸಿ ದೇವತಾರ್ಚನೆಯನ್ನು ಮಾಡಬೇಕು.[28] ದೇವತಾರ್ಚನೆಯು ಒಂದಲ್ಲ ಒಂದು ಪ್ರಕಾರದಲ್ಲಿ ಮಾನವಜಾತಿಗೇ ಸ್ವಾಭಾವಿಕವಾಗಿ ಪ್ರಾಪ್ತವಾದ ಅವ್ಯಾಜಪ್ರವೃತ್ತಿಯು, ಮತ್ತು ನಿಷ್ಕಾಮಕರ್ಮವು. ದೇವರನ್ನರ್ಚಿಸದವರೇ ವಿರಳ. ಭಕ್ತಿಭಾವನೆಯಲ್ಲಿ ಭೇದವಿಲ್ಲ, ವಿಧಿವಿಧಾನದಲ್ಲಿ ಮಾತ್ರ ಪ್ರಭೇದಗಳು. ಒಬ್ಬರನ್ನೊಬ್ಬರು ಆಕ್ಷೇಪಿಸಬಾರದು.

ಆಮೇಲೆ ಭೋಜನವನ್ನು ಮಾಡಬೇಕು. ಹಗಲಿನಲ್ಲೊಂದಾವೃತ್ತಿ, ರಾತ್ರಿಯಲ್ಲೊಂದಾವೃತ್ತಿ, ಅಂತೂ ದಿವಸಕ್ಕೆ ಎರಡೇ ಊಟಗಳು ವಿಧಾಯಕವಾಗಿವೆ. ಹಗಲು ಮೂರನೆಯ ಜಾವದಲ್ಲಿಯೂ ರಾತ್ರಿಯಲ್ಲಿ ಮೊದಲನೆಯ ಜಾವದಲ್ಲಿಯೂ ಊಟಕ್ಕೆ ಸಕಾಲವು. ಪರಿಶುದ್ಧವಾದ ಸ್ಥಳದಲ್ಲಿ[29] ಶುದ್ಧವಾದ ಪಾತ್ರೆಯಲ್ಲೋ ಅಥವಾ ಎಲೆಯಲ್ಲೋ[30] ಊಟವನ್ನು ಮಾಡಬೇಕು. ಕುಟುಂಬದ ಅನ್ನಾತುರರಿಗೂ

---

27 ಅದ್ರೋಹೇಣೈವ ಭೂತಾನಾಮಲ್ಪದ್ರೋಹೇಣ ವಾ ಪುನಃ । ಯಾ ವೃತ್ತಿಸ್ತಾಂ ಸಮಾಸ್ಥಾಯ ವಿಪ್ರೋ ಜೀವೇದಿನಾಪದಿ ॥ಮ-iv-೨॥ ಉತ್ತಿಷ್ಠೇತ ತತೋತ್ಥರ್ಥಮರ್ಥೇಷ್ವರ್ಥಾನುಬಂಧಿಷು । ಲೋಕದ್ವಯಾವಿರುದ್ಧಾಂ ಚ ಧನಾರ್ಥೀ ಸಂಶ್ರಯೇತ್ಕ್ರಿಯಾಂ ॥ .ಅಕ್ಷುದ್ರವೃತ್ತಿಃ (ಸ್ಯಾತ್) ॥ಆ.ಸಂ-ದಿನಚರ್ಯೆ॥ ಯಾತ್ರಾಮಾತ್ರಪ್ರಸಿದ್ಧ್ಯರ್ಥಂ ಸ್ವೈಃ ಕರ್ಮಭಿರಗರ್ಹಿತೈಃ । ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಂ ॥ಮ-iv-೩॥ ಯಾತ್ರಾ=ಪ್ರಾಣಸ್ಥಿತಿಃ । ಶಾಸ್ತ್ರೀಯಕುಟುಂಬಸಂವರ್ಧನನಿತ್ಯಕರ್ಮಾನುಷ್ಠಾನಪೂರ್ವಕಪ್ರಾಣಸ್ಥಿತಿಮಾತ್ರಾರ್ಥಂ ನ ಭೋಗಾರ್ಥಂ ॥ಕುಲ್ಲೂಕಃ॥ ವಿದ್ಯಾ ಶಿಲ್ಪಂ ಭೃತಿಸ್ಸೇವಾ ಗೋರಕ್ಷಂ ವಿಪಣಿಃ ಕೃಷಿಃ । ಧೃತಿರ್ಭೈಕ್ಷ್ಯಂ ಕುಸೀದಂ ಚ ದಶ ಜೀವನಹೇತವಃ ॥ಮ-x ೧೧೬॥ ಇತ್ಯೇಭಿರ್ದಶಭಿರಾಪದಿ ಜೀವನೀಯಂ ॥ಕುಲ್ಲೂಕಃ॥ (ವೃತ್ತಿ ವಿಚಾರವಾಗಿ ಮುಂದೊಂದು ಪ್ರಕರಣವನ್ನೇ ಬರೆದಿದೆ. ವಿಶೇಷ ನಿಯಮಗಳನ್ನಲ್ಲಿ ನೋಡುವುದು.)

28 (ಬ್ರಹ್ಮಾಣಂ) ಶಂಕರಂ ಸೂರ್ಯಂ ತಥೈವ ಮಧುಸೂದನಂ । ಅನ್ಯಾಂಶ್ಚಾಭಿಮತಾನ್ ದೇವಾನ್ ಭಕ್ತ್ಯಾಚಾಕ್ರೋಧನೋರ್ಚಯೇತ್ ॥ಕೂರ್ಮಪುರಾಣ॥ ಯೋ ಯೋ ಯಾಂ ಯಾಂ ತನುಂ ಭಕ್ತಶ್ಶ್ರದ್ಧಯಾರ್ಚಿತುಮಿಚ್ಛತಿ । ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವವಿದಧಾಮ್ಯಹಂ ॥ ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ। ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥ಭ.ಗೀ.॥

29 ಉಪಲಿಪ್ತೇ ಸಮೇ ಸ್ಥಾನೇ ಶುಚೌ ಶ್ಲಕ್ಷ್ಣಸಮನ್ವಿತೇ ॥ಬೋಧಾಯನಃ॥

30 ಪ್ರಶಸ್ತಶುದ್ಧಪಾತ್ರೇಷು ಭುಂಜೀತಾಕುಪಿತೋದ್ವಿಜಃ ॥ಕೂರ್ಮಪುರಾಣೇ॥

ಅಶನಾರ್ಥಿಗಳಿಗೂ ಬಂದ ಅತಿಥಿಅಭ್ಯಾಗತಬಂಧುಮಿತ್ರರಿಗೂ ಯಥಾಶಕ್ತಿಯಾಗಿ ಆದರಿಸಿ ಭೋಜನವನ್ನು ಮಾಡಿಸಿ ತಾನೂ ಭೋಜನವನ್ನು ಮಾಡಬೇಕು; ಲಭ್ಯವಾದ ಅನ್ನವನ್ನು ಅಭಿನಂದಿಸಿ ನಿಂದೆಯನ್ನು ಮಾಡದೆ ಅಸಹ್ಯಪಡದೆ ಪ್ರಸನ್ನಚಿತ್ತನಾಗಿ ಊಟವನ್ನು ಮಾಡಬೇಕು.[31] ಸಾಧ್ಯವಾದಮಟ್ಟಿಕ್ಕೂ ಒಬ್ಬನೇ ಊಟವನ್ನು ಮಾಡಬಾರದು, ತನ್ನೊಬ್ಬನಿಗಾಗಿ ಅಡಿಗೆಯನ್ನು ಕೂಡ ಮಾಡಿಸಬಾರದು.[32] ಇನ್ನೊಬ್ಬರ ಮನೆಯ ಅಡಿಗೆಯ ರುಚಿಯನ್ನು ಬಯಸಬಾರದು, ತನಗೆ ದೇವರು ಕೊಟ್ಟ ಅನ್ನದಿಂದಲೇ ಸಂತುಷ್ಟನಾಗಬೇಕು.[33] ಭೋಜನಾನಂತರದಲ್ಲಿ ತಾಂಬೂಲವನ್ನು ಸೇವಿಸಿ[34] ಅಹಶ್ಶೇಷವನ್ನು ಶಿಷ್ಯರೂ ಇಷ್ಟರೂ ಬಂಧುಗಳೂ ಮುಂತಾದವರೊಡನೆ ಸುಖಸಂಭಾಷಣೆಯಲ್ಲಿಯೂ ಪುರಾಣೇತಿಹಾಸ ಶ್ರವಣ ಕಥನ ವಾಚನಾದಿಗಳಲ್ಲಿಯೂ ಅಥವಾ ಅನಾಯಾಸವಾಗಿ ಮಾಡಬಹುದಾದ ಕಾರ್ಯಗಳಲ್ಲಿಯೂ ತೊಡಗಿ ಸುಖವಾಗಿ ಕಳೆಯಬೇಕು[35] ಈ ಕಾಲದ ಕಾರ್ಯಪ್ರಣಾಳಿಯಲ್ಲಿ ಇಂಥಾ ಸುಖವೆಲ್ಲಿ ಲಭ್ಯ? ಯಾರೋ ಯಾವ ಸೀಮೆಯವರೋ ಯಾವ ಭೂವಲಯ

---

31 ಬಾಲಸ್ವವಾಸಿನೀವೃದ್ಧಗರ್ಭಿಣ್ಯಾತುರಕನ್ಯಕಾಃ । ಸಂಭೋಜ್ಯಾತಿಥಿಭೃತ್ಯಾಂಶ್ಚ ದಂಪತ್ಯೋಶ್ಶೇಷಭೋಜನಂ ॥ಯಾ-1-೧೦೫॥ ಅನ್ನಪಾನವಿಧಾನೇನ ಭುಂಜೀತಾನ್ನಂ ವಿನಾತ್ಯಯಾತ್ । ಅಭಿನಂದ್ಯಪ್ರಸನ್ನಾತ್ಮಾ ಹುತ್ವಾ ದತ್ವಾ ಚ ಶಕ್ತಿತಃ ॥ ಪಾಕಂ ಸಜಲಮೇಕಾಂತೇ ಯಥಾಸುಖಮುಪಿಬ್ರುರ್ವ । ಪ್ರಯಚ್ಛೇತ್ಸರ್ವಮುದ್ದಿಶ್ಯ ... ...॥ಅ.ಸಂ.-ದಿನಚರ್ಯ॥ ಭುಕ್ತವತ್ಸ್ವಥ ವಿಪ್ರೇಷು ಸ್ವೇಷು ಭೃತ್ಯೇಷು ಚೈವ ಹಿ । ಭುಂಜೀಯಾತಾಂ ತತಃ ಪಶ್ಚಾದವಶಿಷ್ಟಂ ತು ದಂಪತೀ ॥ಮ-iii-೧೧೬॥

32 ನಾದತ್ವಾ ವೃಷ್ಟಮಶ್ನೀಯಾತ್ ॥ಗೌತಮಃ॥ ನಾದತ್ವಾ ॥೩೨॥ ನಾಹುತ್ವಾ ॥೩೩॥ ವಿ-೬೮॥ ನ ಪಚೇದನ್ನಮಾತ್ಮನೇ ॥ಯಾ-i-೧೦೪॥ ಪಾಚಯೇನ್ನಾನ್ನಮಾತ್ಮನೇ ॥ .॥ಪ್ರಿಯಾತಿಥಿಃ (ಸ್ಯಾತ್) ॥ಅ.ಸಂ-ದಿನಚರ್ಯ॥

33 ಪರಪಾಕರುಚಿರ್ನ ಸ್ಯಾತ್ ॥ಯಾ-i.೧೧೨॥

34 ಭೂಯೋಽಪ್ಯಾಚಮ್ಯ ಕರ್ತವ್ಯಂ ತತಸ್ತಾಂಬೂಲಭಕ್ಷಣಂ ॥ಮಾರ್ಕಂಡೇಯಃ॥ ರುಚಿವೈಶದ್ಯಸೌಗಂಧ್ಯಮಿಚ್ಛನ್ ವಕ್ತ್ರೇಣ ಧಾರಯೇತ್ । ಜಾತೀಲವಂಗಕರ್ಪೂರಕಂಕೋಲಕಟುಕೈಸ್ಸಹ ॥ ತಾಂಬೂಲೀನಾಂ ಕಿಸಲಯಂ ಹೃದ್ಯಂ ಪೂಗಫಲಾನ್ವಿತಂ ॥ಅ.ಸಂ.ದಿನಚರ್ಯ॥

35 ಅಹಶ್ಶೇಷಂ ಸಮಾಸೀತ ಶಿಷ್ಟೈರಿಷ್ಟೈಶ್ಚ ಬಂಧುಭಿಃ ॥ಯಾ-i.೧೧೩॥ ಅನಾಯಾಸಪ್ರದಾಯೀನಿ ಕುರ್ಯಾತ್ಕರ್ಮಾಣ್ಯತಂದ್ರಿತಃ । ನಾಸಚ್ಛಾಸ್ತ್ರವಿನೋದೇನ ಸನ್ಮಾರ್ಗಾರ್ಥವಿರೋಧಿನಾ ॥ವಿಷ್ಣುಪುರಾಣ॥ ಭುಕ್ತ್ವಾ ತು ಸುಖಮಾಸ್ಥಾಯ ತದನ್ನಂ ಪರಿಣಾಮಯೇತ್ । ಇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಚಾಭ್ಯಸೇತ್ ॥ ವೃಥಾಪವಾದವಾಕ್ಯಾನಿ ಪರಿವಾದಂ ಚ ವರ್ಜಯೇತ್ ॥ದಕ್ಷಃ॥ ನ ಭುಕ್ತಮಾತ್ರಆಯಸ್ಯೇನ್ನನಿಷಿದ್ಧಾಂ ಭಜೇತ್ಸುಖಂ । ಧರ್ಮೋತ್ತರಾಭಿರರ್ಥ್ಯಾಭಿಃ ಕಥಾಭಿಸ್ತ್ರಿಗುಣಾತ್ಮಭಿಃ ಮಧ್ಯಂ ದಿನಸ್ಯ ಗಮಯೇದಿಷ್ಟಶಿಷ್ಟಸಹಾಯವಾನ್ ॥ (ಮಧ್ಯಂದಿನಸ್ಯಪ್ರಾತಸ್ಸಾಯಂಮಧ್ಯೇ) ॥ಅ.ಸಂ-ದಿನಚರ್ಯ॥

ದವರೋ ಯಾವ ಸಂಸ್ಕೃತಿಯವರೋ ತಂದಿಟ್ಟ ಕಾರ್ಯಪ್ರಣಾಳಿಗಾಗಿ ಸ್ವಾತಂತ್ರ್ಯವು ಬಂತೆಂದು ಹೇಳಿಕೊಳ್ಳುತ್ತಾ ಊಟ ಮಾಡಿ ಶ್ರಮಿಸುತ್ತಾ ನರಳುತ್ತಿರುವುದೇನು ಸ್ವಯಂಕೃತಾಪರಾಧವೋ ದೈವಾಯತ್ತಾಪರಾಧವೋ ತಿಳಿದವರು ಇತ್ಯರ್ಥ ಮಾಡಬೇಕು.

ರಾತ್ರಿಯ ಪ್ರಥಮಯಾಮದಲ್ಲಿ ರಾತ್ರಿಯ ಕರ್ಮಗಳನ್ನು ಪೂರೈಸಿ ತನ್ನ ಪೋಷ್ಯವರ್ಗದವರೊಡನೆ ಯಥಾಸುಖವಾಗಿ ಭೋಜನವನ್ನು ಮಾಡುವುದು.[36] ಲಘುವಾಗಿಯೂ ಹಿತವಾಗಿಯೂ ಭೋಜನವನ್ನುಮಾಡಬೇಕು; ಗುರುವಾದ ಆಹಾರವನ್ನೂ ಅತಿಭೋಜನವನ್ನೂ ವರ್ಜ್ಯಮಾಡಬೇಕು.[37] ಆಮೇಲೆ ತನ್ನ ಆಯವ್ಯಯವುಂತಾದ ಗೃಹಕೃತ್ಯಗಳನ್ನು ಪರಿಶೀಲಿಸಿ,[38] ಜಲಶಂಕೆಯನ್ನು ನಿವಾರಿಸಿಕೊಂಡು ಕೈಕಾಲುಗಳನ್ನು ತೊಳೆದುಕೊಂಡು,[39] ಮಹಾವಿಷ್ಣುವನ್ನು ಸ್ಮರಿಸಿ[40] ಉತ್ತರ ದಿಕ್ಕಿಗೂ ಪಶ್ಚಿಮದಿಕ್ಕಿಗೂ ತಲೆಯನ್ನು ಮಾಡಿಕೊಳ್ಳದೆ[41] ಸ್ವಸ್ಥಚಿತ್ತನಾಗಿ ಸುಖ ಶಯ್ಯೆಯಲ್ಲಿ ಪವಡಿಸುವುದು.

ಈ ಪ್ರಕಾರವಾಗಿ ನಿತ್ಯವೂ ನಿಯಮದಿಂದ ವರ್ತಿಸಿ ಅಸಾರವಾದೀದೇಹದಿಂದ ಸಾರವಾದ ಮಹಾಫಲವನ್ನು ಗಳಿಸಬೇಕು. ವಿರುದ್ಧವಾಗಿ ವರ್ತಿಸುವುದರಿಂದ ಅಪಾಯವೆಂಬ ಭೀತಿಯಿರಬೇಕು. ವಿಹಿತಾಚಾರದಿಂದ ಆರೋಗ್ಯವೂ ಐಶ್ವರ್ಯವೂ ಪ್ರಜ್ಞೆಯೂ ಸುಖವೂ ಹಿತವೂ ದೀರ್ಘಾಯುಷ್ಯವೂ ಲಭಿಸುವುದು; ವ್ಯತ್ಯಸ್ತವಾಗಿ ನಡೆದರೆ ಫಲವೂ ತಲೆಕೆಳಗಾಗುವುದು.[42]

---

36 ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಹುತ್ವಾಗ್ನೀನ್ ಸ್ತಾನುಪಾಸ್ಯ ಚ । ಭೃತ್ಯೈಃ ಪರಿವೃತೋ ಭೂತ್ವಾ ನಾತಿತೃಪ್ತ್ಯಾಥ ಸಂವಿಶೇತ್ ।।ಯಾ.i-೧೧೪।।

37 ಸಾಯಂ ಭುಕ್ತ್ವಾ ಲಘುಹಿತಂ ।।ಅ.ಸಂ-ದಿನಚರ್ಯ।।

38 ಚಕಾರಾದಾಯವ್ಯಯಾದಿ ಗೃಹಚಿಂತಾಂ ನಿರ್ವರ್ತ್ಯ ।।ಮಿತಾಕ್ಷರಾ.ಯಾ-i-೧೧೪।।

39 ಕೃತಪಾದಾದಿಶೌಚಸ್ತು ಭುಕ್ತ್ವಾ ಸಾಯಂ ತತೋ ಗೃಹೀ ।।ಗಚ್ಛೇಚ್ಛಯ್ಯಾಂ... ।।ವಿಷ್ಣುಪುರಾಣೇ।।

40 ಶಾಸ್ತಾರಮನುಸಂಸ್ಮೃತ್ಯ ಸ್ವಶಯ್ಯಾಂ ಚಾಥ ಸಂವಿಶೇತ್ ।।ಅ.ಸಂ-ದಿನಚರ್ಯ।। ವಿಷ್ಣುಂ ಸಂಸ್ಮೃತ್ಯ ।।ಹಾರೀತಃ।।

41 ಪ್ರಾಚ್ಯಾಂ ದಿಶಿ ಶಿರಶ್ಶಸ್ತಂ ಯಾಮ್ಯಾಯಾಮಥವಾ ನೃಪ । ಸದೈವ ಸ್ವಪತೋ ಪುಂಸೋ ವಿಪರೀತಂ ತು ರೋಗದಂ ।।ವಿಷ್ಣುಪುರಾಣೇ।। ಪ್ರಾಗ್ದಕ್ಷಿಣಶಿರಾಃ ।।ಅ. ಸಂ-ದಿನಚರ್ಯ।।

42 ಆದದೀತ ಸದಾ ದೇಹಾದಿತ್ಥಂ ಸಾರಮಸಾರತಃ । ಭಿಭ್ಯತ್ತತಿಕ್ಷಣಂ ಮೃತ್ಯೋ ರಯಥಾತಥ ಚೇಷ್ಟಿತಾತ್ ।। ಆರೋಗ್ಯವಿಭವಪ್ರಜ್ಞಾವಯೋಧರ್ಮಕ್ರಿಯಾವತಃ । ಸುಖಮಾಯುರ್ಹಿತಂ ಚೋಕ್ತಂ ವಿಪರೀತಂ ವಪರ್ಯಯೇ ।।ಅ.ಸಂ-ದಿನಚರ್ಯ।।

## ೨. ವೇಷ (ಉಡಿಗೆತೊಡಿಗೆ)

ವಯಸ್ಸಿಗೂ, ವಿದ್ಯಕ್ಕೂ, ಕುಲಕ್ಕೂ, ಧನಕ್ಕೂ, ದೇಶಕ್ಕೂ, ಸಮಯಕ್ಕೂ, ಸಂದರ್ಭಕ್ಕೂ ಅನುರೂಪವಾದ ಉಡಿಗೆತೊಡಿಗೆಗಳನ್ನು ಧರಿಸಬೇಕು[1] ಕೂದಲನ್ನೂ, ಗಡ್ಡ ಮೀಸೆಗಳನ್ನೂ, ಉಗುರುಗಳನ್ನೂ ಬೆಳೆಸಿಕೊಂಡು ವಿಕಾರವಾಗಿರಬಾರದು ಆಯುಷ್ಕರ್ಮವನ್ನು ಮಾಡಿಸಿಕೊಂಡು ಉಗುರುಗಳನ್ನು ತೆಗೆಸಿಹಾಕಿ ಪರಿಷ್ಕಾರವಾಗಿ ಸ್ನಾನವನ್ನು ಮಾಡಿ ನಿರ್ಮಲವಾದ ಶುಭ್ರವಸ್ತ್ರವನ್ನುಟ್ಟು ಶುಚಿರ್ಭೂತನಾಗಿರಬೇಕು.[2] ಯಾವ ಯಾವ ಕಾಲದಲ್ಲಿ, ಯಾವ ಯಾವ ದೇಶದಲ್ಲಿ, ಯಾವ ಯಾವ ಸಮಯದಲ್ಲಿ, ಯಾವ ಯಾವ ಸಂದರ್ಭದಲ್ಲಿ, ಎಲ್ಲರೂ ಹೇಗೆ ಹೇಗೆ ಪ್ರಸಿದ್ಧವಾಗಿ ಕೇಶಪ್ರಸಾಧನವನ್ನು ಮಾಡಿಕೊಂಡು ವಸ್ತ್ರಾಲಂಕಾರವನ್ನು ಧರಿಸುವರೋ ತಾನೂ ಹಾಗೆಯೇ ಕೇಶಪ್ರಸಾಧನವನ್ನು ಮಾಡಿಕೊಂಡು ವಸ್ತ್ರಾಲಂಕಾರಗಳನ್ನು ಧರಿಸಬೇಕು.[3] ಊರೆಲ್ಲರಿಗೂ ಒಂದು ದಾರಿಯಾದರೆ ಹೆಡುಹುಟ್ಟಿದವನಿಗೇ ಒಂದು ದಾರಿ ಎನ್ನುವಹಾಗೆ ಇರಬಾರದು. ಅನುಕೂಲವಿದ್ದರೆ ಜೀರ್ಣವೂ ಮಲಿನವೂ ಆದ ವಸ್ತ್ರವನ್ನು ಧರಿಸಲೇಬಾರದು.[4] ಹಾಗೆಂದಮಾತ್ರಕ್ಕೆ ವ್ಯರ್ಥವೂ ನಿರರ್ಥಕವೂ ಆದ ವಸ್ತ್ರಾಲಂಕಾರಗಳ ಆಡಂಬರಕ್ಕೂ ಡಂಭಾಚಾರಕ್ಕೂ ಹೋಗಬೇಕೆಂದರ್ಥವಲ್ಲ. ಉದ್ಧತ ವಸ್ತ್ರಭೂಷಣಗಳ ಹವ್ಯಾಸಕ್ಕೇ ಹೋಗಬಾರದು.[5] ಮತ್ತೊಬ್ಬರು ಧರಿಸಿ ವಿಸರ್ಜಿಸಿದ ವಸ್ತ್ರವನ್ನೂ ಪುಷ್ಪಮಾಲೆಯನ್ನೂ ಯಜ್ಞೋಪವೀತವನ್ನೂ ಅಲಂಕಾರವನ್ನೂ (ಒಡವೆಯನ್ನೂ) ಪಾದರಕ್ಷೆಯನ್ನೂ ನೀರಿನ ಪಾತ್ರೆಯನ್ನೂ ಊಟಮಾಡಿ ಎಂಜಲು ಮಾಡಿದ ಪಾತ್ರೆಯನ್ನೂ ಉಪಯೋಗಿಸಬಾರದು.[6] ಮತ್ತೊಬ್ಬರ ಹಾಸಿಗೆಯನ್ನೂ ಪೀಠವನ್ನೂ ಭವನವನ್ನೂ ವಾಹನವನ್ನೂ ಉದ್ಯಾನವನ್ನೂ ಅವರಾಗಿ ಕೊಟ್ಟರೆ ಹೊರತು, ಸೇವಿಸಬಾರದು, ಸೇವಿಸಿದರೆ ಅವರು ಮಾಡಿದ

---

1 ವಯೋಽನುರೂಪಂ ವೇಷಂ ಕುರ್ಯಾತ್ ॥೩॥ ಶ್ರುತಸ್ಯಾಭಿಜನಸ್ಯ ಧನಸ್ಯ ದೇಶಸ್ಯ ಚ ॥೬॥ ವಿ-೭೧॥

2 ಕ್ಲೃಪ್ತಕೇಶನಖಶ್ಮಶ್ರುರ್ದಾಂತಶ್ಶುಕ್ಲಾಂಬರಶ್ಶುಚಿಃ ॥ ..ಸ್ಯಾನ್ನಿತ್ಯಂ. ॥ಮ-vi-೩೨॥
ಶುಕ್ಲಾಂಬರಧರೋ ನೀಚಕೇಶಶ್ಮಶ್ರುನಖಶ್ಶುಚಿಃ ॥ಯಾ-i-೧೩೧॥ ಶುಕ್ಲೇ = ಧೌತೇ॥ ಮಿತಾಕ್ಷರಾ॥

3 ಪ್ರಸಿದ್ಧಕೇಶವಾಗ್ವೇಷಶಮಸಾಂತ್ವಪರಾಯಣಃ ॥ಆ ಸಂ-ದಿನಚರ್ಯ॥

4 ನ ಜೀರ್ಣಮಲವದ್ವಾಸಾ ಭವೇಚ್ಚ ವಿಭವೇ ಸತಿ ॥ಮ-iv-೩೪॥
ಸತಿ ವಿಭವೇ ನ ಜೀರ್ಣಮಲವದ್ವಾಸಾ ಸ್ಯಾತ್ ॥ವಿ-೭೧-೯॥

5 ನೋದ್ಧತಃ ॥ವಿ..೭೧—೮॥

6 ಉಪಾನಹೌ ಚ ವಸ್ತ್ರಂಚ ಧೃತಮನ್ಯೈರ್ನ ಧಾರಯೇತ್ । ಉಪವೀತಮಲಂಕಾರಂ ಸ್ರಜಂ ಕರಕಮೇವ ಚ ॥ಮ-iv-೬೬॥
ವಸ್ತ್ರೋಪಾನಹಮಾಲ್ಯೋಪವೀತಾನ್ಯನ್ಯಭೃತಾನಿ (ನಧಾರಯೇತ್) ॥ವಿ-೭೧-೪೭॥

ಪಾಪದ ಚತುರ್ಥಾಂಶಕ್ಕೆ ಭಾಗಿಯಾಗಬೇಕಾಗುತ್ತದೆ.[7] ನಿರ್ಗಂಧವೂ, ಉಗ್ರ ಗಂಧವೂ(ಅತಿವಾಸನೆಯುಳ್ಳದ್ದೂ), ರಕ್ತವರ್ಣದ್ದೂ, ಆದ ಪುಷ್ಪವನ್ನು ಧರಿಸ ಬಾರದು. ಜಲದಲ್ಲಿ ಜನಿಸಿದ ಕೆಂದಾವರೆ ಮುಂತಾದ ಹೂವುಗಳು ಕೆಂಪಗಿದ್ದರೂ ವರ್ಜ್ಯವಲ್ಲ.[8] ತಾನು ಮುಡಿದ ಹೂವನ್ನೂ ತಾನು ಧರಿಸಿದ ಮಾಲೆಯನ್ನೂ ತಾನೇ ಕಿತ್ತುಹಾಕಬಾರದು.[9] ಬಿದಿರಿನ ಕೋಲನ್ನು ಹಿಡಿಯಬೇಕು, ಹತ್ತಿಯಿಂದ ಮಾಡಿದ ಜನಿವಾರವನ್ನು ಹಾಕಿಕೊಳ್ಳಬೇಕು, ಸುಂದರವಾದ ಸುವರ್ಣಕುಂಡಲ ಗಳನ್ನು ಧರಿಸಬೇಕು.[10] ಅಂತೂ ಅಂದಚೆಂದವಾಗಿ ಅಲಂಕಾರವನ್ನು ಮಾಡಿ ಕೊಂಡು ಗಂಭೀರವಾಗಿ ಇರಬೇಕು.[11]

## ೩. ಭಾಷೆ (ಮಾತು)

ಸತ್ಯವನ್ನೇ ಆಡಬೇಕು.[1] ಸತ್ಯಸಂಧತ್ವಕ್ಕೆ ಪ್ರಮಾದದಿಂದ ಬಾಧೆಯು ಪ್ರಾಪ್ತವಾಗದಂತೆ ಜಾಗರೂಕರಾಗಿರಬೇಕು.[2] ಅನೃತವನ್ನಾಡಬಾರದು.[3] ಸತ್ಯ ವನ್ನು ನುಡಿಯಬೇಕು, ಪ್ರಿಯವಾಗಿ ನುಡಿಯಬೇಕು, ಅಪ್ರಿಯವಾದ ಸತ್ಯವನ್ನೂ ನುಡಿಯಬಾರದು, ಪ್ರಿಯವಾದರೂ ಅನೃತವಾದರೆ ಅದನ್ನು ನುಡಿಯಬಾರದು, ಇದು ಸನಾತನಧರ್ಮವು.[4] ಧರ್ಮವಿಹಿತವೂ ಪ್ರಯೋಜನಕಾರಿಯೂ ಪ್ರಿಯ ವಾದುದೂ ಸತ್ಯವಾದುದೂ ಹಿತಕಾರಿಯೂ ಪಥ್ಯವಾದುದೂ ಆದಂಥಾ ಮಾತನ್ನು

---

7 ಪರಶಯ್ಯಾಸನೋದ್ಯಾನಗೃಹಯಾನಾನಿ ವರ್ಜಯೇತ್ । ಅದತ್ತಾನಿ . ॥ಯಾ-i-೧೬೦॥ ಯಾನಶಯ್ಯಾಸನಾನ್ಯಸ್ಯ ಕೂಪೋದ್ಯಾನಗೃಹಾಣಿ ಚ । ಅದತ್ತಾನ್ಯುಪಭುಂಜಾನ ಏನಸಸ್ಸ್ಯಾತ್ತುರೀಯಭಾಕ್ ॥ಮ-iv-೨೦೨॥

8 ನ ನಿರ್ಗಂಧೋಗ್ರಗಂಧಿ ರಕ್ತಂ ಚ ಮಾಲ್ಯಂ ಬಿಭೃಯಾತ್॥೧೧॥ ಬಿಭೃಯಾಜ್ಜಲಜಂ ರಕ್ತಮಪಿ ॥೧೨॥ ವಿ-೬೧॥

9 ನಾತ್ಮನೋಪಹರೇತ್ಸ್ರಜಂ ॥ಮ-iv-೫೫॥
ನಾತ್ಮನಸ್ಸ್ರಜಮುಪಕರ್ಷೇತ್ ॥ವಿ-೬೧-೫೫॥

10 ವೈಣವೀಂ ಧಾರಯೇದ್ಯಷ್ಟಿಂ ಸೋದಕಂ ಚ ಕಮಂಡಲುಂ । ಯಜ್ಞೋಪವೀತಂ ವೇದಂ ಚ ಶುಭೇ ರೌಕ್ಮೇ ಚ ಕುಂಡಲೇ ।।ಮ-iv-೩೬।।

11 ಅಲಂಕೃತಸ್ತಿಷ್ಠೇತ್ ।।ವಿ-೬೧-೮೮।। (ಸ್ಮೃತಿಕಾರರು ಧರ್ಮಶಾಸ್ತ್ರದಲ್ಲಿ ಕೇವಲ ಮತಾಚಾರಗಳನ್ನು ಬೋಧಿಸಿರುತ್ತಾರೆ, ಎಂಬ ಮಿಥ್ಯಾಭಾವನೆಯನ್ನು ಈ ಸ್ಮೃತಿವಾಕ್ಯಗಳು ಸ್ಪಷ್ಟವಾಗಿ ನಿವಾರಿಸುವುವು. ಧರ್ಮದಲ್ಲಿ ಐಹಿಕಾಭ್ಯುದಯವೂ ಅಂತರ್ಗತವಾಗಿವೆ ಎಂಬ ಕಣಾದರ ಧರ್ಮಲಕ್ಷಣ ಸೂತ್ರಕ್ಕಿವು ಉದಾಹರಣೆಗಳು—ಯತೋಭ್ಯುದಯನಿಶ್ರೇಯ ಸಿದ್ಧಿಸ್ಸಧರ್ಮಃ ।।ವೈಶೇಷಿಕ।। ಈ ಪ್ರಕರಣದಲ್ಲೀಪ್ರಕಾರದ ವಾಕ್ಯಗಳಿನ್ನೂ ಅನೇಕವಾಗಿವೆ.)

1 ಸತ್ಯಂ ವದ ॥ತೈ.ಉ.॥ 2 ಸತ್ಯಾನ್ನಪ್ರಮದಿತವ್ಯಂ ॥ತೈ ಉ.॥

3 ನಾನೃತಂ (ಕೀರ್ತಯೇತ್) ॥ವಿ-೬೧-೭೩॥

4 ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನಬ್ರೂಯಾತ್ಸತ್ಯಮಪ್ರಿಯಂ । ಪ್ರಿಯಂ ಚ ನಾನೃತಂ ಬ್ರೂಯಾದೇಷಧರ್ಮಸ್ಸನಾತನಃ ॥ಮ-iv-೧೩೮॥

ಆಡಬೇಕು.[5] ಅಂದರೆ ಅಪ್ರಿಯವಾದ ಯಥಾರ್ಥವನ್ನೆಂದಿಗೂ ನುಡಿಯಬಾರದೆಂದಾಗಲೀ ಪ್ರಿಯವಾದ ಅಯಥಾರ್ಥವನ್ನೆಂದಿಗೂ ಆಡಬಾರದೆಂದಾಗಲೀ ತಾತ್ಪರ್ಯವಲ್ಲ. ಹಾಗೆಯೇ ಸತ್ಯವನ್ನೂ ಪ್ರಿಯವಾದುದನ್ನೂ ಆಡಲೇಬೇಕೆಂದೂ ತಾತ್ಪರ್ಯವಲ್ಲ. ಆಡಬೇಕಾಗಿ ಬಂದರೆ ಆಗ ಸತ್ಯವನ್ನೂ ಪ್ರಿಯವನ್ನೂ ಆಡಬೇಕು. ಪ್ರಕೃತವೊದಗಿ ಒಳ್ಳೆಯ ಫಲವು ಪ್ರಾಪ್ತವಾಗುವಹಾಗಿದ್ದರೆ ಆಗ ಅಪ್ರಿಯವಾದ ಯಥಾರ್ಥವನ್ನೂ ಪ್ರಿಯವಾದ ಅಯಥಾರ್ಥವನ್ನೂ ನುಡಿಯಬಹುದು.[6] ಉದಾಹರಣೆಗಾಗಿ—ಪ್ರಯಾಣಿಕರನ್ನು ಕಾಡಿನಲ್ಲಿ ಕಳ್ಳರು ಅಟ್ಟಿಕೊಂಡು ಬರುತ್ತಾರೆ, ಪ್ರಯಾಣಿಕರು ಔತುಕೊಳ್ಳುತ್ತಾರೆ, ನಾವು ಕಂಡಿರುತ್ತೇವೆ, ಕಳ್ಳರು ಬಂದು ಅವರೆಲ್ಲಿ ಎಂದು ಕೇಳುತ್ತಾರೆ, ಸತ್ಯವನ್ನು ನುಡಿಯಬೇಕೆಂದು ಔತುಕೊಂಡ ಸ್ಥಳವನ್ನು ಕಳ್ಳರಿಗೆ ಹೇಳಬಾರದು. ಅದರಿಂದ ಅನರ್ಥವಾಗುತ್ತದೆ. ಸತ್ಯವಾದಿಯೆಂದೊಬ್ಬ ಮುನಿಯು ಹಾಗೆ ಹೇಳಿ ಪಾಪಭಾಗಿಯಾದನೆಂದು ಐತಿಹ್ಯವಿದೆ. ಭೃಗುಪತ್ನಿಯನ್ನು ಅವಹರಿಸಲು ಬಂದ ರಾಕ್ಷಸನಿಗೆ ಅಗ್ನಿಯು ಸತ್ಯವು ವಕ್ತವ್ಯವೆಂದು ಈಕೆಯೇ ಅವಳೆಂದು ಹೇಳಿದುದರಿಂದ ರಾಕ್ಷಸನು ಆಕೆಯನ್ನೆತ್ತಿಕೊಂಡು ಓಡಿದನು, ಅದರಿಂದ ಅಗ್ನಿಯು ಭೃಗುವಿನ ಶಾಪಕ್ಕೆ ಭಾಗಿಯಾದನೆಂದೂ ಐತಿಹ್ಯವಿದೆ. ರೋಗಿಗೆ ಪ್ರಿಯವೆಂದು ಅಪಥ್ಯವನ್ನು ಸೇವಿಸಬಹುದೆಂದೂ, ವಿದ್ಯಾರ್ಥಿಗಳಿಗೆ ಆಟವು ಪ್ರಿಯವೆಂದು ವ್ಯಾಸಂಗದ ಸಮಯದಲ್ಲಿ ಆಟವಾಡಿ ಎಂದು ಹೇಳುವುದೂ, ಪ್ರಿಯವಾದುದನ್ನೆಲ್ಲ ಆಡಬಾರದೆಂಬುದಕ್ಕೆ ನಿದರ್ಶನಗಳು. ಈತನು ಅಪತ್ನೀಕ, ಈತನು ಮೃತಪುತ್ರನು, ಕಳ್ಳತನಕ್ಕಾಗಿ ಇವನಿಗೆ ಕಾರಾಗೃಹವಾಸವಾಗಿದೆ, ಇತ್ಯಾದಿಗಳು ಸತ್ಯವಾದರೂ ಅಪ್ರಕೃತವಾದ ಅಪ್ರಿಯಗಳು, ಅಂಥಾವುಗಳನ್ನು ಆಡಬಾರದು. ದೂರದಲ್ಲಿರುವವನಿಗೆ ಸ್ತ್ರೀ ಶಿಶುವು ಜನಿಸಿದ್ದರೂ, ಪ್ರಿಯವೆಂದು ಗಂಡುಮಗುವಾಯಿತೆಂದು ಅನೃತವನ್ನು ಹೇಳಬಾರದು. ಸತ್ಯವನ್ನೆಲ್ಲ ಹೇಳಬೇಕೆಂದೂ ನಿಯಮವಿಲ್ಲ. ಪ್ರಿಯವನ್ನೆಲ್ಲ ಹೇಳಬೇಕೆಂದೂ ನಿಯಮವಿಲ್ಲ. ಹೇಳಬಹುದಾದರೆ ಸತ್ಯವನ್ನೂ ಪ್ರಿಯವನ್ನೂ ಹೇಳಬೇಕು, ಸತ್ಯವು ಅಪ್ರಿಯವಾದರೂ ಪ್ರಿಯವು ಅಸತ್ಯವಾದರೂ ಹೇಳಬಾರದು ಎಂದು ವಚನದ ಅರ್ಥವು. ಅದಕ್ಕೇ ಮನುವಚನದಲ್ಲಿ ನಾಲ್ಕುವಾಕ್ಯಗಳಿದ್ದರೂ "ಏಷಃ ಧರ್ಮಃ"—ಈ ಧರ್ಮ ಎಂದೂ ಅಷ್ಟಾಂಗಸಂಗ್ರಹವಚನದಲ್ಲಿ ಆರು ವಾಕ್ಯಗಳಿದ್ದರೂ "ವಚಃ"—ಮಾತನ್ನು ಎಂದೂ ಏಕವಚನವನ್ನು ಪ್ರಯೋಗಿಸಿರುವುದು—ಆಡುವ ಮಾತು ಸತ್ಯವಾಗಿರಬೇಕೆಂದಷ್ಟೇ ಅಲ್ಲ. ಇನ್ನೂ ಮಾತಿನಲ್ಲಿ ಅನೇಕ ಕಲ್ಯಾಣಗುಣಗಳಿರಬೇಕು.

---

5 ಧರ್ಮ್ಯಾಮರ್ಥ್ಯಂ ಪ್ರಿಯಂ ತಥ್ಯಂ ಹಿತಂ ಪಥ್ಯಂ ವದೇದ್ವಚಃ ॥ಅ.ಸಂ.ದಿನಚರ್ಯ॥

6 ...ನಾಽಕಸ್ಮಾದಪ್ರಿಯಂ ವದೇತ್ । ನಾಽಹಿತಂ ನಾಽನೃತಂಚೈವ ...॥ಯಾ-೧-೧೩೨॥

ಮಾತು ಮೃದುವಾಗಿಯೂ ಮಧುರವಾಗಿಯೂ ಇರಬೇಕು.[7] ಪರುಷವಾಗಿಯೂ[8] ಕಠೋರವಾಗಿಯೂ[9] ಅಶ್ಲೀಲವಾಗಿಯೂ[10] ಅಸಭ್ಯವಾಗಿಯೂ[11] ಭೀಕರವಾಗಿಯೂ[12] ಉದ್ರೇಕಕರವಾಗಿಯೂ[13] ಮರ್ಮಭೇದಕವಾಗಿಯೂ[14] ಇರ

---

7 ವಾಕ್ಚೈವ ಮಧುರಾ ಶ್ಲಕ್ಷ್ಣಾ ಪ್ರಯೋಜ್ಯಾ ಧರ್ಮಮಿಚ್ಛತಾ ॥ಮ-ii-೧೫೯॥

8 ಪರುಷವೆಂದರೆ ನಿಷ್ಠುರವಾದುದು, ಕಠಿಣವಾದುದು, ಎಂದೂ (ನಿಷ್ಠುರಂ ಪರುಷಂ-ಇತ್ಯಮರಃ), ಅತಿವಾದವೆಂದೂ (ಪಾರುಷ್ಯಮತಿವಾದಸ್ಯಾತ್—ಇತ್ಯಮರಃ) ಅರ್ಥವಾಗುವುದು. ಪುಟ್ಟ ಬಾಲಕರು ತೋಟದವನನ್ನು ಒಂದು ಮಾವಿನಕಾಯಿ ಕೊಡುತ್ತೀಯಾ ಎಂದು ಕೇಳಿದರೆ ಕೊಡಲಿಷ್ಟವಿಲ್ಲದಿದ್ದರೆ— ಇಲ್ಲಪ್ಪ ಹೋಗಿ ಎಂದಷ್ಟೇ ಪ್ರಕೃತವಾದರೂ ಅದಕ್ಕೆ ಪ್ರತಿಯಾಗಿ ಮಾವಿನಕಾಯಿಯೇಕೆ ಹಳಿಯ ಎಕ್ಕಡ ಕೊಡುತ್ತೇನೆ, ಎನ್ನುವುದು ಅತಿವಾಕ್ಕು. ಪರುಷವೆಂದರೆ ಪರುಷಾಕ್ಷರ ಬಹುಳವಾದ ಮಾತು ಎಂದೂ ಅರ್ಥವಾಗುತ್ತದೆ. ಪರುಷಾನಾಮತದ್ವ್ಯತ್ಯಾಸ್ತ್ವಿಹಿತಂಪರುಷಾಕ್ಷರೈಃ ॥ಪ್ರತಾಪರುದ್ರೀಯೇ॥ (ವರ್ಗೀಯ ಪ್ರಥಮ ದ್ವಿತೀಯಾಕ್ಷರಂಗಳು ಪರುಷಗಳು)ಕುತಃ ಕಾಂತಾರವೃತ್ತೀನಾಂ ಕಾರ್ತಾರ್ಥ್ಯಾರ್ಥಿತ್ವಮಸ್ತಿನಃ ॥ ಕಾರ್ತಾರ್ಥ್ಯಾರ್ಥಿತ್ವಂ ಎಂಬುದರಲ್ಲಿ ಪರುಷಾಕ್ಷರಗಳೇ ಹೆಚ್ಚು.

9 ಕಠೋರವೆಂದರೆ ಕೇಳುವುದಕ್ಕಾಗದಂಥಾ ಕಠಿಣವಾಕ್ಕು. ಮಾವಿನಕಾಯಿಯನ್ನು ಯಾಚಿಸಿದ ಬಾಲಕರಿಗೆ — ಮಾವಿನಕಾಯಿಯೇಕೆ, ನಿಮ್ಮ ಕೈಕಾಲುಗಳನ್ನು ಮುರಿದು ಬಾಯಿಗೆ ಕೊಟ್ಟು, ಕೊಡಲಿಯಿಂದ ತುಂಡು ತುಂಡು ಮಾಡಿ ಹದ್ದು ಕಾಗೆಗಳಿಗೆ ಹಾಕಿ ಹುಟ್ಟಿಲಿಲ್ಲ ಅನ್ನಿಸುತ್ತೇನೆ—॥ ಎಂದು ಹೆದರಿಸುವ ಮಾತು ಕಠೋರವು.

10 ಅಶ್ಲೀಲವೆಂದರೆ ಸಾಮಾನ್ಯವಾಗಿ ಗ್ರಾಮ್ಯವೆಂದರ್ಥವು—(ಗ್ರಾಮ್ಯಮಶ್ಲೀಲಂ—ಇತ್ಯಮರಃ॥) ಅಸಂಸ್ಕೃತರಾದ ಗ್ರಾಮೀಣರಾಡುವುದು ಗ್ರಾಮ್ಯವು. ಅಶ್ಲೀಲವೆಂದರೆ ಲಕ್ಷಣ ಶಾಸ್ತ್ರದಲ್ಲಿ ಅಮಂಗಳವೂ ಜುಗುಪ್ಸೆಯೂ ಲಜ್ಜೆಯೂ ಭಾಸವಾಗುವ ಮಾತು. ("ಅಶ್ಲೀಲಂ ಯದಮಾಂಗಲ್ಯಜುಗುಪ್ಸಾವ್ರೀಡಧೀಕರಂ"— ಪ್ರತಾಪರುದ್ರೀಯ.) ಅನ್ನ ಅನ್ನುವುದಕ್ಕೆ ಕೂಳು, ಪಿಂಡ, ಹಿಂಡೇಕೂಳು, ಎನ್ನುವುದು ಅಮಂಗಳಕ್ಕೂ, ಮುಜ್ಜಿಗೆಯು ಈಗತಾನೆ ತೆಗೆದ ಹೆಂಡದಹಾಗೆ ಸಿಹಿಯಾಗಿದೆ, ಕಲ್ಲಂಗಡೀಹಣ್ಣು ಗೋಮಾಂಸದ ತುಂಡು, ಇತ್ಯಾದಿಗಳು ಜುಗುಪ್ಸೆಗೂ, ಇಲ್ಲಿ ನೆರೆದ ಸ್ತ್ರೀಯರಿಗೆ ಒಂದು ಮಾತು, ನೆರೆಯುಮನೆಯಾಕೆ ಎನ್ನುವುದಕ್ಕೆ ನನ್ನ ಪಕ್ಕದವಳು, ಇತ್ಯಾದಿಗಳು ಲಜ್ಜೆಗೂ ಉದಾಹರಣೆಗಳು.

11 ಹುಡುಗರನ್ನು ಹೈಕಳು, ಮುದುಕನನ್ನು ಮುದಿಯ, ದೃಢಕಾಯನನ್ನು ಧಡಿಯ ಧಾಂಡಿಗ, ಶಣಕಲಾಗಿರುವವನನ್ನು ನರಪ್ರೇತ ನರಪೇತಲ, ಗಂಡರಸನ್ನು ಲೋ ಎಲೋ, ಹೆಂಗಸರನ್ನು ಲೇ ಎಲೇ, ಎನ್ನುವುದು ಅಸಭ್ಯ ಭಾಷಣಗಳು.

12 ಭೀಕರವೆಂದರೆ ಭಯೋತ್ಪಾದಕವಾದ ಮಾತು. ಮಾವಿನ ಗಿಡದವನು ಬಾಲಕರನ್ನು ಅತಿಪರುಷವಾಗಿ ಅಂದ ಹಿಂದೆ ಹೇಳಿದಂಥಾ ಮಾತು.

13 ರೇಗಿಸುವ ಅಥವಾ ಸಂತಾಪವನ್ನುಂಟುಮಾಡುವ ಮಾತು. ಸಂಬಂಧವನ್ನು ಕೇಳುವ ಸಂದರ್ಭದಲ್ಲಿ ನಿನ್ನ ತಂಗಿಯನ್ನು ಅವನಿಗೆ ಕೊಟ್ಟಿದೆಯೇ ಎಂದರೆ ಸುಳ್ಳಾದರೆ ರೇಗುತ್ತದೆ. ಅದನ್ನೇ ತಿರುಗಿಸಿ ಅವನ ಕುಟುಂಬವು ನಿನ್ನ ತಂಗಿಯಾಗಬೇಕೇ ಎಂದರೆ ರೇಗುವಹಾಗೆಯೇ ಇಲ್ಲ.

14 ಎತ್ತಿಹಾಕುವ ಮಾತು. ದರಿದ್ರನನ್ನು ಕ್ಷಾಮದೇವತೆ ಎಂದರೆ ಹಂಗಿಸುವ ಮಾತಾಗುವುದು, ಹಾಗೆಯೇ ಕಳ್ಳನನ್ನು ಕಳ್ಳ ಅನ್ನುವುದು, ಮೂಗನನ್ನು ಮೂಗ ಎಂದು ಮೂಗುಕೆರೆಯುವುದು— ಇತ್ಯಾದಿಗಳು ಮರ್ಮಭೇದಕಗಳು.

ಬಾರದು.[15] ನಮಗೆ ಉದ್ರೇಕವಾದರೂ ಇನ್ನೊಬ್ಬರಿಗೆ ಉದ್ರೇಕವಾಗುವಹಾಗೂ ಮರ್ಮಭೇದವಾಗುವಹಾಗೂ ಕ್ರೂರವಾಗಿಯೂ ಕಠಿಣವಾಗಿಯೂ ಮಾತನಾಡ ಬಾರದು.[16] ವ್ಯರ್ಥವಾಗಿಯೂ ನಿರರ್ಥಕವಾಗಿಯೂ ವಾದವನ್ನು ಮಾಡಬಾರದು.[17] ಚಾಡೀಕ್ಷುದ್ರಗಳನ್ನು ಹೇಳಬಾರದು.[18] ನಗುನಗುತ್ತಾ ಮಾತನಾಡಬೇಕು.[19] ಅಂದರೆ ಎಲ್ಲಾ ಸಮಯದಲ್ಲಿಯೂ ಸಂದರ್ಭದಲ್ಲಿಯೂ ನಗುತ್ತಲೇ ಮಾತನಾಡ ಬೇಕೆಂದಭಿಪ್ರಾಯವಲ್ಲ. ದುಃಖಪಡುವವರೊಡನೆಯೂ ಕಷ್ಟಕ್ಕೆ ಸಿಕ್ಕಿಕೊಂಡವ ರೊಡನೆಯೂ ನಗುತ್ತಾ ಸಂಭಾಷಣವನ್ನು ಮಾಡುವುದು ಯುಕ್ತವಲ್ಲ ಮುಖವನ್ನು ಗಂಟುಹಾಕಿಕೊಂಡಾಗಲೀ, ಕವಟೆಯುನ್ನೂದಿಸಿಕೊಂಡಾಗಲೀ, ಮಾತನಾಡಿದರೆ ಮುತ್ತು ಸುರಿದುಹೋಗುತ್ತದೆ ಎನ್ನುವಂತಾಗಲೀ, ಇಲ್ಲದ ಶ್ರೀಮದ್ಗಾಂಭೀರ್ಯ ವನ್ನು ತಳೆದಾಗಲೀ, ಮಾತನಾಡಬಾರದು , ಹಸನ್ಮುಖಿಯಾಗಿ ಸಂಭಾಷಣವನ್ನು ಮಾಡಬೇಕೆಂಬುದೇ ತಾತ್ಪರ್ಯವು ಮಾತನಾಡುವಾಗ, ಒಳ್ಳೆಯದು, ಒಳ್ಳೆಯದು, ಸರಿ, ಸರಿ, ಎನ್ನುತ್ತಾ ಮಾತನಾಡಬೇಕು.[20] **ಬಾಯಿಯೊಳ್ಳೆಯದಾದರೆ ಊರು ಒಳ್ಳೆಯದು, ಮಾತು ಬಲ್ಲವನಿಗೆ ಜಗಳವಿಲ್ಲ, ಬಾಯಿಯುಳ್ಳವನು ಬರದಲ್ಲಿ ಬದುಕಿದ, ನಾಲಿಗೆಯನ್ನು ಹಿಡಿದು ಮಾತನಾಡಬೇಕು, ಬಾಯಿಗೆ ಬಂದು ದನ್ನು ಆಡಿಬಿಡಬಾರದು,** ಇತ್ಯಾದಿ ನಾಣ್ನುಡಿಗಳ ತತ್ವವೂ ಇದೇ. ಈ ಅರ್ಥವನ್ನೇ ವಾಗ್ಭಟರು ತಮ್ಮ ಆಯುರ್ವೇದ ಗ್ರಂಥದಲ್ಲಿ ಈರೀತಿಯಾಗಿ ಹೇಳಿ ದ್ದಾರೆ:—ಚಾಡಿಕ್ಷುದ್ರದ ಮಾತು, ಪರುಷವಾಕ್ಯ, ಅನೃತಭಾಷಣ, ಅಸತ್ಪ್ರಲಾಪ ಅಂದರೆ ದುರ್ಭಾಷೆ, ಇವು ಪಾಪಕಾರ್ಯಗಳು, ಇವನ್ನು ಮನಸಾ ವಾಚಾ

---

15 ನಾನೃತಂ ಚೈವ (ವದೇತ್) ॥ಯಾ-1-೧೩೨॥ ಚಕಾರಾತ್ ಅಶ್ಲೀಲಮಸಭ್ಯಂ ಭೀಭತ್ಸಂ ಚ ॥ಮಿತಾಕ್ಷರ॥ ನಾಶ್ಲೀಲಂಕೀರ್ತಯೇತ್ ॥ವಿ-೭೧ ೭೨॥ ಯಯಾಸ್ಯೋದ್ವಿಜತೇ ವಾಚಾ ನಾಲೋಕ್ಯಾಂ ತಾಮುದೀರಯೇತ್ ॥ಮ-11-೧೬೧॥ ಉದ್ವಿಜತೇ=ಪರೋವ್ಯಥತೇ ಅಲೋಕ್ಯಾಂ=ಸ್ವರ್ಗಾದಿಪ್ರಾಪ್ತಿವಿರೋಧಿನೀಂ ॥ಕುಲ್ಲೂಕಃ॥ ನ ಕಂಚಿನ್ಮರ್ಮಣಿ ಸ್ಪೃಶೇತ್ ॥ವಿ-೭೧-೧೬೧॥ ಧರ್ಮ್ಯಮರ್ಥ್ಯಂ ಪ್ರಿಯಂ ತಥ್ಯಂ ಹಿತಂ ಪಥ್ಯಂ ವದೇದ್ವಚಃ ॥ ಅ. ಸಂ-ದಿನಚರ್ಯ॥

16 ನಾರುಂತುದಸ್ಯಾದಾರ್ತೋಽಪಿ ॥ಮ-ii-೧೬೧॥ ನಾರುಂತುದಸ್ಯಾತ್=ಪರಮರ್ಮ ಪೀಡಾಕರಂ ತತ್ವದೂಷಣಮುದಾಹರೇತ್ ॥ಕುಲ್ಲೂಕಃ॥

17 ಶುಷ್ಕವೈರಂ ವಿವಾದಂ ಚ ನ ಕುರ್ಯಾತ್ಕೇನಚಿತ್ಸಹ ॥ಮ-iv-೧೩೯॥ ಶುಷ್ಕವೈರಂ ಶುಷ್ಕವಿವಾದಂ ಚೇತ್ಯನ್ವಯಃ ॥ಕುಲ್ಲೂಕಃ॥

18 (ಅಹಿಂಸಾಸತ್ಯಮಕ್ರೋಧಸ್ತ್ಯಾಗಶ್ಶಾಂತಿ) ರಪೈಶುನಂ ಭವಂತಿ ಸಂಪದಂ ದೈವೀ ಮಭಿಜಾತಸ್ಯ ಭಾರತ ॥ಭ.ಗೀ.॥

19 ಸ್ಮಿತಪೂರ್ವಾಭಿಭಾಷೀ ಸ್ಯಾತ್ ॥ವಿ-೩-೮೯॥

20 ಭದ್ರಂ ಭದ್ರಮಿತಿಬ್ರೂಯಾದ್ಭದ್ರಮಿತ್ಯೇವ ವಾ ಪುನಃ ॥ಮ-iv ೧೩೯॥

ಕರ್ಮಣಾ ವರ್ಜ್ಯಮಾಡಬೇಕು.[21] ವಾಕ್ಸಂಸ್ಕೃತಿಯ ವಿಷಯವನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ ಉದ್ವೇಗಕರವಲ್ಲದ ಮಾತು, ಸತ್ಯಭಾಷಣವು, ಪ್ರಿಯ ಹಿತ ನುಡಿಯು, ವೇದಾಧ್ಯಯನವು, ಇವು ವಾಙ್ಮಯತಪಸ್ಸು ಎಂದು[22] ಭಗವದ್ವಾಕ್ಯ ವನ್ನು ಸ್ಮೃತಿಗೆ ತಂದರೆ ಸಾಕು. ಈ ಪ್ರಕಾರವಾಗಿ ದೂರಾಲೋಚನೆಯಿಂದ, ಪರಿಣಾಮ ಪರಿಜ್ಞಾನವನ್ನು ಅರಿತು, ತಿಳಿದವರ ಅನುಕರಣದಿಂದಲೂ, ಸ್ವತಃ ಅಭ್ಯಾಸಮಾಡುವುದರಿಂದಲೂ, ಲೋಕಾನುಭವದಿಂದಲೂ, ಶಾಸ್ತ್ರಾವಲೋಕನ ದಿಂದಲೂ, ಸರ್ವಪ್ರಯತ್ನದಿಂದಲೂ, ಸದಾ ವಾಕ್ಕಿಗೆ ಸಂಸ್ಕಾರವನ್ನು ಮಾಡಿಕೊಳ್ಳು ತ್ತಿರಬೇಕು ಇನ್ನೂ ಸೂಕ್ಷ್ಮಕ್ಕೆ ಹೋಗುವುದಾದರೆ ಶಬ್ದದೋಷವನ್ನೂ ಅರ್ಥ ದೋಷವನ್ನೂ ಸರ್ವಪ್ರಕಾರದಿಂದಲೂ ವರ್ಜ್ಯಮಾಡಬೇಕು. ನೂರು ವರ್ಷ ವಾದರೂ **ಸಾಯಬೇಡ**, ನಿನ್ನೆದುರಿಗೆ ನಿನ್ನ ಗಂಡ **ಸಾಯ**ಬೇಡ, ನೀನು **ವಿಧವೆ** ಯಾಗಬೇಡ, **ಪಿಂಡಕ್ಕೆ** ಬನ್ನಿರೋ, **ತಂಡುಲಾರ್ಧಾರ್ಧಾರ್ಧತದರ್ಧ**ನಾಯಕ, **ಅಷ್ಟಾರ್ಧಾರ್ಧ** ಬಾಹುಗಳು, ಇತ್ಯಾದಿಗಳು **ಶಬ್ದದೋಷ**ಗಳು. ಅವಕ್ಕೆ ಬದಲಾಗಿ ನೇರವಾಗಿ ನೂರು ವರ್ಷ ಬದುಕು, ಸುಮಂಗಲಿಯಾಗು, ಮುತ್ತೈದೆ ಯಾಗು, ಊಟಕ್ಕೆ ಬನ್ನಿ, ಸುಚ್ಚುನಾಯಕ, ದ್ವಿಭುಜ, ಎನ್ನಬೇಕು ಕುದುರೆ ಯನ್ನೋ ಆನೆಯನ್ನೋ ಕೊಟ್ಟರಾಯಿತು ಎಂದರೆ **ಕ್ರಮಭ್ರಷ್ಟ**ವಾಗುವುದು. ಆನೆಯನ್ನೋ ಕುದುರೆಯನ್ನೋ ಎನ್ನುವುದು ಕ್ರಮವು. ಶ್ರೀಮಾನ್ ರಾಜೇದ್ರ ಪ್ರಸಾದರು ಭಾರತಕ್ಕೆ ಅಧ್ಯಕ್ಷರು ಎನ್ನುವುದಕ್ಕೆ ಹೋಗಿ (ಶ್ರೀ ರಾಜೇಂದ್ರ ಪ್ರಸಾದರು (ಎಂದು ಅವರ ಚರಿತ್ರೆಯನ್ನು ಹೇಳುವುದೂ) ಭಾರತಕ್ಕೆ (ಎಂದ ಕೂಡಲೇ ಭಾರತದ ಚರಿತ್ರೆಯ ಪ್ರಸ್ತಾಪ) ಅಧ್ಯಕ್ಷರು (ಎಂದ ಕೂಡಲೇ ಅಧ್ಯಕ್ಷ ರಾಗುವುದಕ್ಕೆ ಯಾರು ಯಾರು ಯಾವ ಯಾವ ರೀತಿಯಲ್ಲಿ ಆಳಿದರು) ಅನ್ನುವುದು **ಸಂಕೀರ್ಣದೋಷ.** ನಿಮ್ಮ ಸೈನ್ಯವು ಶತ್ರುಗಳ ಮೇಲೆ ಬಿದ್ದು **ನಾಯಿಗಳು** ಜಿಂಕೆಗಳನ್ನು ಬೇಟೆಯಾಡುವಂತೆ ಕೊಂದರು ಎಂಬುದು **ಹೀನೋಪಮಾನ.** ಬಕಗಳು ನೀರಿನಲ್ಲಿ ಮಹರ್ಷಿಗಳು ತಪಸ್ಸು ಮಾಡುವಂತೆ ನಿಶ್ಚಲವಾಗಿ ನಿಂತಿವೆ ಎಂದರೆ **ಅಧಿಕೋಪಮ** ಇವೆಲ್ಲ **ಅರ್ಥದೋಷ**ಗಳು, ವರ್ಜ್ಯಗಳು. ವಾಕ್ಸಂಸ್ಕೃ ತಿಯ ವೈಶಿಷ್ಟ್ಯವನ್ನು ಮಹಾಕವಿಗಳ ಉಕ್ತಿಯಲ್ಲಿಯೂ, ಪರಮಾವಧಿಯನ್ನು ವಾಲ್ಮೀಕಿ ರಾಮಾಯಣದಲ್ಲೂ ಕಾಣಬಹುದು.

---

21 ದಶಧರ್ಮಪಥಾನ್ ರಕ್ಷೇ ಜಯೇನ್ನಾಭ್ಯಂತರಾನರೀನ್ । ಹಿಂಸಾಸ್ತೇಯಾನ್ಯಥಾ ಕಾಮಂ ಪೈಶೂನ್ಯಂ ಪರುಷಾನೃತಂ ॥ ಸಂಭಿನ್ನಾಲಾಪವ್ಯಾಪಾದಮಭಿದ್ಯಾಂ ದೃಗ್ವಿಪರ್ಯ ಯಂ । ಪಾಪಂ ಕರ್ಮೇತಿ ದಶಧಾ ಕಾಯವಾಙ್ಮಾನಸೈಸ್ತ್ಯಜೇತ್ ॥ ಅ.ಸಂ.-ದಿನಚರ್ಯ॥

22 ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ಭ ಗೀ.॥

## ೪. ಶೀಲ ಮತ್ತು ಚಾರಿತ್ರ

ಶುದ್ಧವಾದ ಚರಿತವೇ ಶೀಲ.[1] ಯಾವ ನಡತೆಯನ್ನಾದರೂ ನಿಯಮವಾಗಿ ಮಾಡುತ್ತಾ ಬಂದರೆ ಅದೇ ಅಭ್ಯಾಸವಾಗುತ್ತದೆ. ಅಭ್ಯಾಸವಾದುದನ್ನು ಬಿಡುವುದಕ್ಕಾಗುವುದಿಲ್ಲ. ಬಿಟ್ಟರೆ ಏನೋ ಲೋಪವಾದಂತಾಗುತ್ತದೆ. ಯಾವ ಜ್ಞಾನದಲ್ಲಿರಲಿ, ಏನೇ ಆತಂಕಗಳೊದಗಲಿ, ಅಭ್ಯಾಸವಾದುದು ನಡೆಯಲೇಬೇಕು. ಸ್ನಾನ ಮಾಡಿ ಮಾಡಿ ಸ್ನಾನಶೀಲರಾಗುತ್ತಾರೆ, ದಾನ ಮಾಡಿ ಮಾಡಿ ದಾನಶೀಲರಾಗುತ್ತಾರೆ, ಕ್ಷಮಿಸಿ ಕ್ಷಮಿಸಿ ಕ್ಷಮಾಶೀಲರಾಗುತ್ತಾರೆ, ದಯೆಯನ್ನು ತೋರಿ ತೋರಿ ದಯಾಶೀಲರಾಗುತ್ತಾರೆ. ಆಯಾ ಶೀಲವು ನಡೆದೇಹೋಗುತ್ತದೆ. ಆದುದರಿಂದ ಒಳ್ಳೆಯ ನಡತೆಗಳನ್ನು ಅಭ್ಯಾಸ ಮಾಡಬೇಕು. ಅಭ್ಯಾಸವೇ ಶೀಲ. ಒಳ್ಳೆಯ ಶೀಲವೇ ಚಾರಿತ್ರ. ಆತ್ಮನಿಷ್ಠೆ, ದೇವಪಿತೃಭಕ್ತಿ, ಸೌಮ್ಯತ್ವ, ಅಹಿಂಸೆ, ಅಸೂಯೆ ಪಡದಿರುವುದು, ಮೃದುತ್ವ, ಪಾರುಷ್ಯವಿಲ್ಲದಿರುವುದು, ಮಿತ್ರತ್ವ, ಪ್ರಿಯವಾದಿತ್ವ, ಕೃತಜ್ಞತೆ, ಪರೋಪಕಾರ, ಭೂತದಯೆ, ಚಿತ್ತಶಾಂತಿ, ಈ ಹದಿಮೂರೂ ಶೀಲವೆಂದು ಹಾರೀತರು ಹೇಳಿದ್ದಾರೆ.[2] ಮತ್ಸರಪಡದವನೂ, ಮಿತವಾಗಿ ಕೂಡಿಡುವವನೂ, ಆತ್ಯಾಶೆಪಡದವನೂ, ಅಹಂಕಾರವಿಲ್ಲದವನೂ, ದಂಭವಿಲ್ಲದವನೂ, ದರ್ಪವನ್ನು ತೋರದವನೂ, ಲೋಭವಿಲ್ಲದವನೂ, ಮೋಹಕ್ಕೆ ಬೀಳದವನೂ, ಕ್ರೋಧವಿಲ್ಲದವನೂ, ಶಿಷ್ಟನೆಂದು ಬೋಧಾಯನರು ನುಡಿದಿದ್ದಾರೆ.[3] ಅಹಿಂಸೆ, ಸತ್ಯ, ಅಸ್ತೇಯ(ಪರರ ಸ್ವತ್ತನ್ನಪಹರಿಸದಿರುವುದು), ಶೌಚ, ಇಂದ್ರಿಯನಿಗ್ರಹ, ದಾನ, ದಮ, ದಯೆ, ಕ್ಷಮೆ, ಇವು ಧರ್ಮಸಾಧನೆಗೆ ಅವಶ್ಯವೆಂದು ಯಾಜ್ಞವಲ್ಕ್ಯರ ವಚನವಿದೆ.[4] (ದಮವೆಂದರೆ ಇಲ್ಲಿ ಅಂತಃಕರಣ ನಿಗ್ರಹ) ದೃಢಕಾರಿತ್ವ, ಮೃದುತ್ವ, ದ್ವಂದ್ವ ಸಹಿಷ್ಣುತ್ವ, ಕ್ರೂರಿಗಳ ಸಹವಾಸವನ್ನು ಮಾಡದಿರುವುದು, ಅಹಿಂಸೆ, ದಮ, ದಾನ, ಇವು ಸ್ವರ್ಗಪ್ರದವೆಂದು ಮನುವಾಕ್ಯ.[5] ದಮಯಮಗಳಿಂದ ಬಾಳಬೇಕೆಂದು ವಿಷ್ಣುವಿನ ಸಂಗ್ರಹವಾಕ್ಯವಿದೆ.[6] ದಮವೆಂದರೆ ಪರರಿಂದ ಬಾಹ್ಯವಾದ ಅಥವಾ

---

1 ಶುಚೌತು ಚರಿತೇ ಶೀಲಂ ॥ ಅಮರ ॥

2 ಬ್ರಹ್ಮಣ್ಯತಾ ದೇವಪಿತೃಭಕ್ತಿತಾ ಸೌಮ್ಯತಾಽಪರೋಪತಾಪಿತಾಽನಸೂಯತಾ ಮೃದುತಾಽಪಾರುಷ್ಯಂ ಮೈತ್ರತಾ ಪ್ರಿಯವಾದಿತ್ವಂ ಕೃತಜ್ಞತಾ ಶರಣ್ಯತಾ ಕಾರುಣ್ಯಂ ಪ್ರಶಾಂತಿಶ್ಚೇತಿ ತ್ರಯೋದಶವಿಧಂ ಶೀಲಂ ॥ ಹಾರೀತ ॥

3 ಶಿಷ್ಟಾಃ ಖಲು ವಿಗತಮತ್ಸರಾಃ ನಿರಹಂಕಾರಾಃ ಕುಂಭೀಧಾನ್ಯಾಃ ಅಲೋಲುಪಾಃ ದಂಭದರ್ಪಲೋಭಮೋಹಕ್ರೋಧವಿವರ್ಜಿತಾಃ ॥ ಬೋಧಾಯನ ॥

4 ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ । ದಾನಂ ದಮೋ ದಯಾ ಶಾಂತಿಸ್ಸರ್ವೇಷಾಂ ಧರ್ಮಸಾಧನಂ ॥ ಯಾ-i-೧೨೨ ॥

5 ದೃಢಕಾರೀ ಮೃದುರ್ದಾಂತಃ ಕ್ರೂರಾಚಾರೈರಸಂವಸನ್ । ಅಹಿಂಸ್ರೋ ದಮದಾನಾಭ್ಯಾಂ ಜಯೇತ್ಸ್ವರ್ಗಂ ತಥಾ ವ್ರತಃ ॥ ಮ-iv-೨೪೬ ॥

6 ದಮಯಮೇನ ತಿಷ್ಠೇತ್ ॥೧॥ ದಮಶ್ಚೇಂದ್ರಿಯಾಣಾಂ ನಿಗ್ರಹಃ ॥೨॥ ವಿ-೬೨॥

ಆಭ್ಯಂತರವಾದ ಹಿಂಸೆಯೊದಗಿದರೂ ಕೋಪಮಾಡದಿರುವುದು. ಪ್ರತೀಕಾರವನ್ನೆಸಗದಿರುವುದು ದಮವೆಂದೂ, ಅಕ್ರೌರ್ಯ ದಯ ಸತ್ಯ ಅಹಿಂಸೆ ಕ್ಷಮೆ ಋಜುತ್ವ ಪ್ರೀತಿ ಪ್ರಸನ್ನತೆ ಮಾಧುರ್ಯ ಮೃದುತ್ವ ಇವು ಯಮವೆಂದೂ ಅತ್ರಿವಚನವಿದೆ.[7] ಈ ಗುಣಗಳೆಲ್ಲವೂ ಉಪಲಕ್ಷಣಗಳು. ಶೀಲಚಾರಿತ್ರಗಳಲ್ಲಿ ಎಲ್ಲಾ ಸದ್ಗುಣಗಳೂ ಅಡಕವಾಗಿವೆ.

ಚಾರಿತ್ರವನ್ನು ರಕ್ಷಿಸಿಕೊಳ್ಳುವುದಕ್ಕೆ ಅನೇಕ ನೀತಿನಿಯಮಗಳು ಉಕ್ತವಾಗಿವೆ. ತನ್ನನ್ನು ತಾನೇ ಹೀಯಾಳಿಸಿಕೊಳ್ಳಬಾರದೆಂಬುದು ಮುಖ್ಯವಾದುದು. ನಾನು ಮಂದಭಾಗ್ಯ, ಎಷ್ಟು ಪ್ರಯತ್ನಪಟ್ಟರೂ ಸಂಪತ್ತು ಸಿಗಲಿಲ್ಲ ಎಂದು ತನ್ನನ್ನು ನಿಂದಿಸಿಕೊಳ್ಳಬಾರದು. ಸುಖವೂ ಸಂಪತ್ತೂ ಆನಂದವೂ ಎಂದಾದರೂ ಲಭಿಸಿಯೇ ಲಭಿಸುವುದೆಂದು ಕರ್ತವ್ಯಪರಾಯಣನಾಗಿರಬೇಕು. ತನ್ನನ್ನು ತಾನೇ ಸ್ತುತಿಸಿಕೊಳ್ಳಲೂಬಾರದು.[8] ನನಗೆ ಆವಶ್ಯಕಗಳಿಲ್ಲವೆಂದೂ ಹೇಳಿಕೊಳ್ಳಬಾರದು. ತನ್ನ ಸ್ಥಿತಿಯನ್ನು ಹೇಳಿದರೆ ಇದೆಯೆಂದೇ ಹೇಳಬೇಕು.[9] ತೇಜೋವಂತನಾದವನು ತನಗೆ ಅಪಚಾರವಾಯಿತೆಂದು ರಾಜನಿಗೆ (ಅಧಿಕಾರಿಗಳಿಗೆ) ದೂರನ್ನು ಹೇಳಿಕೊಳ್ಳಬಾರದು. ಅಪಕಾರವನ್ನು ಸಾಧ್ಯವಾದಷ್ಟೂ ಸ್ವಶಕ್ತಿಯಿಂದಲೇ ಪರಿಹರಿಸಿಕೊಳ್ಳಬೇಕು. ಸ್ವತೇಜಸ್ಸು ಅಪಚಾರವನ್ನು ತಡೆಯಲು ಒದಗುತ್ತದೆ, ರಾಜಶಕ್ತಿಯು ಅಪಕಾರವಾದಮೇಲೆ ಅಪಕಾರಿಯನ್ನು ದಂಡಿಸುತ್ತದೆ.[10] ಮಾನಾಪಮಾನಗಳಿಗೆ ಉದ್ರೇಕಪಡಬಾರದು, ಸಮಭಾವನೆಯಿಡಬೇಕು.[11] ಅಪಮಾನಕ್ಕೆ ಗುರಿಯಾದವನು ಅದನ್ನು ಸಹಿಸಿಕೊಂಡುಬಿಟ್ಟರೆ, ಅವನಿಗೆ ಖೇದವಾಗುವುದಿಲ್ಲ, ಸುಖವಾಗಿ ನಿದ್ರಿಸುತ್ತಾನೆ. ಅಪಕಾರಿಯು ಪಾಪದ ಫಲವಾಗಿ ನಾಶವಾಗುತ್ತಾನೆ.[12] ಹೀನರನ್ನು

---

7 ಬಾಹ್ಯಮಾಧ್ಯಾತ್ಮಿಕಂ ವಾಪಿ ದುಃಖಮುತ್ಪಾದ್ಯತೇ ಪರೈಃ । ನಕುಪ್ಯತಿ ನ ವಾ ಹಂತಿ ದಮಇತ್ಯಭಿಧೀಯತೇ ॥ ಆನೃಶಂಸ್ಯಂ ದಯಾ ಸತ್ಯಮಹಿಂಸಾ ಕ್ಷಾಂತಿರಾರ್ಜವಂ । ಪ್ರೀತಿಃ ಪ್ರಸಾದೋ ಮಾಧುರ್ಯಂ ಮಾರ್ದವಂ ಚ ಯಮಾ ದಶ ॥ ಅತ್ರಿ ॥

8 ನಾತ್ಮಾನಮವಮಾನಯೇದ್ದೀರ್ಘಾಯುರ್ಜಿಜೀವಿಷುಃ ॥ ವಿ-೭೧-೭೭॥ ನಾತ್ಮಾನಮವಮನ್ಯೇತ ಪೂರ್ವಾಭಿರಸಮೃದ್ಧಿಭಿಃ । ಆಮೃತ್ಯೋಃ ಶ್ರಿಯಮನ್ವಿಚ್ಛೇತ್ ನೈನಾಂ ಮನ್ಯೇತ ದುರ್ಲಭಾಂ ॥ ಮ-iv-೧೩೭॥ ನಾತ್ಮಾನಮವಜಾನೀಯಾನ್ನ ಸ್ತುಯಾನ್ನ ಚ ಪೀಡಯೇತ್ ॥ ಅ-ಸಂ..ದಿನಚರ್ಯ॥

9 ನ ನಾಸ್ತೀತ್ಯಭಿಭಾಷೇತ ॥ ವಿ-೭೧-೧೦॥ (ಕಿಂತು ಪೂರ್ಣಮಿತಿ ಬ್ರೂಯಾತ್—ವ್ಯಾಖ್ಯಾ.)

10 ನ ಬ್ರಾಹ್ಮಣೋ ವೇದಯೇತ ಕಿಂಚಿದ್ರಾಜನಿ ಧರ್ಮವಿತ್ । ಸ್ವವೀರ್ಯೇಣೈವ ತಾನ್ ಶಿಷ್ಯಾತ್ಮಾನವಾನಪಕಾರಿಣಃ ॥ ಸ್ವವೀರ್ಯಾದ್ರಾಜವೀರ್ಯಾಚ್ಚ ಸ್ವವೀರ್ಯಂ ಬಲವತ್ತರಂ ॥ ಮ-xi-೩೧-೩೨॥

11 ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ॥ ಭ. ಗೀ. ॥

12 ಸುಖಂ ಹ್ಯವಮತಶ್ಶೇತೇ ಸುಖಂ ಚ ಪ್ರತಿಬುಧ್ಯತೇ । ಸುಖಂ ಚರತಿ ಲೋಕೇಽಸ್ಮಿನ್ನವಮಂತಾ ವಿನಶ್ಯತಿ ॥ ಮ-ii ೧೬೩॥

ಸೇವಿಸಬಾರದು.[13] ಪ್ರಾಣಿಮಾತ್ರಕ್ಕೆ ಹಿಂಸೆಮಾಡಬಾರದು, ಜೂಜಾಡಬಾರದು, ವ್ಯರ್ಥವಾಗಿ ವಾದಮಾಡಬಾರದು, ಪರನಿಂದೆ ಮಾಡಬಾರದು, ಅನೃತವನ್ನಾಡಬಾರದು, ಸ್ತ್ರೀಯರನ್ನು ಸಾನುರಾಗವಾಗಿ ನಿರೀಕ್ಷಿಸಬಾರದು.[14] ನಿರರ್ಥಕವಾದ ಕುತೂಹಲವನ್ನು ಬಿಡಬೇಕು [15] ನಾಸ್ತಿಕ್ಯವನ್ನೂ ದೇವನಿಂದೆಯನ್ನೂ ವೇದನಿಂದೆಯನ್ನೂ ಧರ್ಮದ್ವೇಷವನ್ನೂ ದಂಭವನ್ನೂ ಅಭಿಮಾನವನ್ನೂ ಕೋಪವನ್ನೂ ಕ್ರೌರ್ಯವನ್ನೂ ತ್ಯಜಿಸಬೇಕು.[16] ಗೃಹವನ್ನಾಗಲೀ ಗ್ರಾಮವನ್ನಾಗಲೀ ಅದ್ವಾರದಿಂದ ಅಂದರೆ ಕಳ್ಳದಾರಿಯಿಂದ ಪ್ರವೇಶಿಸಬಾರದು [17] ಆತ್ಮವನ್ನು ವಶದಲ್ಲಿಟ್ಟುಕೊಂಡು, ಇಂದ್ರಿಯಗಳನ್ನು ನಿಗ್ರಹಿಸಿ, ಸದಾಚಾರಸಂಪನ್ನನಾಗಿರಬೇಕು [18] ಮಂಗಳಾಚಾರಯುತನಾಗಿರುವವನಿಗೆ ವಿನಿಪಾತವೇ ಇಲ್ಲ [19]

ಹೀಗೆ ಯುಕ್ತಾಯುಕ್ತಗಳನ್ನು ಸೂಕ್ಷ್ಮವಾಗಿ ವಿವೇಚನೆ ಮಾಡಿ ಪರಿಶುದ್ಧ ವರ್ತನವನ್ನು ಅಭ್ಯಾಸಮಾಡುತ್ತಾ ಹೋಗಬೇಕು. ಅಭ್ಯಾಸದ ಬಲದಿಂದ ಇಂದ್ರಿಯ ಸಂಯಮವೂ ಮನೋನಿಗ್ರಹವೂ ಚಿತ್ತಸ್ಥೈರ್ಯವೂ ಬುದ್ಧಿವಿಕಾಸವೂ ಪ್ರಾಪ್ತವಾಗಿ ಅಂತಃಕರಣ ಬಹಿಃಕರಣಗಳು ಸುಶಿಕ್ಷಿತವಾಗಿ, ಪ್ರವೃತ್ತಿಯು ಜ್ಞಾನದಿಂದಾಗಲೀ ಅಜ್ಞಾನದಿಂದಾಗಲೀ ಇಚ್ಛೆಯಿಂದಾಗಲೀ ಪ್ರಮಾದದಿಂದಾಗಲೀ ಅಕಾರ್ಯದ ಕಡೆಗೆ ಚಲಿಸದೆ ಸನ್ಮಾರ್ಗದಲ್ಲಿಯೇ ಚಲಿಸುವಂತೆ ರೂಢಿಯಾಗಿ, ಶೀಲವೂ ಚಾರಿತ್ರವೂ ಸ್ಥಾಯಿಯಾಗುವುದು. ಅದನ್ನೇ ಮಂಗಳಾಚಾರನಿರತವೆನ್ನುವುದು.

## ೫. **ವಿಧೇಯತೆ** (ವಿನಯ)

**ದೊಡ್ಡವರಲ್ಲಿ ವಿನಯವಾಗಿ ವರ್ತಿಸುವುದೇ ವಿಧೇಯತ್ವ.** ಉಪನಯನದವರೆಗೂ (ಅದೂ ಸೇರಿ) ಎಲ್ಲಾ ಸಂಸ್ಕಾರವನ್ನೂ ಮಾಡಿ ವೇದವನ್ನು ಹೇಳಿಕೊಡುವವನು **ಗುರು.** ಉಪನಯನವನ್ನು ಮಾಡಿ ವೇದವನ್ನು ಕಲಿಸುವವನು **ಆಚಾರ್ಯ** ವೇದದ ಒಂದೆರಡು ಮಂತ್ರವನ್ನು ಕಲಿಸುವವನು **ಉಪಾಧ್ಯಾಯ.** ತನ್ನಿಂದ

13 ನ ಹೀನಾರ್ಣ ಸೇವೇತ ॥ ವಿ-೭೧-೩॥

14 (ವರ್ಜಯೇತ್) . .ಪ್ರಾಣಿನಾಂ ಚೈವ ಹಿಂಸನಂ ॥೧೭೭॥ ದ್ಯೂತಂ ಚ ಜನವಾದಂ ಚ ಪರಿವಾದಂ ತಥಾನೃತಂ। ಸ್ತ್ರೀಣಾಂ ಚ ಪ್ರೇಕ್ಷಣಾಲಂಭಮುಪಘಾತಂ ಪರಸ್ಯ ಚ ॥೧೭೯॥ ಮ-ii ॥ 15 ನ ಜಾತು ಸ್ಯಾತ್ ಕುತೂಹಲೀ ॥ ಮ-iv-೬೩॥

16 ನಾಸ್ತಿಕ್ಯಂ ವೇದನಿಂದಾಂ ಚ ದೇವತಾನಾಂ ಚ ಕುತ್ಸನಂ। ದ್ವೇಷಂ ದಂಭಂ ಚ ಮಾನಂ ಚ ಕ್ರೋಧಂ ತೈಕ್ಷ್ಣ್ಯಂ ಚ ವರ್ಜಯೇತ್ ।। ಮ-iv-೧೬೩।।

17 ನಾದ್ವಾರೇಣ ಕ್ವಚಿದ್ವ್ರಜೇತ್ ॥ ಯಾ-i-೧೪೦॥

18 ಮಂಗಳಾಚಾರಯುಕ್ತಾನಾಂ ನಿತ್ಯಂ ಚ ಪ್ರಯತಾತ್ಮನಾಂ। ಜಪತಾಂ ಜುಹ್ವತಾಂ ಚೈವ ವಿನಿಪಾತೋ ನ ವಿದ್ಯತೇ ॥ ಮ-iv-೧೪೬॥

19 ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ಭ. ಗೀ.॥

ನಿಯುಕ್ತನಾಗಿ ಯಜ್ಞವನ್ನು ಮಾಡುವವನು **ಋತ್ವಿಕ್ಕು**. ಇವರೆಲ್ಲರೂ ಕ್ರಮವಾಗಿ ಮಾನಾರ್ಹರು, ಮುಂದೆ ಮುಂದೆ ಹೇಳಿದವರಿಗಿಂತಲೂ ಹಿಂದೆ ಹಿಂದೆ ಹೇಳಿದವರು ಮಾನಾಧಿಕ್ಯರು. ಇವರೆಲ್ಲರಿಗಿಂತಲೂ ಅಧಿಕವಾಗಿ ತಾಯಿಯು ಮಾನ್ಯಳು.[1] ಹಾಗೆಯೇ ವಿದ್ಯೆ ಕರ್ಮ ವಯಸ್ಸು ಬಂಧು ಧನ—ಇವುಗಳಿಂದಲೂ ಕ್ರಮವಾಗಿ ಮಾನ್ಯತ್ವವು; ಅಂದರೆ ಧನಕ್ಕಿಂತಲೂ ಬಂಧುಸಂಪತ್ತಿಯೂ, ಬಂಧುಗಳಿಗಿಂತಲೂ ವಯಸ್ಸೂ, ವಯಸ್ಸಿಗಿಂತಲೂ ಕರ್ಮಾನುಷ್ಠಾನವೂ, ಕರ್ಮಕ್ಕಿಂತಲೂ ವಿದ್ಯೆಯೂ ಮಾನ್ಯತ್ವದಲ್ಲಿ ಹೆಚ್ಚು.[2] ಎಂಭತ್ತು ತುಂಬಿದ ಮೇಲೆ ವಯಸ್ಸೂ ಮಾನ್ಯತ್ವದಲ್ಲಿ ಹೆಚ್ಚು. ತಲೆಯು ನರೆತವನಿಗಿಂತಲೂ ವೇದಶಾಸ್ತ್ರಜ್ಞನು ವೃದ್ಧನು. ಲೌಕಿಕ ಜ್ಞಾನವೂ ವೈದಿಕ ಜ್ಞಾನವೂ ಆಧ್ಯಾತ್ಮಿಕ ಜ್ಞಾನವೂ ಯಾರಿಂದ ಲಭಿಸುವುದೋ ಅವನಿಗೆ ಮಾನ್ಯತ್ವದಲ್ಲಿ ಅಗ್ರಸ್ಥಾನವು[3] ವಯೋವೃದ್ಧತ್ವವನ್ನೂ ಗುರುತ್ವವನ್ನೂ ಗುಣವೃದ್ಧತ್ವವನ್ನೂ ಜ್ಞಾನವೃದ್ಧತ್ವವನ್ನೂ ಅರಿತು ಯಥಾಯೋಗ್ಯವಾಗಿ ಮಾನ ಸನ್ಮಾನಗಳನ್ನು ಮಾಡಬೇಕು. ಇದೇ ಲೋಕರೂಢಿ. ತಾಯಿಯ ವಿಷಯದಲ್ಲಿ ಸರ್ವಶ್ರೇಷ್ಠತ್ವಕ್ಕೆ ಕಾರಣವನ್ನು ತಿಳಿಯುವುದೊಳ್ಳೆಯದು. ತಾಯಿಯು ಒಂಭತ್ತು ತಿಂಗಳು ಗರ್ಭವನ್ನು ಕಷ್ಟದಿಂದ ಧರಿಸಿ ಪ್ರಸವದ ಮಹಾಕ್ಲೇಶವನ್ನು ತಾಳುತ್ತಾಳೆ. ಅನಿವಾರ್ಯವೆಂದು ಹಾಗೆ ಮಾಡುವುದಿಲ್ಲ, ಅದೂ ತನ್ನ ದೇಹದ ಅಂಗವೇ ಎಂದೂ, ಅಥವಾ ತಾನೇ ಎಂದೂ, ಭಾವಿಸಿ ರಕ್ಷಿಸುತ್ತಾಳೆ.[4] ಜನಿಸಿದ ಶಿಶುವನ್ನು ರಕ್ಷಿಸಿ ಪೋಷಿಸಲು ಹೆಚ್ಚಾಗಿ ತಾಯಿಯೂ ಜತೆಗೆ ತಂದೆಯೂ ಶ್ರಮಿಸುತ್ತಾರೆ, ಆ ಋಣ ದಿಂದ ಮುಕ್ತನಾಗಲು ಅನೇಕ ಪುರುಷಾಯುಷ್ಯಗಳೂ ಸಾಲದು,[5] ಏಕೆಂದರೆ ಅವರು ಅದನ್ನು ಪರೋಪಕಾರವೆಂದಾಗಲೀ ಮಮಭಾವದಿಂದಾಗಲೀ ಮಾಡುವುದಿಲ್ಲ,

---

1 ಸಗುರುರ್ಯಃ ಕ್ರಿಯಾಃ ಕೃತ್ವಾ ವೇದಮಸ್ಮೈ ಪ್ರಯಚ್ಛತಿ । ಉಪನೀಯ ದದ ದ್ವೇದಮಾಚಾರ್ಯಸ್ಸ ಉದಾಹೃತಃ ॥ ಏಕದೇಶ ಉಪಾಧ್ಯಾಯ ಋತ್ವಿಗ್ಯಜ್ಞಕೃದುಚ್ಯತೇ । ಏತೇ ಮಾನ್ಯಾ ಯಥಾಪೂರ್ವಮೇಭ್ಯೋ ಮಾತಾ ಗರೀಯಸೀ ॥ ಯಾ-1-೩೪-೩೫॥

2 ವಿದ್ಯಾಕರ್ಮವಯೋಬಂಧುವಿತ್ತೈ ರ್ಮಾನ್ಯಾ ಯಥಾಕ್ರಮಂ ॥ ಯಾ-1-೧೧೬॥ ವಿತ್ತಂ ಬಂಧು ವಯಃ ಕರ್ಮ ವಿದ್ಯಾ ಭವತಿ ಪಂಚಮೀ । ಏತಾನಿ ಮಾನ್ಯಸ್ಥಾನಾನಿ ಗರೀಯೋ ಯದ್ಯದುತ್ತರಃ ॥ ಮ-11-೧೩೬॥

3 ಲೌಕಿಕಂ ವೈದಿಕಂ ಚಾಪಿ ತಥಾಧ್ಯಾತ್ಮಿಕಮೇವ ಚ । ಆದದೀತ ಯತೋ ಜ್ಞಾನಂ ತಂ ಪೂರ್ವಮಭಿವಾದಯೇತ್ ॥ ಮ-ii-೧೧೭॥

4 ನನು ಶರೀರೇಪ್ರವಿಷ್ಟಂ ಪರಕೀಯಂ ರೇತಸ್ಸ್ತ್ರಿಯಾಉಪದ್ರವಕಾರಿ ಸ್ಯಾಚ್ಛರೀರ ಲಗ್ನಬಾಣಾದಿವದಿತ್ಯಾಶಂಕ್ಯ ಆಹ—ತತ್ ಸ್ತ್ರಿಯಾ ಆತ್ಮಭೂತಂ ಗಚ್ಛತಿ ಯಥಾ ಸ್ವಮಂ ಗಂ ತಥಾ ತಸ್ಮಾದೇನಾಂ ನ ಹಿನಸ್ತಿ। ಸಾಸ್ಯೈತಮಾತ್ಮಾನಮತ್ರಗತಂ ಭಾವಯತಿ ಸಾಭಾವ ಯಿತ್ರೀ ಭಾವಯಿತವ್ಯಾ ಭವತಿ ॥ ಐ. ಉ. ॥

5 ಯಂ ಮಾತಾಪಿತರೌ ಕ್ಲೇಶಂ ಸಹೇತೇ ಸಂಭವೇ ನೃಣಾಂ। ನ ತಸ್ಯ ನಿಷ್ಕೃತಿಶ್ಶಕ್ಯಾ ಕರ್ತುಂ ವರ್ಷಶತೈರಪಿ ॥ ಮ-ii-೨೨೭॥

ಶಿಶುವು ತಾವೇ[6] ಎಂದೂ, ಅದಕ್ಕೆ ಹಸಿವಾದರೆ ತಮಗೆ ಹಸಿವು ತೃಪ್ತಿಯಾದರೆ ತಮಗೆ ತೃಪ್ತಿ ಅದಕ್ಕೆ ರೋಗಾದಿಗಳು ಬಂದರೆ ತಾವೇ ರೋಗಿಗಳು ಎಂದೂ, ಶಿಶುವು ತಮ್ಮದೇ ನೂತನಾವತಾರವೆಂದೂ, ಆ ಶಿಶುವಿನ ಸಂತಾನದಲ್ಲಿ ಮುಂದೂ ತಾವೇ ಹುಟ್ಟಿ ಪಾರಂಪರ್ಯವಾಗಿ ಇದ್ದೇಬಿಡುವೆವೆಂದೂ ಭಾವಿಸಿ ಸಂತೋಷವಾಗಿ ಮಾಡುತ್ತಾರೆ.[7] ಅಂಥಾ ಪರಮಬಂಧುಗಳು ಹೇಗೆ ನಮ್ಮಲ್ಲಿ ಆತ್ಮಭಾವವನ್ನಿಟ್ಟು ಉಪಕಾರಾಪೇಕ್ಷೆಯಿಲ್ಲದೆ ಸಾಕುತ್ತಾರೋ, ಹಾಗೆಯೇ ನಾವೂ ಆತ್ಮಭಾವದಿಂದಲೂ ಪ್ರತ್ಯುಪಕಾರವೆನ್ನದೆಯೂ ಮಾನಸನ್ಮಾನಗಳನ್ನು ಮಾಡಬೇಕು. ಆಚಾರ್ಯರಿಗೂ ಹಾಗೆಯೇ ಸನ್ಮಾನವನ್ನು ಮಾಡಬೇಕು. ಈ ಮೂವರೂ ತೃಪ್ತರಾದರೆ ಎಲ್ಲಾ ತಪಸ್ಸನ್ನೂ ಮಾಡಿದಹಾಗೆಯೇ. ಅವರ ಸೇವೆಯೇ ಶ್ರೇಷ್ಠವಾದ ತಪಸ್ಸು.[8] ಅದಕ್ಕೇ ಮಾತಾಪಿತೃಗಳಲ್ಲಿಯೂ ಆಚಾರ್ಯರಲ್ಲಿಯೂ ದೇವಭಾವವಿರಬೇಕು ಎಂದು ಶ್ರುತಿಯಲ್ಲಿ ಸಂಗ್ರಹವಾಕ್ಯವಿರುವುದು[9] ವಯೋವೃದ್ಧರೊಡನೆಯೂ ಗುಣವೃದ್ಧರೊಡನೆಯೂ ಜ್ಞಾನವೃದ್ಧರೊಡನೆಯೂ ಸಂಧಿಸಿದರೆ ಪ್ರಾಣವು ಸ್ವಸ್ಥಾನವನ್ನು ಬಿಟ್ಟು ಮೇಲಕ್ಕೆದ್ದಂತಾಗುವುದು, ಪ್ರತ್ಯುತ್ಥಾನವನ್ನೂ ಅಭಿವಾದನವನ್ನೂ ಮಾಡುವುದರಿಂದ ಪ್ರಾಣಕ್ಕೆ ಮತ್ತೆ ಸ್ವಾಸ್ಥ್ಯವು ಪ್ರಾಪ್ತವಾಗುವುದು.[10] ತಾರತಮ್ಯವನ್ನರಿತು ಯಥಾಯುಕ್ತವಾಗಿ ನಡೆಯಬೇಕಾದ ಪ್ರಕೃತವು ವಿಧವಿಧವಾಗಿ ಒದಗುತ್ತಲೇ ಇರುತ್ತದೆ, ಎಲ್ಲವನ್ನೂ ಬರೆಯಲು ಸಾಧ್ಯವಿಲ್ಲ. ಸ್ವಬುದ್ಧಿಯಿಂದಲೂ ವ್ಯವಹಾರ ದೃಷ್ಟಿಯಿಂದಲೂ ತಾವು ತಾವೇ ಇತ್ಯರ್ಥ ಮಾಡಿಕೊಂಡು ನಡೆಯಬೇಕು.

---

6 ಆತ್ಮಾ ವೈ ಪುತ್ರನಾಮಾಸಿ ॥ಕೌಷೀ. ಉ.॥ ಪತಿರ್ಜಾಯಾಂ ಪ್ರವಿಶತಿ ಗರ್ಭೋ ಭೂತ್ವಾ ಸ ಮಾತರಂ । ತಸ್ಯಾಂ ಪುನರ್ನವೋ ಭೂತ್ವಾ ಯದಸ್ಯಾಂ ಜಾಯತೇ ಪುನಃ ॥ಬೃ. ಉ.॥ ಅಂಗಾದಂಗಾತ್ಸಂಭವತಿ ಹೃದಯಾದಭಿಜಾಯತೇ । ಆತ್ಮಾ ವೈ ಪುತ್ರನಾಮಾಸಿ ಸಜೀವ ಶರದಶ್ಶತಂ ॥ಮಂತ್ರ॥

7 ಸಯತ್ಕುಮಾರಂ ಜನ್ಮನೋಗ್ರೇಽಧಿಭಾವಯತ್ಯಾತ್ಮಾನಮೇವ ತದ್ಭಾವಯತಿ । ಏಷಾಂ ಲೋಕಾನಾಂ ಸಂತತ್ಯಾ ಏವಂ ಸಂತತಾಹೀಮೇ ಲೋಕಾಃ ॥ಐ-ಉ॥ ಪುತ್ರಪೌತ್ರ ಪ್ರಪೌತ್ರಾದಯಃಇಮೇಜನಾ ಲೋಕಾಸ್ತೇಷಾಂ ಅವಿಚ್ಛೇದಾಯ ಸಂಸ್ಕೃತಪುತ್ರೋತ್ಪಾದನಂ। ಅನೇನ ಪಿತ್ರಾ ಸ್ವೋತ್ಪಾದಿತೇ ಪುತ್ರೇ ತಥೈವ ಪುತ್ರೋಽಪ್ಯನ್ಯಂ ಪುತ್ರಮುತ್ಪಾದ್ಯ ಸೋಽಪ್ಯನ್ಯಂ ಪುತ್ರಮಿತಿ ಲೋಕಾ ಅವಿಚ್ಛಿನ್ನಾ ಭವಂತಿ ॥ಭಾಷ್ಯ॥ ಸಂತತಿ ಎಂದರೂ ತಮ್ಮ ಜನ್ಮವನ್ನು ವಿಸ್ತರಿಸಿ ಸಾಂತತ್ಯವನ್ನು ಕಲ್ಪಿಸುವುದೆಂದರ್ಥ (ಸಂತಾನ್ಯತೇ ಅನಯೇತಿ ಸಂತತಿಃ)

8 ತಯೋರ್ನಿತ್ಯಂ ಪ್ರಿಯಂ ಕುರ್ಯಾದಾಚಾರ್ಯಸ್ಯ ಚ ಸರ್ವದಾ । ತ್ರೇಷ್ವೇವ ತ್ರಿಷು ತುಷ್ಟೇಷು ತಪಸ್ಸರ್ವಂ ಸಮಾಪ್ಯತೇ ॥೨೨೮॥ ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪಉಚ್ಯತೇ ॥೨೨೯॥ ಮ-ii ॥ 9 ಮಾತೃದೇವೋ ಭವ। ಪಿತೃದೇವೋ ಭವ। ಆಚಾರ್ಯದೇವೋ ಭವ ॥ತೈ. ಉ.. ಶಿಕ್ಷಾ॥

10 ಊರ್ಧ್ವಂ ಪ್ರಾಣಾ ಉತ್ಕ್ರಾಮಂತಿ ಯೂನಸ್ಸ್ಥವಿರ ಆಯತಿ । ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥ಮ-ii-೧೨೦॥ ಉತ್ಕ್ರಾಮಂತಿ ಎಂದರೆ ಜೀವದ ಸಾರಭೂತವಾದ ಪ್ರಾಣವು ಎದ್ದು ಪೂಜ್ಯರ ಕಡೆಗೆ ಪ್ರವರ್ತಿಸುತ್ತದೆ ಎಂದರ್ಥ.

ವಿಧೇಯತ್ವವನ್ನು ಹೇಗೆ ಪ್ರದರ್ಶಿಸಬೇಕೆಂಬುದಕ್ಕೆ ಮಾರ್ಗದರ್ಶಕವಾಗಿ ಕೆಲವೇ ಶಿಷ್ಟಾಚಾರಗಳನ್ನು ಉದಹರಿಸಿದರೆ ಸಾಕು :—**ಪೂಜ್ಯಸತ್ಕಾರವು ಮೊದಲ** ದಷ್ಟೆ. ಪೂಜ್ಯರು ಬಂದರೆ ಎದ್ದು ತನ್ನ ಪೀಠವನ್ನು ಅವರಿಗೆ ಕೊಟ್ಟು ನಿಂತಿರಬೇಕು ಅಥವಾ ಅವರ ಅನುಜ್ಞೆಯಿಂದ ಕುಳಿತುಕೊಳ್ಳಬಹುದು, ಹೊರಟರೆ ಜತೆಯಲ್ಲಿ ತಾನೂ ಹೋಗಬೇಕು[11] ತಾನು ಆರ್ತನಾಗಿದ್ದರೂ ಕೂಡ ತಾಯಿ ತಂದೆ ಅಣ್ಣ ಆಚಾರ್ಯ ಮುಂತಾದವರಿಗೆ ಅವಮಾನವಾಗುವಂತೆ ವರ್ತಿಸಬಾರದು.[12] ತಾಯಿ ತಂದೆ ಅಣ್ಣ ಆಚಾರ್ಯ ಋತ್ವಿಕ್ಕು ಪುರೋಹಿತ ಅತಿಥಿ ವೈದ್ಯ ಮುಂತಾದವರೊಡನೆ ವಿವಾದಮಾಡಬಾರದು.[13] ದೊಡ್ಡವರನ್ನು ನೀನು ತಾನು ಎಂದೇಕವಚನದಲ್ಲಾಗಲೀ, ಲೋ ಎಲಪೋ ಎಂದು ತಿರಸ್ಕಾರವಾಗಾಗಲೀ ಸಂಬೋಧಿಸಬಾರದು, ಭೋ ಭವಾನ್, ನೀವು ತಾವು, ಎನ್ನಬೇಕು. ಅವರ ಹೆಸರು ಹಿಡಿದು ಕೂಗಬಾರದು.[14] ನೀನು ತಾನು (ಲೋ ಎಲವೋ) ಎಂದುಬಿಟ್ಟರೆ ಆಮೇಲೆ ಸ್ನಾನಮಾಡಿ, ಉಪವಾಸ ವಿದ್ದು, ಅವರಿಗೆ ನಮಸ್ಕಾರ ಮಾಡಿ ಅವರನ್ನೇ ಒಲಿಸಿಕೊಳ್ಳಬೇಕು[15] ಅವರೇಳು ವುದಕ್ಕೆ ಮೊದಲು ತಾನೇಳಬೇಕು, ಕೂತಮೇಲೆ ಕುಳಿತುಕೊಳ್ಳಬೇಕು[16] ಗುರುಗಳ ಮಾತನ್ನು ಕೇಳುವಾಗಲೂ ಅವರೊಡನೆ ಸಂಭಾಷಣವನ್ನು ಮಾಡುವಾಗಲೂ ಮಲಗಿಕೊಂಡಾಗಲೀ, ಕುಳಿತುಕೊಂಡಾಗಲೀ, ತಿಂಡಿತಿನ್ನುತ್ತಾಗಲೀ, ಮುಖವನ್ನು ತಿರುಗಿಸಿಕೊಂಡಾಗಲೀ ಇರಬಾರದು.[17] ಅವರು ಕೂತಿದ್ದರೆ ನಿಂತು, ನಿಂತಿದ್ದರೆ ಹತ್ತಿರಕ್ಕೆ ಹೋಗಿ, ಬರುತ್ತಿದ್ದರೆ ಎದುರಾಗಿ, ಓಡುತ್ತಿದ್ದರೆ ಹಿಂದೋಡುತ್ತಾ, ಪರಾಙ್ಮುಖರಾಗಿದ್ದರೆ ಅಭಿಮುಖವಾಗಿ, ದೂರದಲ್ಲಿದ್ದರೆ ಹತ್ತಿರಕ್ಕೆ ನಡೆದು,

---

11 ಅಭಿವಾದಯೇದ್ವೃದ್ಧಾಂಶ್ಚದದ್ಯಾಚ್ಚೈವಾಸನಂ ಸ್ವಕಂ। ಕೃತಾಂಜಲಿರುಪಾಸೀತ ಗಚ್ಛತಃ ಪೃಷ್ಠತೋಽನ್ವಿಯಾತ್ ॥ಮ-iv-೧೫೪॥

12 ಆಚಾರ್ಯಶ್ಚ ಪಿತಾ ಚೈವ ಮಾತಾ ಭ್ರಾತಾ ಚ ಪೂರ್ವಜಃ। ನಾರ್ತೇನಾಪ್ಯವ ಮಂತವ್ಯಾಃ. ॥ಮ-ii-೨೨೫॥

13 ಋತ್ವಿಕ್ಪುರೋಹಿತಾಚಾರ್ಯಮಾತುಲಾತಿಥಿಸಂಶ್ರಿತೈಃ। ಬಾಲ ವೃದ್ಧಾತುರೈ ರ್ವೈದ್ಯೈರ್ಜ್ಞಾತಿಸಂಬಂಧಿಬಾಂಧವೈಃ ॥೧೭೯॥ ಮಾತಾಪಿತೃಭ್ಯಾಂ ಜಾಮಿಭಿರ್ಭ್ರಾತ್ರಾ ಪುತ್ರೇಣ ಭಾರ್ಯಯಾ। ದುಹಿತ್ರಾ ದಾಸವರ್ಗೇಣ ವಿವಾದಂ ನಸಮಾಚರೇತ್ ॥೧೮೦॥ ಮ-iv॥

14 ನೋದಾಹರೇದಸ್ಯ ನಾಮ ಪರೋಕ್ಷಮಪಿ ಕೇವಲಂ ॥ಮ-ii-೧೯೯॥

15 ಹುಂಕಾರಂ ಬ್ರಾಹ್ಮಣಸ್ಯೋಕ್ತ್ವಾ ತ್ವಂಕಾರಂ ಚಗರೀಯಸಃ। ಸ್ನಾತ್ವಾನಶ್ನನ್ನಹ ಶ್ಶೇಷಮಭಿವಾದ್ಯ ಪ್ರಸಾದಯೇತ್ ॥ಮ-ii-೧೧೭॥

16 ಉತ್ತಿಷ್ಠೇತ್ಪ್ರಥಮಂ ಚಾಸ್ಯ ಚರಮಂ ಚೈವ ಸಂವಿಶೇತ್ ॥ಮ.ii-೧೯೪॥ (ಅಸ್ಯ ಇತಿಗುರೋಃ)

17 ಪ್ರತಿಶ್ರವಣಸಂಭಾಷೇ ಶಯಾನೋ ನ ಸಮಾಚರೇತ್। ನಾಸೀನೋ ನ ಚ ಭುಂಜಾನೋ ನತಿಷ್ಠನ್ನಪರಾಙ್ಮುಖಃ ॥ಮ-ii-೧೯೫॥

ಮಲಗಿದ್ದರೆ ಬಗ್ಗಿ, ಸಂಭಾಷಣೆ ಮಾಡಬೇಕು[18] **ಅಭಿವಾದನಪ್ರಕಾರವು** ಎರಡನೆಯದು—ಬ್ರಾಹ್ಮಣನು ನಮಸ್ಕಾರಮಾಡುವಾಗ "ದೇವದತ್ತಶರ್ಮಾಽಹಂ ಭೋ ೩ ಅಭಿವಾದಯೇ"—ದೊಡ್ಡವರೇ ದೇವದತ್ತನಾದ ನಾನು ನಮಸ್ಕಾರ ಮಾಡುತ್ತೇನೆ ಎಂದು ಹೇಳಿ ನಮಸ್ಕಾರ ಮಾಡಬೇಕು.[19] ಸಂಸ್ಕೃತವನ್ನು ಅರ್ಥಮಾಡಿಕೊಳ್ಳಲಾದವರಿಗೆ ಇಂಥಾವನು ನಾನು ಎಂದಷ್ಟೇ ಹೇಳಿ ನಮಸ್ಕಾರ ಮಾಡಬೇಕು[20]

ಸ್ತ್ರೀಯರನ್ನು ಸತ್ಕರಿಸುವ ಸಂದರ್ಭದಲ್ಲಿ ಸೂಕ್ಷ್ಮವನ್ನರಿತು ಉಪಚಾರಕ್ಕೆ ಪ್ರತಿಯಾಗಿ ಅಪಚಾರವಾಗುವಂತೆ ವರ್ತಿಸಬಾರದು ತಾಯಿಯ ವಿಷಯದಲ್ಲಿ ಸಂಕೋಚಕ್ಕೆ ಅವಕಾಶವಿಲ್ಲ. ತಾಯಿಯ ಅನಂತರ ಗುರುಪತ್ನಿಯು ಸರ್ವಶ್ರೇಷ್ಠಳು ಆಕೆಯು ಯುವತಿಯಾಗಿದ್ದು ತಾನೂ ಯೌವನಸ್ಥನಾದರೆ ಆಕೆಯ ಕಾಲು ಮುಟ್ಟಿ ನಮಸ್ಕಾರವನ್ನು ಮಾಡಬಾರದು, ಭೂಮಿಯನ್ನೇ ಮುಟ್ಟಿ ಮಾಡಬೇಕು.[21] ತಾಯಿಯ ಸೋದರಿ, ತಂದೆಯ ಸೋದರಿ, ಸೋದರಮಾವನ ಹೆಂಡತಿ, ಹೆಣ್ಣು ಕೊಟ್ಟ ಅತ್ತೆ ಇಂಥಾವರಿಗೆ ಗುರುಪತ್ನಿಯಂತೆಯೇ ಮಾಡಬೇಕು. ತಾಯಿ ಮಗಳು ಸಹೋದರಿ, ಇವರೊಡನೆಯೂ ಏಕಾಂತದಲ್ಲಿ ಕುಳಿತಿರಬಾರದು, ಇತರ ಸ್ತ್ರೀಯರ ಮಾತು ಹೇಳಬೇಕಾದುದೇ ಇಲ್ಲ[22] ದೇಹಸಂಬಂಧವಿಲ್ಲದವರ ಪತ್ನಿಯರನ್ನು ಮಾತನಾಡಿಸುವಾಗ ನೀವು ತಾವು ಅಮ್ಮ ತಾಯಿ ಅಕ್ಕ ತಂಗಿ ಶ್ರೀಮತಿ ಎಂದು ಮರ್ಯಾದೆಯಾಗಿ ಸಂಬೋಧಿಸಬೇಕು. ಪತ್ನೀ ಎಂದಿರುವುದರಿಂದ ಈ ನಿಯಮವು ಕನ್ನಿಕೆಗೆ ಅನ್ವಯಿಸುವುದಿಲ್ಲ. ಅಂಥಾವಳನ್ನು ಆಯುಷ್ಮತಿ ಎಂದು ಸಂಬೋಧಿಸಬೇಕು.[23]

---

18 ಆಸೀನಸ್ಯ ಸ್ಥಿತಃ ಕುರ್ಯಾದಭಿಗಚ್ಛಂಸ್ತು ತಿಷ್ಠತಃ। ಪ್ರತ್ಯುದ್ಗಮ್ಯ ತ್ವಾವ್ರಜತಃ ಪಶ್ಚಾದ್ಧಾವಂಸ್ತು ಧಾವತಃ ॥೧೯೬॥ ಪರಾಙ್ಮುಖಸ್ಯಾಭಿಮುಖೋ ದೂರಸ್ಥಸ್ಯೈತ್ಯ ಚಾಂತಿಕಂ। ಪ್ರಣಮ್ಯ ತು ಶಯಾನಸ್ಯ ನಿದೇಶೇ ಚೈವ ತಿಷ್ಠತಃ ॥೧೯೭॥ ಮ-ii ॥

19 ಅಭಿವಾದಾತ್ಪರಂ ವಿಪ್ರೋ ಜ್ಯಾಯಾಂಸಮಭಿವಾದಯನ್। ಅಸೌ ನಾಮಾಹಮಸ್ಮೀತಿ ಸ್ವಂ ನಾಮ ಪರಿಕೀರ್ತಯೇತ್ ॥೧೨೨॥ ಭೋಃಶಬ್ದಂ ಕೀರ್ತಯೇದಂತೇ ಸ್ವಸ್ಯ ನಾಮ್ನೋಽಭಿವಾದನೇ ॥೧೨೪॥ ಮ-ii ॥

20 ನಾಮಧೇಯಸ್ಯ ಯೇ ಕೇಚಿದಭಿವಾದಂ ನ ಜಾನತೇ। ತಾನ್ ಪ್ರಾಜ್ಞೋಽಹಮಿತಿ ಬ್ರೂಯಾತ್ ಸ್ತ್ರಿಯಸ್ಸರ್ವಾಸ್ತಥೈವ ಚ ॥ಮ-ii-೧೨೩॥

21 ಗುರುಪತ್ನೀ ತು ಯುವತಿರ್ನಾಭಿವಾದ್ಯೇಹ ಪಾದಯೋಃ। ಪೂರ್ಣವಿಂಶತಿವರ್ಷೇಣ ಗುಣದೋಷೌ ವಿಜಾನತಾ ॥೨೧೨॥ ಕಾಮಂ ತು ಗುರುಪತ್ನೀನಾಂ ಯುವತೀನಾಂ ಯುವಾ ಭುವಿ। ವಿಧಿವದ್ವಂದನಂ ಕುರ್ಯಾದಸಾವಹಮಿತಿ ಬ್ರುವನ್ ॥೨೧೩॥ ಮ-ii ॥

22 ಮಾತ್ರಾ ಸ್ವಸ್ರಾ ದುಹಿತ್ರಾ ವಾ ನವಿವಿಕ್ತಾಸನೋ ಭವೇತ್ ॥ಮ-ii-೨೧೫॥

23 ಪರಪತ್ನೀ ತು ಯಾಸ್ತ್ರೀಸ್ಯಾದಸಂಬಂಧಾ ಚ ಯೋನಿತಃ। ತಾಂ ಬ್ರೂಯಾದ್ಭವತೀತ್ಯೇವಂ ಸುಭಗೇ ಭಗಿನೀತಿ ಚ ॥ಮ-ii-೨೧೨॥ ಅಸಂಸ್ತುತಾಪಿ ಪರಪತ್ನೀ ಭಗಿನೀತಿ ವಾಚ್ಯಾ ಪುತ್ರೀತಿ ಮಾತೇತಿ ವಾ ॥ವಿ-೩೨-೭॥ ಪತ್ನೀಗ್ರಹಣಾತ್ ಕನ್ಯಾಯಾಂ ನೈಷವಿಧಿಃ ॥ ಆಯುಷ್ಮತೀತ್ಯಾದಿಪದೈರಭಿಭಾಷಣಂ ॥ಕುಲ್ಲೂಕಃ॥

## ೬. ಸಭ್ಯತೆ

ನಾಲ್ಕು ಜನರ ಮಧ್ಯೆ ಹೇಗೆ ಬಾಳಬೇಕು, ಸಮಾಜದಲ್ಲಿ ಹೇಗೆ ವರ್ತಿಸಬೇಕು, ಎಂಬುದನ್ನರಿತು ನಡೆಯುವುದಕ್ಕೆ ಸಭ್ಯತೆಯೆಂದು ಹೆಸರು. ಸಭ್ಯತೆಯು, ಸ್ನೇಹ ಸಂಬಂಧ ಯೋಗ್ಯತೆ ಸ್ಥಿತಿಗತಿ ಸಮಯ ಸಂದರ್ಭ ಮುಂತಾದವುಗಳಿಗೆ ಅನುಗುಣವಾದುದು. ಇದಕ್ಕೆ ಎಲ್ಲಾ ಸಭ್ಯ ಸಮಾಜಗಳಲ್ಲಿಯೂ ಮನ್ನಣೆಯುಂಟು. ನಮ್ಮ ಮಹರ್ಷಿಗಳೂ ಈ ವಿಷಯವಾಗಿ ನಿಯಮಗಳನ್ನು ಹೇಳಿದ್ದಾರೆ. ತತ್ತ್ವಬೋಧಕಗಳಾದ ಕೆಲವನ್ನು ಸೂಚಿಸಿದರೆ ಸಾಕು. ಪರರಿಗೆ ದ್ರೋಹವನ್ನು ಮಾಡಲೂ ಬಾರದು ಎಣಿಸಲೂಬಾರದು ಎಂಬುದು ಮೊದಲಣದು.[1] ಯಾರಿಗೂ ಅವಮಾನವನ್ನು ಮಾಡಬಾರದೆಂಬುದು ಎರಡನೆಯದು.[2] ತನಗೆ ಅಲ್ಲದ್ದನ್ನು ಇನ್ನೊಬ್ಬರಿಗೆ ಮಾಡಬಾರದೆಂಬುದು ಮೂರನೆಯದು.[3] ಈ ಮೂರು ಪ್ರಧಾನತತ್ತ್ವಗಳ ಮೇಲೆ ಸಭ್ಯತೆಯು ವ್ಯವಸ್ಥಿತವಾಗಿದೆ. ದ್ರೋಹವೆಂದರೆ ಹಿಂಸೆ. ಪರಹಿಂಸೆಯು ಅಹಿಂಸಾತತ್ತ್ವಕ್ಕೆ ಸೇರಿದುದು. ಸಾಧಾರಣವಾಗಿ ತಿಳಿಯದವರು ಅಂಗಹೀನರನ್ನೂ ಅಧಿಕಾಂಗದವರನ್ನೂ ವಿದ್ಯಾಹೀನರನ್ನೂ ಧನಹೀನರನ್ನೂ ವೃದ್ಧರನ್ನೂ ಕುರೂಪಿಗಳನ್ನೂ ಹೀನಜಾತಿಯವರನ್ನೂ ಹೀಯಾಳಿಸುವುದುಂಟು. ಹಾಗೆಯೇ ವೃತ್ತಿಯಲ್ಲಿಯೂ ಬಲದಲ್ಲಿಯೂ ಹೀನರನ್ನೂ ಹೀಯಾಳಿಸುತ್ತಾರೆ. ಹಾಗೆ ಮಾಡಬಾರದೆಂಬುದು ಎರಡನೆಯ ತತ್ತ್ವದ ಮಾತು.[4] ಶತ್ರುವನ್ನೂ ಅವನ ಕಡೆಯವರನ್ನೂ ಅಧಾರ್ಮಿಕನನ್ನೂ ಕಳ್ಳನನ್ನೂ ಪರಸ್ತ್ರೀಯನ್ನೂ ಸೇವಿಸಬಾರದು;[5] ಯಾರನ್ನೂ ಹೊಡೆಯಬಾರದು, ಕೋಪಿಸಿಕೊಂಡಂತೂ ಹೊಡೆಯಲೇಬಾರದು[6]; ತನಗಿಂತಲೂ ಶಿಷ್ಟನಾದವನನ್ನು ಎಬ್ಬಿಸಬಾರದು,[7] ಜರತ್ಕಾರುವನ್ನು ಅವನ ಪತ್ನಿಯು ಸಂಧ್ಯಾ

---

1 ನ ಪರದ್ರೋಹಕರ್ಮಧೀಃ ॥ಮ-iv-೧೭೭॥ ಪರದ್ರೋಹೋ ಪರಹಿಂಸಾ। ತದರ್ಥಂ ಚೇಷ್ಟಾಂ ಬುದ್ಧಿಂ ಚ ನ ಕುರ್ಯಾತ್ ॥ಕುಲ್ಲೂಕಃ॥

2 ನ ಕಂಚನ ನಾವಮನ್ಯೇತ ॥ವಿ-೭೧-೧॥

3 ಆತ್ಮನಃ ಪ್ರತಿಕೂಲಾನಿ ನ ಪರೇಷಾಂ ಸಮಾಚರೇತ್ ॥ವ್ಯಾಸಃ॥

4 ಹೀನಾಂಗಾನತಿರಿಕ್ತಾಂಗಾನ್ವಿದ್ಯಾಹೀನಾನ್ವಯೋಧಿಕಾನ್। ರೂಪದ್ರವ್ಯವಿಹೀನಾಂಶ್ಚ ಜಾತಿಹೀನಾಂಶ್ಚ ನಾಕ್ಷಿಪೇತ್ ॥ಮ-iv-೧೪೧॥ ನಹೀನಾನವಮನ್ಯೇತ ವೃತ್ತ್ಯರ್ಥಾಂಗಬಲಶ್ರುತೈಃ ॥ಅ. ಸಂ-ದಿನಚರ್ಯಾ॥

5 ವೈರಿಣಂ ನೋಪಸೇವೇತ ಸಹಾಯಂ ಚೈವ ವೈರಿಣಂ। ಅಧಾರ್ಮಿಕಂ ತಸ್ಕರಂ ಚ ಪರಸ್ಯೈವ ಚ ಯೋಷಿತಂ ॥ಮ-iv-೧೩೩॥

6 ಪರಸ್ಯ ದಂಡಂ ನೋದ್ಯಚ್ಛೇತ್ಕ್ರುದ್ಧೋ ನೈವ ನಿಪಾತಯೇತ್। ಅನ್ಯತ್ರ ಪುತ್ರಾಚ್ಛಿಷ್ಯಾದ್ವಾ ಶಿಷ್ಟ್ಯರ್ಥಂ ತಾಡಯೇತ್ತು ತೌ ॥ಮ-iv-೧೬೪॥ ನ ನಿಂದಾ ತಾಡನಂ ಕುರ್ಯಾತ್ ಪುತ್ರಂ ಶಿಷ್ಯಂ ಚ ತಾಡಯೇತ್ ॥ಯಾ-i-೧೫೫॥

7 ನಶಯಾನಂ ಪ್ರಬೋಧಯೇತ್ ॥ಯಾ:i-೧೩೮॥ (ನಿದ್ರಾಭಂಗಮಾಡಬಾರದು—ನಾಣ್ಣುಡಿ.) ಶ್ರೇಯಾಂಸಂ ನ ಪ್ರಬೋಧಯೇತ್ ॥ಮ-iv-೫೭॥

ಕಾಲವು ಅತೀತವಾಗುವುದೆಂದು ಧರ್ಮಲೋಪಭಯದಿಂದೆಬ್ಬಿಸಿದುದೂ ಕೂಡ ಅಕ್ಷಮ್ಯವಾದ ಅಪರಾಧವಾಯಿತೆಂದು ಐತಿಹ್ಯವಿದೆ. ಅನುರಕ್ತನ ಅನುರಾಗಕ್ಕೆ ಭಂಗಬರುವಂಥಾದ್ದನ್ನು ಮಾಡಬಾರದು;[8] ತಾನು ಯಾವ ಸಮಾಜದಲ್ಲಿದ್ದರೆ ಅವರೆಲ್ಲರೂ ಹೇಗೆ ವರ್ತಿಸುತ್ತಾರೋ ಹಾಗೆ ತಾನೂ ಹೊಂದಾಣಿಕೆಯಿಂದಿರಬೇಕು,[9] ಇತ್ಯಾದಿಗಳು ಮೂರನೆಯ ತತ್ವದ ಮೇಲೆ ವ್ಯವಸ್ಥಿತವಾದ ನಿಯಮಗಳು.

## ೭. ಸೌಜನ್ಯ ಅಥವಾ ಅಭಿರಾಮತ್ವ[1]

ಸೃಷ್ಟಿಯಲ್ಲೆಷ್ಟೋ ಜೀವಜಂತುಗಳಿವೆ ಸಾಮಾನ್ಯವಾಗಿ ಎಲ್ಲವೂ ಒಂಟಿ ಒಂಟಿಯಾಗಿಯೇ ಜೀವಿಸುತ್ತವೆ. ಆನೆ, ಜಿಂಕೆ, ಕೋತಿ, ಜೇನು, ಇರಿವೆ ಮುಂತಾದ ಕೆಲವು ಹಿಂಡುಹಿಂಡಾಗಿದ್ದರೂ ಸಾಮೂಹಿಕ ಜೀವನವು ಪ್ರಕೃತಿಸ್ವರೂಪದಲ್ಲಿಯೇ ಇರುತ್ತದೆ, ವ್ಯವಸ್ಥಿತವಾದಂತೆ ಕಾಣುವುದಿಲ್ಲ. ವ್ಯವಸ್ಥಿತವಾದ ಸಾಮೂಹಿಕಜೀವನವನ್ನು ನಡೆಸುವವನು ಮಾನವನೊಬ್ಬನೇ. ಅವನನ್ನು ಸಮಾಜಜೀವಿಯೆಂದೇ ನಿರ್ವಚನ ಮಾಡಿದ್ದಾರೆ.[2] ಅವನು ಏಕಾಂಗಿಯಾಗಿ ಇರಲೇ ಆರ; ಜನರ ಸಂಪರ್ಕವನ್ನೇ ತಪ್ಪಿಸಿ ಏಕಾಂಗಿಯಾಗಿ ಬಂಧಿಸುವುದೂ ಕಠಿಣಶಿಕ್ಷೆ[3] ಯೆಂಬುದರ ಅರ್ಥವೇ ಇದು. ಸಮಾಜಜೀವಿಯಾದುದರಿಂದ ಸಮಾಜದ ಯೋಗಕ್ಷೇಮವು ಮಾನವ ಜೀವನದ ಪ್ರಧಾನ ಧ್ಯೇಯವೆಂಬುದೇ ಸಿದ್ಧಾಂತ ಸಮಾಜದ ಹಿತಪ್ರೀತಿಸಾಧನೆಗಾಗಿ ವೈಯಕ್ತಿಕ ಪ್ರಿಯಹಿತವನ್ನು ಸಂಕುಚಿತ ಮಾಡಲೇಬೇಕು; ಸಂದರ್ಭವೊದಗಿದರೆ ಬಲಿಕೊಡಲೂಬೇಕು. ಕುಲಕ್ಕಾಗಿ ತಮ್ಮವನನ್ನೂ, ಗ್ರಾಮಕ್ಕಾಗಿ ಕುಲವನ್ನೂ, ರಾಷ್ಟ್ರಕ್ಕಾಗಿ ಗ್ರಾಮವನ್ನೂ ತ್ಯಾಗಮಾಡಬೇಕು[4] ಎಂಬ ನೀತಿಯೂ ಇದನ್ನೇ ಪುಷ್ಟೀಕರಿಸುತ್ತದೆ. ವೈಯಕ್ತಿಕ ವ್ಯವಸಾಯದಿಂದ ಸಮಾಜಕ್ಕೆ ಅಹಿತವೂ ಅಪ್ರಿಯವೂ ಆಗಬಾರದೆಂಬುದೇ ಮಾನವಜೀವನದ ಧ್ಯೇಯವಾಗಿರಬೇಕು. ಈ ಧ್ಯೇಯವನ್ನು ಸಾಧಿಸುವುದಕ್ಕೆ ಬಾಹ್ಯ ಆಭ್ಯಂತರಗಳೆಂಬ ಎರಡು ವಿಧದ ಪ್ರೇರಣೆಗಳಿವೆ. ಬಾಹ್ಯವು ಅಡ್ಡಿ ಆತಂಕರೂಪದ ನಿರ್ಬಂಧವು:—ರಾಜದಂಡ, ಸಮಾಜಶಕ್ತಿ, ಬಲಿಷ್ಠರ ಭಯ, ಮುಂತಾದವು. ಸಮಾಜ ಹಿತಕ್ಕೆ ವಿರೋಧವಾಗಿ ನಡೆಯುವುದು ಗುರುತರವಾದ ಅಪರಾಧವಾದರೆ ರಾಜದಂಡವೂ ಲಘುತರವಾದರೆ ಜನರಿಂದ ತಿರಸ್ಕಾರ ಬಹಿಷ್ಕಾರಾದಿಗಳೂ ಪ್ರಾಪ್ತವಾಗುವುವು, ಅಥವಾ ಬಲಿಷ್ಠರಿಂದ

8 ನರಕ್ತಂ ವಿರಾಗಯೇತ್ ॥ ವಿ-೭೧-೫೭॥

9 ಪ್ರಸಿದ್ಧಕೇಶವಾಗ್ವೇಷಶಮಸಾಂತ್ವಪರಾಯಣಃ ॥ ಅ.ಸಂ-ದಿನಚರ್ಯ॥

1 ಸ್ವಲ್ಪ ಹೆಚ್ಚು ಕಡಿಮೆ Etiquette ಎನ್ನಬಹುದು.

2 Man is a social animal. 3 Solitary Confinement.

4 ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ । ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥ ನೀತಿ॥

ಪ್ರತೀಕಾರವೂ ಒದಗಬಹುದು. ಈ ವಿಧದ ಬಾಹ್ಯಭೀತಿಯಿಂದ ನಡೆಯುವ ಸದ್ವರ್ತನವು ನೈತಿಕಕ್ಕೆ ಸಂಬಂಧಪಟ್ಟುದಲ್ಲವಾಗಿ ಈ ಲೇಖಕ್ಕೆ ಪ್ರಕೃತವಲ್ಲ. ಅಂತಃ ಪ್ರೇರಣೆಯಿಂದ ನಡೆಯುವುದೇ ನೈತಿಕವು—ಅದೀಲೇಖಕ್ಕೆ ಸಂಬಂಧಪಟ್ಟುದು.

ನೈತಿಕವು ಸ್ವಭಾವ ಅಭ್ಯಾಸ ಸಂಸ್ಕೃತಿಗಳಿಂದ ರೂಪಗೊಳ್ಳುವುದು. ವಿಶುದ್ಧಾಂತರಂಗದಲ್ಲಿ ಕಾರ್ಯಾಕಾರ್ಯ ವಿವೇಚನೆಯಾಗಿ, ಅಕಾರ್ಯವನ್ನು ಮಾಡಬಾರದೆಂದೂ ಕಾರ್ಯವನ್ನು ಮಾಡಬೇಕೆಂದೂ ಬುದ್ಧಿಪೂರ್ವಕವಾಗಿಯೋ ಅಭ್ಯಾಸದ ಬಲದಿಂದಲೋ, ವ್ಯಕ್ತವಾಗಿಯೋ ಅವ್ಯಕ್ತವಾಗಿಯೋ, ವ್ಯಕ್ತಿಯನ್ನು ಪ್ರೇರೇಪಿಸುವುದು ಅಂತಃಪ್ರೇರಣೆಯು. ಅದು ಐಚ್ಛಿಕ, ಆತ್ಮಸಂತುಷ್ಟಿಯೇ ಅದರ ಧ್ಯೇಯ, ಅದರಲ್ಲಿ ಭಯನಿರ್ಬಂಧಗಳಿಲ್ಲ. ಯದ್ಯಪಿ ನೈತಿಕಕ್ಕೆ ಸಮಾಜದಲ್ಲಿ ಪುರಸ್ಕಾರವೂ ಪೂಜ್ಯತೆಯೂ ವಿಖ್ಯಾತಿಯೂ ಲಭ್ಯವಾದರೂ ಅದು ಗೌಣವೇ ವಿನಾ ಪ್ರಧಾನವಲ್ಲ. ನಾವು ಸುಜನರಾಗಿರಬೇಕು, ನಮ್ಮದು ಸದ್ವರ್ತನವಾಗಿರಬೇಕು, ನಮ್ಮ ಗುಣವು ಕಲ್ಯಾಣಗುಣವಾಗಿರಬೇಕು, ನಮ್ಮ ನಡೆನುಡಿಗಳಿಂದ ಇತರರಿಗೆ ಅಹಿತವೂ ಉದ್ರೇಕವೂ ಆಗಬಾರದು, ಅವುಗಳಿಂದ ನಮ್ಮ ಇತರರ ಅಂತರಾತ್ಮಗಳೆಲ್ಲವೂ ಸಂತುಷ್ಟವಾಗಬೇಕು, ಎಂಬುದೇ ನೈತಿಕಜೀವನದ ಆಂತರ್ಯ. ಅದಕ್ಕೇ ಶ್ರುತಿಸ್ಮೃತಿಸದಾಚಾರಗಳ ಜತೆಗೆ ಆತ್ಮಸಂತುಷ್ಟಿಯನ್ನೂ ಧರ್ಮದ ಮೂಲವೆಂದಿರುವುದೂ,[5] ಮಂಗಳಾಚಾರಶೀಲನಿಗೆ ಎಂದಿಗೂ ದುರ್ಗತಿಯಾಗುವುದಿಲ್ಲವೆಂದಿರುವುದೂ.[6] ಗ್ರೀಸಿನ ಸುಪ್ರಸಿದ್ಧ ನೀತಿಶಾಸ್ತ್ರಕಾರನಾದ ಅರಿಸ್ಟಾಟಲ್‌ನು "ಇಂಥಾ ಉತ್ತಮ ಸಂಸ್ಕೃತಿಯ ಆವಿರ್ಭಾವವೇ ಸ್ವಯಂ ಸಂತೋಷಕಾರಕವು, ಅಂದರೆ ಸದ್ಗುಣಿಗೂ ಸಂತೋಷಪ್ರದವು, ಮತ್ತು ಅದೂ ಸ್ವತಃ ಸಂತೋಷ ದಾಯಕವು"[7] ಎಂದೂ, "ಸಂತೋಷಚಿತ್ತನಿಗೆ ಎಂದಿಗೂ ಸಂಕಟಗಳೊದಗುವುದಿಲ್ಲ"[8] ಎಂದೂ ಹೇಳಿದ್ದಾನೆ.

ಇಂಥಾ ನೈತಿಕ ಸಂಸ್ಕೃತಿಯೇ ಸೌಜನ್ಯ ಅಥವಾ ಅಭಿರಾಮತ್ವ; ಆತ್ಮಾಪ್ಯಾಯನ ದೃಷ್ಟಿಯಿಂದ ಸೌಜನ್ಯವೆಂದೂ ಪರಾಪ್ಯಾಯನ ದೃಷ್ಟಿಯಿಂದ ಅಭಿರಾಮತ್ವವೆಂದೂ ಎರಡು ಅನ್ವರ್ಥನಾಮಗಳು. ಇದರಲ್ಲಿ ಯಾವ ವಿಧವಾದ,

---

5 ಶ್ರುತಿಸ್ಸ್ಮೃತಿಸ್ಸದಾಚಾರಸ್ಸ್ವಸ್ಯ ಚ ಪ್ರಿಯಮಾತ್ಮನಃ। ಸಮ್ಯಕ್ಸಂಕಲ್ಪಜಃ ಕಾಮೋ ಧರ್ಮಮೂಲಮಿದಂ ಸ್ಮೃತಂ ॥ಯಾ-i-೭॥

6 ನಹಿಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ಭ. ಗೀ.॥ ಮಂಗಳಾಚಾರಯುಕ್ತಾನಾಂ ನಿತ್ಯಂ ಚ ಪ್ರಯತಾತ್ಮನಾಂ । ಜಪತಾಂ ಜುಹ್ವತಾಂ ಚೈವ ವಿನಿಪಾತೋ ನ ವಿದ್ಯತೇ ॥ ಮ-iv-೧೪೬॥

7 Manifestations of excellence are naturally pleasant, so that they are pleasant to them and pleasant in themselves—Nichomachaen Ethics—Aristotle.

8 No happy man will become miserable—Ibid.

ಭೀತಿಯೂ, ವಚನೀಯದ ಆತಂಕವೂ, ಆತ್ಮೋಪಕಾರ ಪರೋಪಕಾರಗಳ ಪ್ರಕೃತವೂ ಇಲ್ಲ; ಎಲ್ಲರ ಆತ್ಮಕ್ಕೂ ಆಪ್ಯಾಯನವಾಗಬೇಕೆಂಬ ಸಾತ್ವಿಕಮನೋಭಾವವೇ ಎದ್ದುಕಾಣುವುದು. ನಮ್ಮ ಕೆಲಸ ನಮ್ಮದು, ನಮಗೆ ಯುಕ್ತವೆಂದು ತೋರಿದುದನ್ನು ನಾವು ಮಾಡಿದರಾಯಿತು, ಇತರರ ಮನಸ್ಸಿನ ಮೇಲಾಗುವ ಪರಿಣಾಮವು ನಮಗೆ ಪ್ರಕೃತವಲ್ಲ, ಎಂಬ ಧೋರಣೆಯೂ ಇದರಲ್ಲಿಲ್ಲ. ಈ ವಿಷಯವಾಗಿ ಹೇಳಿರುವ ಸಾರವಚನಗಳನ್ನು ಗಮನಿಸಬೇಕು. ವಾಗ್ಭಟರು ಎರಡು ವಚನಗಳನ್ನು ನುಡಿದಿದ್ದಾರೆ:—ಒಂದರಲ್ಲಿ ಪ್ರಸಿದ್ಧವಾದ ಅಲಂಕಾರವನ್ನೂ ವೇಷಭಾಷೆಗಳನ್ನೂ ಶಾಂತಿಸೌಜನ್ಯಗಳನ್ನೂ ತಪ್ಪದೆ ಬಳಸುತ್ತಿರಬೇಕು,[9] ಅಂದರೆ ನಮ್ಮ ರೀತಿ ನಮ್ಮದು ಎನ್ನದೆ ಎಲ್ಲರಂತೆ ನಾವೂ ಇರಬೇಕು ಎಂದೂ, ಇನ್ನೊಂದರಲ್ಲಿ ಧರ್ಮವೂ ಪ್ರಯೋಜನಕಾರಿಯೂ ಪ್ರಿಯವೂ ನಿಜವೂ ಮಿತವೂ ಹಿತವೂ ಆದ ವಾಣಿಯನ್ನೇ ನುಡಿಯಬೇಕೆಂದೂ,[10] ಅಂದಿದ್ದಾರೆ. ಯಾಜ್ಞವಲ್ಕ್ಯರೂ ಎರಡು ಸಾರವಚನಗಳನ್ನು ನುಡಿದಿದ್ದಾರೆ:—ಒಂದು—ದೇಶಾಚಾರ ಗ್ರಾಮಾಚಾರ ಕುಲಾಚಾರಗಳಿಗೆ ವಿರುದ್ಧವಾದುದನ್ನು ಮಾಡಬಾರದು[11] ಎಂಬುದು. ಇನ್ನೊಂದು—ಪುಣ್ಯಲೋಕಸಾಧನೆಗಲ್ಲದ, ಜನರಿಗೆ ವಿರೋಧವಾಗುವ, ಕೆಲಸವು ಧರ್ಮವೇ ಆದರೂ ಮಾಡಬಾರದು[12] ಎಂಬುದು. "ಶುದ್ಧವೇ ಆದರೂ ಲೋಕಕ್ಕೆ ವಿರುದ್ಧವಾದುದನ್ನು ಮಾಡಬಾರದೆಂದು"[13] ಆಚಾರ್ಯರ ಸಂಗ್ರಹವಾಕ್ಯ.

ಈ ವಿಷಯದಲ್ಲಿ ಅನೇಕ ನಿಯಮಗಳು ಸ್ಮೃತಿಗಳಲ್ಲಿಯೂ ಇತಿಹಾಸಗಳಲ್ಲಿಯೂ ಸೂಚಿತವಾಗಿವೆ. ಅವುಗಳನ್ನು ಆಯಾ ಪ್ರಕರಣಗಳಲ್ಲಿ ಸಂಗ್ರಹಿಸಿದೆ, ಕೆಲವನ್ನು ಮಾತ್ರ ಇಲ್ಲಿ ಉದಹರಿಸಿದೆ:—ಹೊರಗೆ ಸ್ನಾನಮಾಡುವಾಗಲೂ ನಿದ್ದೆ ಮಾಡುವಾಗಲೂ ಬೆತ್ತಲೆಯಾಗಿರಬಾರದು.[14] ಒದ್ದೆಯನ್ನೂ ಉಡಬಾರದು, ಉಟ್ಟರೆ ಅದೂ ನಗ್ನತ್ವದ ಪ್ರಕಾರಾಂತರವೇ.[15] ಅತಿಥಿಗಳಿಗೆ ಸತ್ಕಾರವನ್ನು ಮಾಡುವಾಗ ಜತೆಯಲ್ಲಿ ಕುಳಿತುಕೊಂಡಿರಬೇಕು, ಪ್ರಿಯವಾಗಿ ಮಾತನಾಡುತ್ತಿರಬೇಕು, ಹೋಗುವಾಗ ಜತೆಯಲ್ಲಿ ಹೋಗಿ ಸಾಗಕಳುಹಿಸಬೇಕು.[16] ಭಿಕ್ಷುಕರಿಗೆ

---

9 ಪ್ರಸಿದ್ಧಕೇಶವಾಗ್ವೇಷಶಮಸಾಂತ್ವಪರಾಯಣಃ ॥ಅ.ಸಂ-ದಿನಚರ್ಯ॥ ಇಲ್ಲಿ ಕೇಶವೆಂದಿರುವುದು ಎಲ್ಲಾ ದೈಹಿಕಾಲಂಕಾರಗಳಿಗೂ ಉಪಲಕ್ಷಣವು.

10 ಧರ್ಮ್ಯಮರ್ಥ್ಯಂ ಪ್ರಿಯಂ ತಥ್ಯಂ ಹಿತಂ ಪಥ್ಯಂ ವದೇದ್ವಚಃ ॥ಅ.ಸಂ.ದಿನಚರ್ಯ॥

11 ವಿರುದ್ಧಂ ವರ್ಜಯೇತ್ಕರ್ಮ ॥ಯಾ.i.೧೫೫॥ ಜನಪದಗ್ರಾಮಕುಲಾಚಾರವಿರುದ್ಧಂ ಕರ್ಮ ವರ್ಜಯೇತ್ ॥ಮಿತಾಕ್ಷರ॥

12 ಅಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮಮಪ್ಯಾಚರೇನ್ನ ತು ॥ಯಾ.i-೧೫೬॥

13 ಯದ್ಯಪಿ ಶುದ್ಧಂ ಲೋಕವಿರುದ್ಧಂ ನಾಚರಣೀಯಂ ॥

14 ನ ನಗ್ನಸ್ಸ್ನಾನಮಾಚರೇತ್ ॥ಮ.iv.೪೫॥

15 ನಾದ್ರ್ರವಾಸಾಃ ॥ಕರ್ಮಕಾಂಡ॥ ನಗ್ನಶ್ಚಾದ್ರ್ರಪಟಸ್ಸ್ಮೃತಃ ॥ವಿ.ಪು.॥

16 ಶ್ರದ್ಧಯಾ ಚಾನ್ನದಾನೇನ ಪ್ರಿಯಪ್ರಶ್ನೋತ್ತರೇಣ ಚ। ಗಚ್ಛಂತಂ ಚಾನುಯಾನೇನ ಪ್ರೀತಿಮುತ್ಪಾದಯೇದ್ಗೃಹೀ ॥ಪರಾ-ಅ. ೧ ೪೪॥

ಸತ್ಕಾರಪೂರ್ವಕವಾಗಿ ಭಿಕ್ಷವನ್ನು ನೀಡಬೇಕು.[17] ಬಂದವರಿಗೆ ಭೋಜನವನ್ನು ಮಾಡಿಸುವಾಗ ಸತ್ಕಾರಪೂರ್ವಕವಾಗಿ ಮಾಡಿಸಬೇಕು, ಲೀಲೆಯಿಂದ ಮಾಡಿಸ ಬಾರದು.[18] ಬೇಕಾದವರು ಊಟಕ್ಕೆ ಬನ್ನಿ ಎನ್ನಬಾರದು, ಮಿಕ್ಕಿದೆ ಬಂದು ತಿನ್ನಿ ಎಂದು ಕರೆಯಬಾರದು.[19] ಸಹಪಙ್ಕ್ತಿಯಲ್ಲಿ ಕುಳಿತರೆ ಆತುರವಾಗಿ ಉಂಡೆದ್ದು ಬಿಡ ಬಾರದು, ಜತೆಯಲ್ಲಿ ಊಟಮಾಡಿ ಜತೆಯಲ್ಲಿ ಏಳಬೇಕು.[20] ವೃದ್ಧರಿಗೂ, ಭಾರ ವನ್ನು ಹೊತ್ತವರಿಗೂ, ದೊರೆಗೂ, ಸ್ತ್ರೀಯರಿಗೂ, ರೋಗಿಗಳಿಗೂ, ವರನಿಗೂ, ರಥಾರೋಹಿಗೂ ದಾರಿಯನ್ನು ಬಿಟ್ಟುಕೊಡಬೇಕು.[21] ಸ್ತ್ರೀಯರು ಹೋಗುತ್ತಿದ್ದರೆ ಅವರನ್ನು ಅನುಸರಿಸಿ ನಡೆಯಬಾರದು.[22] ಇತ್ಯಾದಿಗಳು **ಒಳ್ಳೆಯ ನಡತೆಗಳು.**

ಮೃದುವಾಗಿಯೂ ಮಧುರವಾಗಿಯೂ ಮಾತನಾಡಬೇಕು.[23] ಮಾತು ಪರುಷವಾಗಿಯೂ ಕಠಿಣವಾಗಿಯೂ ಇರಬಾರದು.[24] ಅಶ್ಲೀಲವಾಗಿಯೂ[25] ಉದ್ರೇಕಕರವಾಗಿಯೂ[26] ಮರ್ಮಭೇದಕವಾಗಿಯೂ[27] ಮಾತನಾಡಬಾರದು, ಶುಷ್ಕ ವಿವಾದವನ್ನು ಮಾಡಬಾರದು.[28] ಹಸನ್ಮುಖನಾಗಿ ಮಾತನಾಡಬೇಕು.[29] ಯಾರೊಡನೆ ಮಾತನಾಡಬೇಕೋ ಅವರಿಗೆ ಅಭಿಮುಖವಾಗಿ ಆಡಬೇಕು.[30] ಚಿಕ್ಕವ ರನ್ನು ಮೊದಲು ಮಾತನಾಡಿಸಬೇಕು.[31] ಇತ್ಯಾದಿಗಳು **ವಾಕ್ಸೌಜನ್ಯಗಳು.**

ಸೂಕ್ಷ್ಮಪ್ರಕೃತಿಯುವರಾದ ಸ್ತ್ರೀಯರ ವಿಷಯದಲ್ಲಿ ಬಹು ಜಾಗರೂಕತೆಯಿಂದ ನಡೆಯಬೇಕು. ಸ್ವಲ್ಪ ಹೆಚ್ಚುಕಡಿಮೆಯಾದರೆ ಅವರಿಗೆ ನೋವಾಗುವುದು.

---

17 ಸತ್ಕೃತ್ಯ ಭಿಕ್ಷವೇ ಭಿಕ್ಷಾ ದಾತವ್ಯಾ ಸುವ್ರತಾಯ ಚ ॥ಯಾ-i-೧೦೮॥

18 ದಾತವ್ಯಮನ್ನಂ ವಿಧಿವತ್ಸತ್ಕೃತ್ಯ ನ ತು ಲೀಲಯಾ ॥ವಾ.ರಾ-ಬಾ.ಕಾಂ-ಸ.೧೩-ವಸಿಷ್ಠವಾಕ್ಯ॥ 19 ಕೋ ಭುಙ್ಕ್ತೇ ಇತಿ ಯದಾಘುಷ್ಯ ದೀಯತೇ ತತ್ಸಂಘುಷ್ಟಾನ್ನಂ ತನ್ನಿಂದಿತಂ ॥ಯಾ-i-೧೬೮-ಮಿತಾ॥ 20 ಏಕಪಙ್ಕ್ತ್ಯುಪವಿಷ್ಟಾನಾಂ ವಿಪ್ರಾಣಾಂ ಸಹ ಭೋಜನೇ । ಯದ್ಯೇಕೋಽಪಿ ತ್ಯಜೇತ್ಪಾತ್ರಂ ನಾಶ್ನೀಯಾದಿತರೇ ಪುನಃ॥ 21 ವೃದ್ಧಭಾರಿ ನೃಪಸ್ನಾತಃಸ್ತ್ರೀರೋಗಿವರಚಕ್ರಿಣಾಂ । ಪಂಥಾ ದೇಯಾ .. ॥ಯಾ-i-೧೧೭॥

22 ಗಚ್ಛಂತೀಂ ನಾನು ಗಚ್ಛೇತ ॥ಇತಿಸ್ಮರಣಾತ್॥

23 ವಾಕ್ಚೈವ ಮಧುರಾ ಶ್ಲಕ್ಷ್ಣಾ ಪ್ರಯೋಜ್ಯಾ ಧರ್ಮಮಿಚ್ಛತಾ ॥ಮ-ii-೧೫೯॥

24 ಪರುಷಾನಾಮ ತದ್ಯತ್ಸ್ಯಾದ್ವಿಹಿತಂ ಪರುಷಾಕ್ಷರೈಃ ॥ ಕಠೋರವಾದುದು, ಕಠಿಣವು. 25 ನಾಶ್ಲೀಲಂ ಕೀರ್ತಯೇತ್ ॥ವಿ-೭೧-೭॥॥

26 ಅನುದ್ವೇಗಕರಂ ವಾಕ್ಯಂ ॥ . .ವಾಙ್ಮಯಂತಪ ಉಚ್ಯತೇ ॥ಭ.ಗೀ.॥ ಯಯಾಸ್ಯೋದ್ವಿಜತೇ ವಾಚಾ ನಾಲೋಕ್ಯಾಂ ತಾಮುದೀರಯೇತ್ ॥ಮ ii-೧೬೧॥

27 ನಾರುಂತುದಸ್ಯಾದಾರ್ತೋಽಪಿ ॥ಮ-ii-೧೬೧॥ ನಮರ್ಮಪೀಡಾಕರಂ ಉದಾಹರೇತ್ ॥ಕುಲ್ಲೂಕಃ॥ 28 ಶುಷ್ಕವೈರಂ ವಿವಾದಂ ಚ ನ ಕುರ್ಯಾತ್ಕೇನ ಚಿತ್ಸಹ ॥ ಮ-iv-೧೩೯॥ ಶುಷ್ಕವಿವಾದಮಿತಿಚಾನ್ವಯಃ ॥ಕುಲ್ಲೂಕಃ॥

29 ಸ್ಮಿತಪೂರ್ವಾಭಿಭಾಷೀ ಸ್ಯಾತ್ ॥ವಿ-೩-೮೯॥ 30 ಪರಾಙ್ಮುಖಸ್ಯಾಭಿಮುಖಃ ॥ಮ-ii-೧೯೭॥ ಯದ್ಯಪಿ ಗುರೋಃ ಉಕ್ತಃ, ಉಪಲಕ್ಷಣೇನ ಸರ್ವತ್ರ ಯೋಜನೀಯಃ ॥

31 ಏಕೆಂದರೆ ಅವರು ಮೊದಲು ಮಾತನಾಡಿಸಲು ಸಂಕೋಚಪಡುತ್ತಾರೆ.

ಅತ್ಯುಪಚಾರವೂ ಅಪಚಾರವಾಗಬಹುದು. ಅತಿಗಾಂಭೀರ್ಯವೂ ಅತಿಮಿತತ್ವವೂ ಮತ್ತೊಂದು ವಿಧದ ಅತಿ—ಏಕೆಂದರೆ ಯಾವ ಭಾವವನ್ನು ಮುಚ್ಚುವುದು ಪ್ರಕೃತವೋ ಅದೇ ಈ ವಿಕಾರಗಳಿಂದ ಪ್ರಕಟವಾಗುವುದು. ನಗುನಗುತ್ತಾ ಮಾತನಾಡಿಸುವುದು ಸಾಮಾನ್ಯವಾಗಿ ಸೌಜನ್ಯವೇ ಆದರೂ ಅಪರಿಚಿತ ಸ್ತ್ರೀಯರ ವಿಷಯದಲ್ಲದು ಅಪರಾಧವೇ ಆಗಬಹುದು. ದೇಶಕಾಲಪಾತ್ರಾವಸ್ಥಾದಿಗಳಿಗನುಗುಣವಾಗಿ ಆತ್ಮಸಂಯಮದಿಂದ ನಡೆಯಬೇಕು. ಪರಸ್ತ್ರೀಯರೊಡನೆ ಏಕಾಂತದಲ್ಲಿಯೂ,[32] ನೀರಿಗೆ ಇಳಿಯುವ ಸ್ಥಳದಲ್ಲಿಯೂ, ಮರೆಯಾದ ಸ್ಥಳದಲ್ಲಿಯೂ, ದಟ್ಟವಾಗಿ ಬೆಳೆದ ವನದಲ್ಲಿಯೂ, ನದಿಗಳ ಸಂಗಮಸ್ಥಾನದಲ್ಲಿಯೂ, ಮಾತನಾಡಬಾರದು.[33] ಇಂಥಾವು **ಅಸ್ಥಾನಗಳು.** ಬಹಿಷ್ಠೆಯಾದವರೊಡನೆ ಮಾತನಾಡಬಾರದು,[34] ನಗ್ನರನ್ನು ಮಾತನಾಡಿಸಬಾರದು.[35] ಭೋಜನ ಮಾಡುತ್ತಿರುವಾಗಲೂ, ಆಯ್ಕಳಿಸುತ್ತಿರುವಾಗಲೂ, ಆತಂಕವಿಲ್ಲದೆ ಕುಳಿತಿರುವಾಗಲೂ, ಅಲಂಕಾರಗಳನ್ನು ಮಾಡಿಕೊಳ್ಳುತ್ತಿರುವಾಗಲೂ, ಎಣ್ಣೆಯನ್ನೊತ್ತಿಕೊಂಡಿರುವಾಗಲೂ, ಸ್ತ್ರೀಯರನ್ನು ನಿರೀಕ್ಷಿಸಬಾರದು.[36] ಇವು **ಅಕಾಲಗಳು** ಮತ್ತು **ವಿಷಮಾವಸ್ಥೆ**ಗಳು. ಕೇವಲ ಸಮೀಪ ಸಂಬಂಧಿಗಳು ವಿನಾ ಪರಪತ್ನಿಯರ ವಿಷಯದಲ್ಲಿ ಸಂಯಮದಿಂದ ನಡೆದುಕೊಳ್ಳಬೇಕು. ಸ್ತ್ರೀಯಳಸ್ವಾಮಿಯು ನನ್ನ ಸ್ತ್ರೀಯೊಡನೆ ಸಂಭಾಷಣವನ್ನು ಮಾಡಕೂಡದೆಂದು ನಿರ್ಬಂಧಪಡಿಸಿದ್ದರೆ ಆಕೆಯೊಡನೆ ಮಾತನಾಡಲೇಕೂಡದು.[37] ಇವು **ಪಾತ್ರವ್ಯವಸ್ಥೆ**ಗಳು. ಸ್ತ್ರೀಯರೊಡನೆ ಏಕಾಸನದಲ್ಲಿ ಕುಳಿತುಕೊಳ್ಳಬಾರದು;[38] ಏಕಪಾತ್ರದಲ್ಲಿ ತಿಂಡಿತಿನ್ನಬಾರದು; ಮದ್ಯಪಾನ ಮಾಡಬಾರದು; ಅತಿಸ್ವಾತಂತ್ರ್ಯವನ್ನು ವಹಿಸಬಾರದು,[39] ಇವು ಅಯುಕ್ತ

---

32 ಪರಸ್ಯ ಪತ್ನ್ಯಾ ಪುರುಷಃ ಸಂಭಾಷಾಂ ಯೋಜಯನ್ ರಹಃ । ಪೂರ್ವಮಾಕ್ಷಾರಿತೋ ದೋಷೈಃ ಪ್ರಾಪ್ನುಯಾತ್ಪೂರ್ವಸಾಹಸಂ ॥ಮ-viii-೩೫೪॥

33 ಪರಸ್ತ್ರಿಯಂ ಯೋಽಭಿವದೇತ್ತೀರ್ಥೇಽರಣ್ಯೇ ವನೇಽಪಿ ವಾ । ನದೀನಾಂ ವಾಪಿ ಸಂಭೇದೇ ಸಸಂಗ್ರಹಣಮಾಪ್ನುಯಾತ್॥ಮ-viii-೩೫೬॥ ತೀರ್ಥಾರಣ್ಯವನಾದಿಕಂ ನಿರ್ಜನದೇಶೋಪಲಕ್ಷಣಮಾತ್ರಂ, ನದೀನಾಂ ಸಂಭೇದೇ ನದೀಸಂಗಮೇ ॥ಕುಲ್ಲೂಕಃ॥

34 ನೋದಕ್ಯಯಾಽಭಿಭಾಷೇತ ॥ಮ-vi-೫೭॥ 35 ನೇಕ್ಷೇತಾರ್ಕಂ ನ ನಗ್ನಾಂ ಸ್ತ್ರೀಂ ॥ಯಾ-i-೧೩೫॥ ನನಗ್ನಾಂ ಸ್ತ್ರಿಯಮೀಕ್ಷೇತ ॥ಗೃಹ್ಯಸೂತ್ರ॥

36 ನಾಶ್ನೀಯಾದ್ಭಾರ್ಯಯಾ ಸಾರ್ಧಂ ನೈನಾಮೀಕ್ಷೇತ ಚಾಶ್ನತೀಂ । ಕ್ಷುವಂತೀಂ ಜೃಂಭಮಾಣಾಂ ವಾ ನ ಚಾಸೀನಾಂ ಯಥಾಸುಖಂ ॥೪೩॥ ನಾಂಜಯಂತೀಂ ಸ್ವಕೇ ನೇತ್ರೇ ನಚಾಭ್ಯಕ್ತಾಮನಾವೃತಾಂ ॥೪೪॥ ಮ-iv ॥ ಯದ್ಯಪೀದಂ ಭರ್ತ್ರೇ ನಿಷಿದ್ಧಂ—ಉಪಲಕ್ಷಣೇನ ಸರ್ವೇಭ್ಯೋ ಯೋಜನೀಯಂ ॥ 37 ನ ಸಂಭಾಷಾಂ ಪರಸ್ತ್ರೀಭಿಃ ಪ್ರತಿಷಿದ್ಧಸ್ಸಮಾಚರೇತ್ ॥ಮ-viii-೩೬೧॥ 38 ಅದೇಶಕಾಲಸಂಭಾಷಂ ಸಹೈಕಾಸನಮೇವ ಚ ॥ (ನಕುರ್ಯಾದಿತ್ಯನ್ವಯಃ)॥ಯಾ-ii-೨೮೪॥

39 ಶಯೀತ ನೈಕಶಯನೇ ನ ಚಾಶ್ನೀಯಾತ್ತಯಾ ಸಹ । ಮದ್ಯಾತಿಸಕ್ತಿಂ ವಿಸ್ರಂಭಸ್ವಾತಂತ್ರ್ಯಂ ಸ್ತ್ರೀಷು ಚ ತ್ಯಜೇತ್ ॥ಅ.ಸಂ-ದಿನಚರ್ಯಾ॥

ಗಳು. ಹೂವು, ಗಂಧ, ಅಲಂಕಾರದ ಸಾಮಾನು, ಮುಂತಾದುವನ್ನು ಕೊಡುವುದೂ ಕಳುಹಿಸುವುದೂ, ಹಾಸ್ಯವಿನೋದಗಳನ್ನಾಡುವುದೂ, ವಸ್ತ್ರಾಭರಣಾದಿಗಳನ್ನು ಬುದ್ಧಿಪೂರ್ವಕವಾಗಿ ಮುಟ್ಟುವುದೂ, ಜತೆಯಲ್ಲಿ ಮಂಚದಮೇಲೆ ಕುಳಿತುಕೊಳ್ಳುವುದೂ, ಎಲ್ಲವೂ ಸ್ತ್ರೀಸಂಗ್ರಹಣಕ್ರಿಯೆಗಳಾದುದರಿಂದ ನಿಷಿದ್ಧವರ್ತನಗಳು.[40] ವಿಸ್ತಾರದಿಂದೇನು, ಜಾನಕಿಯು ರಾವಣನಿಗೆ ಹೇಳಿದ ನೀತಿಯನ್ನು ಜ್ಞಾಪಕದಲ್ಲಿಟ್ಟುಕೊಂಡರೆ ಸಾಕು, ಏನೆಂದರೆ "ನಿನಗೆ ಹೇಗೋ ಇತರರಿಗೂ ಹಾಗೆಯೇ ಭಾರ್ಯೆಯು ರಕ್ಷಣೀಯಳು. ನಿನ್ನಂತೆಯೇ ಇತರರೂ ಎಂದು ತಿಳಿದು ನಿನ್ನ ಪತ್ನಿಯಲ್ಲಿ ನೀನು ನಿರತನಾಗು"[41]

## ೮. ಚಾಪಲ್ಯ

ಸುಮ್ಮಸುಮ್ಮನೆ ಚೇಷ್ಟೆಮಾಡುವುದು ಚಾಪಲ್ಯವು. ಮನಸ್ಸೂ, ಕಣ್ಣೂ, ಕಿವಿ ಮುಂತಾದ ಜ್ಞಾನೇಂದ್ರಿಯಗಳು ಚಲಿಸಿ ಚೇಷ್ಟೆಮಾಡುವುದು ಇಂದ್ರಿಯ ಚಾಪಲ್ಯವು ಕೈಯಿ ಕಾಲು ನಾಲಿಗೆ ಮುಂತಾದ ಕರ್ಮೇಂದ್ರಿಯಗಳ, ಹುಬ್ಬು ರಪ್ಪೆ, ತುಟಿ ಮುಂತಾದವುಗಳ, ಚೇಷ್ಟೆಯು ಅಂಗಚಾಪಲ್ಯವು. ಈ ಚಾಪಲ್ಯಗಳನ್ನೂ ಹೊಟ್ಟೆಯ ಚಾಪಲ್ಯವನ್ನೂ ವರ್ಜ್ಯಮಾಡಬೇಕು.[1] ಸಿಕ್ಕಿಸಿಕ್ಕಿದಹಾಗೆ ಕುಣಿಯುವುದೂ, ಹಾಡುವುದೂ, ವಾದ್ಯವನ್ನು ಬಾರಿಸುವುದೂ, ತೋಳುತಟ್ಟುವುದೂ, ಹಲ್ಲು ಕಡಿಯುವುದೂ, ಅನುರಕ್ತನಂತೆ ವಿಕಾರವಾಗಿ ಕೂಗುವುದೂ, ನಿಷಿದ್ಧವು.[2] ಸಿಕ್ಕಿಸಿಕ್ಕಿದಹಾಗೆ ನೆಲದಮೇಲೆ ಬರೆಯಬಾರದು, ಗೆರೆಗಳನ್ನೆಳೆಯಬಾರದು.[3] ಹಲ್ಲಿನಿಂದ ಉಗುರನ್ನೂ ಮೈಕೂದಲನ್ನೂ ಛೇದಿಸಬಾರದು, ಕಚ್ಚಿ ತೆಗೆಯಲೂಬಾರದು.[4] ನಿಷ್ಕಾರಣ

---

40 ಉಪಚಾರಕ್ರಿಯಾ ಕೇಳಿಸ್ಪರ್ಶೋ ಭೂಷಣವಾಸಸಾಂ। ಸಹ ಖಟ್ವಾಸನಂ ಚೈವ ಸರ್ವಂ ಸಂಗ್ರಹಣಂ ಸ್ಮೃತಂ ॥ಮ-viii-೩೫೭॥ ಸ್ರಗ್ಗಂಧಾನುಲೇಪನಪ್ರೇಷಣಾದ್ಯುಪಚಾರಕರಣಂ । ಕೇಲಿಃ ಪರಿಹಾಸ್ಯಾಲಿಂಗನಾದಿ । ಸಮ್ಯಗ್ಗೃಹ್ಯತೇ ಜ್ಞಾಯತೇ ಯೇನ ಪರಸ್ತ್ರೀಸಂಭೋಗಾಭಿಲಾಷ ಇತಿ ಸಂಗ್ರಹಣಂ ॥ಕುಲ್ಲೂಕಃ॥

41 ಯಥಾ ತವ ತಥಾನ್ಯೇಷಾಂ ದಾರಾ ರಕ್ಷ್ಯಾ ನಿಶಾಚರ । ಆತ್ಮಾನಮುಪಮಾಂ ಕೃತ್ವಾ ಸ್ವೇಷು ದಾರೇಷು ರಮ್ಯತಾಂ ॥ವಾ.ರಾ-ಸುಂ.ಕಾಂ-ಸ. ೨೧॥

1 ನ ಪಾಣಿಪಾದಚಪಲೋ ನ ನೇತ್ರಚಪಲೋಽನೃಜುಃ । ನ ಸ್ಯಾದ್ವಾಕ್ಚಪಲಶ್ಚೈವ . .॥ ಗೌತಮಃ॥

2 ನ ನೃತ್ಯೇದಥವಾ ಗಾಯೇನ್ನ ವಾದಿತ್ರಾಣಿ ವಾದಯೇತ್ । ನಾಸ್ಫೋಟಯೇನ್ನ ಚ ಕ್ಷ್ವೇಡೇನ್ನ ಚ ರಕ್ತೋ ವಿರಾವಯೇತ್ ॥ಮ-iv-೬೪॥ ಅಶಾಸ್ತ್ರೀಯಾಣಿ ನೃತ್ಯವಾದಿತ್ರಾಣಿ ನಾಚರೇತ್ । ಅವ್ಯಕ್ತದಂತಶಬ್ದಾತ್ಮಕಂ ಕ್ಷ್ವೇಡನಂ ನ ಕುರ್ಯಾತ್ । ನ ಚ ಸಾನುರಾಗೋ ರಾಸಭಾದಿರಾವಂ ಕುರ್ಯಾತ್ ॥ಕುಲ್ಲೂಕಃ॥

3 ನ ಚೈವ ಪ್ರಲಿಖೇದ್ಭೂಮಿಂ ॥ಮ-iv-೫೫॥ ನಭುವಮಾಲಿಖೇತ್ ॥ವಿ-೭೧-೪೧॥

4 ನ ಛಿಂದ್ಯಾನ್ನಖಲೋಮಾನಿ ದಂತೈರ್ನೋತ್ಪಾಟಯೇನ್ನಖಾನ್ ॥ ಮ-iv-೬೯ ॥ ನದಂತೈರ್ನಖಲೋಮಾನಿ ಛಿಂದ್ಯಾತ್ ॥ವಿ-೭೧-೪೪॥

ವಾಗಿ ಹೆಂಟೆಯನ್ನೊಡೆಯಬಾರದು, ಉಗುರಿನಿಂದ ಹುಲ್ಲನ್ನು ಜಗುಟಬಾರದು, ಸೀಳಲೂಬಾರದು; ನಿಷ್ಫಲವಾದ ಕೆಲಸವನ್ನೂ ಮಾಡಬಾರದು; ದುಷ್ಟಫಲವಾಗುವುದನ್ನೂ ಮಾಡಬಾರದು.[5] ಹೆಂಟೆಯನ್ನೊಡೆಯುವವನಿಗೂ ಹುಲ್ಲನ್ನು ಛೇದಿಸುವವನಿಗೂ ಉಗುರನ್ನು ಕಡಿಯುವವನಿಗೂ ವಿನಾಶವು ತಪ್ಪಿದ್ದಲ್ಲ; ಕೇಶದಂತನಖಗಳು ದೇಹದಿಂದ ಪೃಥಕ್ಕಾದವು ವಿಷಗಳು.[6] ಎರಡು ಕೈಗಳಿಂದಲೂ ಎಂಜಲು ಕೈಗಳಿಂದಲೂ ತಲೆಯನ್ನು ಮುಟ್ಟಿಕೊಳ್ಳಬಾರದು; ಉಪಲಕ್ಷಣದಿಂದ ಬಾಯಿ ಹೊರತು ಮಿಕ್ಕ ಯಾವ ಅಂಗವನ್ನೂ ಮುಟ್ಟಬಾರದೆಂದರ್ಥ.[7] ಉಪದ್ರವದಿಂದ ಪೀಡಿತನಾದಾಗ ಹೊರತು, ದೇಹದ ನವದ್ವಾರಗಳನ್ನೂ ರಹಸ್ಯಸ್ಥಾನಗಳ ರೋಮಗಳನ್ನೂ ಸ್ಪರ್ಶಮಾಡಬಾರದು.[8] ಮಾಡಿದರೆ ಕೈಕೊಳೆಯಾಗುವುದಲ್ಲದೆ ಉದ್ರೇಕವೂ ಅಶ್ಲೀಲವೂ ಆಗುವುದು. ಯಾರೂ ಪ್ರಶ್ನೆಮಾಡದೆ ತಾನಾಗಿ ಧರ್ಮವಿದು, ಮಂತ್ರವು ಹೀಗೆ ಹಾಗಲ್ಲ, ಎಂದು ಹೇಳಲೂಬಾರದು ತಿದ್ದಲೂಬಾರದು. ಅಥವಾ ಅನ್ಯಾಯವಾಗಿ ಅಂದರೆ ಕೀಟಲೆಗೂ ವಿವಾದಕ್ಕೂ ಆಕ್ಷೇಪಕ್ಕೂ ಕೇಳಿದರೆ ಹೇಳಲೂಬಾರದು, ತಿದ್ದಲೂಬಾರದು. ಗೊತ್ತಿದ್ದರೂ ಬುದ್ಧಿವಂತನು ತಿಳಿಯದವನಂತೆ ಸುಮ್ಮನಿರಬೇಕು.[9] ಅಧರ್ಮವಾಗಿ ಕೇಳುವವನೂ ಹೇಳುವವನೂ ಇಬ್ಬರಲ್ಲೊಬ್ಬನಿಗೆ ವಿನಾಶವಾಗುವುದು, ಅಥವಾ ಇಬ್ಬರಿಗೂ ಪುಥ್ಯೆ ದ್ವೇಷವಾದರೂ ಉತ್ಪನ್ನವಾಗುವುದು.[10] ನ್ಯಾಯಾಸ್ಥಾನದಲ್ಲಿ ಮಾತ್ರ ನಿಯುಕ್ತನಾಗಲೀ, ಅನಿಯುಕ್ತನಾಗಲೀ,

---

5 ನ ಮೃಲ್ಲೋಷ್ಟಂ ಚ ಮೃದ್ನೀಯಾನ್ನ ಛಿಂದ್ಯಾತ್ಕರಜೈಸ್ತೃಣಂ । ನಕರ್ಮ ನಿಷ್ಫಲಂ ಕುರ್ಯಾನ್ನಾಯತ್ಯಾಮಸುಖೋದಯಂ ॥ ಮ-iv-೭೦॥ ಆಯತ್ಯಾಂ ಆಗಾಮಿಕಾಲೇ ॥ ಕುಲ್ಲೂಕಃ॥ 6 ಲೋಷ್ಟಮರ್ದೀ ತೃಣಚ್ಛೇದೀ ನಖಖಾದೀ ಚ ಯೋ ನರಃ । ಸ ವಿನಾಶಂ ವ್ರಜತ್ಯಾಶು...॥ ಮ-iv-೭೧॥ ಕೇಶದಂತನಖಾ ವಿಷಾಃ ॥ ಅ. ಸಂ॥ 7 ನ ಸಂಗತಾಭ್ಯಾಂ ಪಾಣಿಭ್ಯಾಂ ಕಂಡೂಯಾದಾತ್ಮನಶ್ಶಿರಂ । ನ ಸ್ಪೃಶೇದೇತದುಚ್ಛಿಷ್ಟಃ . .॥ ಮ-iv-೮೨॥

8 ಅನಾತುರಸ್ಸ್ವಾನಿ ಖಾನಿ ನ ಸ್ಪೃಶೇದನಿಮಿತ್ತತಃ । ರೋಮಾಣಿ ಚ ರಹಸ್ಯಾನಿ ಸರ್ವಾಣ್ಯೇವ ವಿವರ್ಜಯೇತ್ ॥ ಮ-iv-೧೪೪॥ ನವ ಛಿದ್ರಾಣಿ(ಖಾನಿ)। ನವದ್ವಾರಾಣೀತಿ ಕಥಿತಾನಿ—ನೇತ್ರೇ, ನಾಸಿಕೇ, ಕರ್ಣೌ, ಮುಖಂ ಚೇತಿ ಸಪ್ತಶಿರೋಗತಾನಿ ಅಧೋಗತೇ ದ್ವೇ ಪಾಯೂಪಸ್ಥರೂಪೇ ಇತ್ಯೇವಂ ನವದ್ವಾರಾಣಿ । ಎರಡು ಕಣ್ಣು, ಎರಡು ಮೂಗು, ಎರಡು ಕಿವಿ, ಬಾಯಿ, ಎಂದೇಳು ಶಿರಸ್ಸಿನವೂ, ಜಲಮಲದ್ವಾರಗಳೆರಡು ಕೆಳಗಿರುವುವೂ, ಸೇರಿ ಒಟ್ಟು ಒಂಭತ್ತು ಛಿದ್ರಗಳು. ಅಷ್ಟಾಂಗಸಂಗ್ರಹೇ ಸಂಗ್ರಹವಚನಾನಿ ॥ ನೃತ್ಯವಾದಿತ್ರಗೀತಾದಿ ನೋಲ್ಬಣಾಂ ನ್ಯಾಚರೇತ್ಕ್ರಿಯಾಂ । ಪಾಣಿದ್ವಯೇನ ಯುಗಪತ್ಕಂಡೂಯಾದಾತ್ಮನಶ್ಶಿರಃ । ನಾಸಿಕಾಂ ನ ವಿಕುಷ್ಣೀಯಾದ್ದಶನಾನ್ನ ವಿಘಟ್ಟಯೇತ್ । ಕುರ್ಯಾದ್ವಿಲೇಖನಚ್ಛೇದಭೇದಾಸ್ಫೋಟನಮರ್ದನಂ ॥ ದಿನಚರ್ಯ॥

9 ನಾಪೃಷ್ಟಃ ಕಸ್ಯ ಚಿದ್ಬ್ರೂಯಾನ್ನಚಾನ್ಯಾಯೇನ ಪೃಚ್ಛತಃ । ಜಾನನ್ನಪಿ ಹಿ ಮೇಧಾವೀ ಜಡವಲ್ಲೋಕ ಆಚರೇತ್ ॥ ಮ-ii-೧೧೦॥

10 ಅಧರ್ಮೇಣ ಚ ಯಃ ಪ್ರಾಹ ಯಶ್ಚಾಧರ್ಮೇಣ ಪೃಚ್ಛತಿ । ದ್ವಯೋರನ್ಯತರಃ ಪ್ರೈತಿ ವಿದ್ವೇಷಂ ವಾಧಿಗಚ್ಛತಿ ॥ ಮ-ii-೧೧೧॥

ಧರ್ಮವು ತಿಳಿದಿದ್ದರೆ ತಾನಾಗಿ ಹೇಳಬೇಕು.[11] ಅಲ್ಲಿ ಕೇಳದೆ ಹೇಳಬಾರದೆಂಬ ನಿಯಮವಿಲ್ಲ. ಸುಮ್ಮನೆ ಇರುವುದಾದರೆ ಸಭೆಗೇ ಹೋಗಬಾರದು, ಹೋದರೆ ಸಮಂಜಸವಾಗಿ ಮಾತನಾಡಲೇಬೇಕು, ಆಡದೆ ಸುಮ್ಮನಿದ್ದರೂ ತಪ್ಪಾಗಿ ಆಡಿದರೂ ಪಾಪವು ಬರುವುದು.[12] (ಇದು ಪ್ರಾಚೀನರ ಸಂಪ್ರದಾಯವು· ಈಗಲೂ ನ್ಯಾಯಾಧಿಪತಿಯ ಅನುಜ್ಞೆಯನ್ನು ಪಡೆದು ಅನಿಯುಕ್ತನಾದರೂ ನ್ಯಾಯವು ಹೀಗಿದೆಯೆಂದು ಹೇಳುವುದಕ್ಕೆ ಅವಕಾಶವಿದೆ.[13]) ಪ್ರಯೋಜನವಿಲ್ಲದ ಜಿಜ್ಞಾಸಕ್ಕೆ ಹೋಗಬಾರದು, ವ್ಯರ್ಥವಾದ ಕುತೂಹಲವನ್ನು ಬಿಡಬೇಕು [14] ಈ ಪ್ರಕಾರವಾಗಿ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳ ಚಾಪಲ್ಯವನ್ನೂ ಮನಶ್ಚಾಪಲ್ಯವನ್ನೂ ತ್ಯಜಿಸಬೇಕು. ಉಕ್ತ ಚಾಪಲ್ಯಗಳ ಉಪಲಕ್ಷಣದಿಂದ ಸುಮ್ಮಸುಮ್ಮನೆ ಕಣ್ಣುಮಿಟುಕಿಸುವುದೂ, ದೃಷ್ಟಿಸಿ ನೋಡುವುದೂ, ಬಾರದ ಶೀನನ್ನು ಶೀನುವುದೂ, ಕೆರೆಯದ ಗಂಟಲನ್ನು ಸರಿಮಾಡಿಕೊಳ್ಳುವುದೂ, ಶ್ಲೇಷ್ಮವಿಲ್ಲದೆ ಕೆಮ್ಮುವುದೂ, ಸಿಳ್ಳೆ ಹೊಡೆಯುವುದೂ, ಹೆಗಲನ್ನು ಮೇಲಕ್ಕೂ ಕೆಳಕ್ಕೂ ಕುಣಿಸುವುದೂ, ಕಾಲು ಕುಣಿಸುವುದೂ, ತಲೆ ಆಡಿಸುವುದೂ, ಹಿಂದಕ್ಕೂ ಮುಂದಕ್ಕೂ ತೂಗಾಡುವುದು, ಇತ್ಯಾದಿ ವ್ಯರ್ಥವಾದ ಅಂಗಚೇಷ್ಟೆಗಳನ್ನು ಮಾಡಬಾರದು.

## ೯. ಭೂತದಯ ಪಶ್ಚಾತ್ತಾಪ

ಭೂತವೆಂಬುದು ಭವನಧರ್ಮ,[1] ವಿಶಿಷ್ಟವೂ ಬ್ರಹ್ಮಾದಿಸ್ತಂಬಪರ್ಯಂತವೂ ಆದ ಸಮಸ್ತ ಚರಾಚರ ಸೃಷ್ಟಿಗೇ ಅನ್ವಯಿಸುವ ಅತ್ಯಂತ ವಿಶಾಲವಾದ ಅರ್ಥವ್ಯಾಪ್ತಿಯುಳ್ಳ ಶಬ್ದವು. ಆದರೂ ಭೂತದಯ ಪ್ರಕರಣದಲ್ಲಿ ಭೂತಶಬ್ದಕ್ಕೆ ಸ್ಥಾವರಜಂಗಮಾತ್ಮಕವಾದ ಪ್ರಾಣಿಮಾತ್ರವೇ ವಿವಕ್ಷೆಯು.[2] ಮನಸ್ಸಿನಿಂದಲೂ

---

11 ನಿಯುಕ್ತೋ ವಾಽನಿಯುಕ್ತೋ ವಾ ಧರ್ಮಜ್ಞೋ ವಕ್ತುಮರ್ಹತಿ ॥ ಇತಿಸ್ಮರಣಾತ್ ॥

12 ಸಭಾಂ ವಾ ನ ಪ್ರವೇಷ್ಟವ್ಯಂ ವಕ್ತವ್ಯಂ ವಾ ಸಮಂಜಸಂ । ಅಬ್ರುವನ್ ವಿಬ್ರುವನ್ ವಾಪಿ ನರೋ ಭವತಿ ಕಿಲ್ಬಿಷೀ ॥ಮ-viii-೧೩॥

13 ಕ್ಲಿಷ್ಟವಾದ ನ್ಯಾಯ ಸಮಸ್ಯೆಗಳನ್ನು ಪರಿಹರಿಸುವುದಕ್ಕಾಗಿ ಮಾತನಾಡಲು ಪ್ರಧಾನ ನ್ಯಾಯಾಸ್ಥಾನದಲ್ಲಿ ಅವಕಾಶವನ್ನು ಕೇಳಿದರೆ ಕೊಡುವ ಸಂಪ್ರದಾಯವು ಈಗಲೂ ಇದೆ. ಹಾಗೆ ಕೇಳಿ ವಾದಿಸುವವನಿಗೆ Amicus cure ಅಂದರೆ ಧರ್ಮಮಿತ್ರ ಅಥವಾ ಧರ್ಮವನ್ನು ಪ್ರಕಾಶಿಸಲು ಕುತೂಹಲಿ ಎಂದು ಹೆಸರು.

14 ನ ಜಾತು ಸ್ಯಾತ್ಕುತೂಹಲೀ ॥ಮ-iv-೬೩॥ ಅಸತಿ ಪ್ರಯೋಜನೇ ಕಿಮೇತದಿತಿ ಜಿಜ್ಞಾಸಾ ಕುತೂಹಲಂ ॥ಕುಲ್ಲೂಕಃ॥

1 Being; Existing; ಇರುವುದು.

2 ಈ ಅರ್ಥವನ್ನು ಈ ಕೆಳಗೆ ಉದಹರಿಸುವ ಪ್ರಯೋಗಗಳಲ್ಲಿ ನೋಡಬಹುದು:— ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ । ಅಹಮಾದಿಶ್ಚ ಮಧ್ಯಂ ಚ

ವಾಕ್ಕಿನಿಂದಲೂ ಕರ್ಮದಿಂದಲೂ ನಾವಾಗಿ ಪ್ರಾಣಿಮಾತ್ರಕ್ಕೆ ಹಿಂಸೆಯನ್ನು ಮಾಡದಿರುವುದು **ಅಹಿಂಸೆಯು.**[3] ಐಚ್ಛಿಕವಾಗಿಯಾಗಲೀ ಅಥವಾ ಆಲಸ್ಯಪ್ರಮಾದಾದಿಗಳಿಂದಾಗಲೀ ಪ್ರಾಣಿಮಾತ್ರಕ್ಕೆ ಹಿಂಸೆಯಾದರೆ, ಅಯ್ಯೋ ಪಾಪ ನಮ್ಮಿಂದ ಹಿಂಸೆಯಾಯಿತಲ್ಲ, ಎಂದು ಮರುಗುವುದು **ಪಶ್ಚಾತ್ತಾಪವು.**[4]—ನಡೆದುಹೋದುದಕ್ಕೆ ಆಮೇಲೆ ಪರಿತಪಿಸುವುದು. ಅಹಿಂಸೆಯು ಹಿಂಸೆಗೆ ಪೂರ್ವಭಾವಿಯಾದ ವರ್ತನವಾದರೆ ಪಶ್ಚಾತ್ತಾಪವು ಪರವರ್ತನವು. ಯಾವ ಕಾರಣದಿಂದಲಾಗಲೀ ಪ್ರಾಣಿಗೆ ಹಿಂಸೆಯು ಪ್ರಾಪ್ತವಾದರೆ ಯಥಾಶಕ್ತಿಯಾಗಿ ಅದರ ದುಃಖವನ್ನು ನಿವಾರಿಸಬೇಕೆಂದು ಹೃದಯದಲ್ಲಾಗುವ ಪ್ರೇರಣೆಯು **ಭೂತದಯುವು.**[5] ಪಶ್ಚಾತ್ತಾಪವು ಕೇವಲ ಮಾನಸಿಕ ವೃತ್ತಿಯಾದರೆ, ಭೂತದಯುವು ಅಂತರ್ಬಾಹ್ಯರೂಪದ ದ್ವಿಸ್ವಭಾವದ್ದು. ಅಹಿಂಸೆಯೆಂಬುದು ಅನಾದಿಸಿದ್ಧವಾದ ಈಶ್ವರಪ್ರೇರಿತ ಭಾವವು. ಭಗವದ್ಗೀತೆಯಲ್ಲಿಯೂ ಪುರಾಣೇತಿಹಾಸಗಳಲ್ಲಿಯೂ ಅಹಿಂಸಾಧರ್ಮಕ್ಕೆ ವಿಶೇಷ ಪ್ರಾಶಸ್ತ್ಯವನ್ನು ಕೊಟ್ಟದೆ. **ಭಗವದ್ಗೀತೆಯಲ್ಲಿ** ಅಹಿಂಸೆಯು ಈಶ್ವರಪ್ರೇರಿತವಾದ ಶುದ್ಧಸಾತ್ವಿಕಭಾವವೆಂದೂ[6] ಮೋಕ್ಷಸಾಧಕವಾದ ದೈವೀ

---

ಭೂತಾನಾಮಂತ ಏವ ಚ ॥ಭ. ಗೀ-x-೨೦॥ ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ॥ಭ. ಗೀ-x-೩೯॥ ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ ॥ಭ. ಗೀ-xiii-೬॥ ಯಾವತ್ಸಂಜಾಯತೇ ಕಿಂಚಿತ್ಸತ್ವಂ ಸ್ಥಾವರಜಂಗಮಂ। ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥೨೬॥ ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ। ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ಭ. ಗೀ-viii॥ ದಯಾಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ ॥ಭ. ಗೀ-xvi-೨॥ ಅದ್ರೋಹೇಣೈವ ಭೂತಾನಾಮಲ್ಪದ್ರೋಹೇಣ ವಾ ಪುನಃ। ಯಾ ವೃತ್ತಿಸ್ತಾಂ ಸಮಾಸ್ಥಾಯ ವಿಪ್ರೋ ಜೀವೇದನಾಪದಿ ॥ಮ-iv-೨॥

3 ಹಿಂಸಾಪ್ರಾಣಿನಾಂ ಪೀಡಾ, ಪ್ರಾಣಿನಾಂಪೀಡಾವರ್ಜನಂ ಅಹಿಂಸಾ ॥ಶಂ. ಭಾಷ್ಯ॥ ಅಹಿಂಸೇತಿ ಪರಪೀಡಾವರ್ಜನಂ ॥ಶ್ರೀ. ಟೀ॥

4 ಪಶ್ಚಾತ್ತಾಪೋಽನುತಾಪಶ್ಚ ವಿಪ್ರತೀಸಾರ ಇತ್ಯಪಿ ॥ಅಮರಃ॥ ಪುಣ್ಯವನ್ನು ಮಾಡಲಿಲ್ಲವಲ್ಲ ಎಂದು ಮರುಗುವುದೂ ಪಶ್ಚಾತ್ತಾಪವೇ, ಆದರೂ ಅದೀಪ್ರಕರಣಕ್ಕೆ ಪ್ರಕೃತವಲ್ಲ. "ಕಿಮಹಂ ಸಾಧು ನಾಽಕರವಂ ಕಿಮಹಂ ಪಾಪಮಕರವಂ" ॥(ಶ್ರುತಿಃ)॥ ಎಂದು ಪಶ್ಚಾತ್ತಾಪವು ದ್ವಿವಿಧವಾದುದು.

5 ಕೃಪಾದಯಾನುಕಂಪಾಸ್ಯಾದನುಕ್ರೋಶೋಽಪಿ ॥ಅಮರಃ॥ ಯತ್ನಾದಪಿ ಪರಕ್ಲೇಶಂ ಹರ್ತುಂ ಯಾ ಹೃದಿ ಜಾಯತೇ। ಇಚ್ಛಾ (ಭೂಮಿಸುರಶ್ರೇಷ್ಠ) ಸಾ ದಯಾ ಪರಿಕೀರ್ತಿತಾ॥ ಪರಸ್ಮಿನ್ ಬಂಧುವರ್ಗೇ ವಾ ಮಿತ್ರೇ ದ್ವೇಷ್ಯೇ ರಿಪೌ ತಥಾ। ಆತ್ಮವದ್ವರ್ತಿತವ್ಯಂ ಹಿ ದಯೈಷಾ ಪರಿಕೀರ್ತಿತಾ ॥ಅತ್ರಿಃ॥

6 ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಶ್ಶಮಃ। ಸುಖಂ ದುಃಖಂ ಭವೋ ಭಾವೋ ಭಯಂ ಚಾಽಭಯಮೇವ ಚ ॥೪॥ ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ। ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥೫॥ ಭ. ಗೀ-x॥

ಸಂಪತ್ತೆಂದೂ[7] ಉಕ್ತವಾಗಿದೆ. **ಮನುವೂ** ಪರಮಪದಪ್ರಾಪ್ತಿಗಾಗಿ ಅನುಷ್ಠಾನ ಮಾಡಬೇಕಾದ ಪಂಚವಿಧಕ್ರಿಯೆಗಳನ್ನು ವಿವರಿಸುತ್ತಾ ಅಹಿಂಸೆಯನ್ನು ಮೊದಲು ಹೇಳಿದ್ದಾನೆ[8] ಯಮನಿಯಮಪ್ರಾಸನಾದ್ಯಷ್ಟಾಂಗ ಯೋಗಗಳಲ್ಲಿ ಮೊದಲನೆಯದಾದ ಯಮದ ಹತ್ತು ಪ್ರಕಾರವನ್ನು ವಿವರಿಸುತ್ತಾ **ಅತ್ರಿಗಳೂ**[9] **ಯಾಜ್ಞವಲ್ಕ್ಯರೂ**[10] ಸಹ ಆ ವರ್ಗದಲ್ಲಿ ಅಹಿಂಸೆಯನ್ನೂ ಅಂತರ್ಗತಮಾಡಿದ್ದಾರೆ. ಯಮವು ಐದು ವಿಧದ್ದು ಎಂದು ಹೇಳಿರುವವರೂ ಇದ್ದಾರೆ. ಅವರೂ ಕೂಡ ಆ ಐದರಲ್ಲಿ ಅಹಿಂಸೆಯನ್ನು ಸೇರಿಸಿದ್ದಾರೆ[11] **ಬೋಧಾಯನರು** ಅಹಿಂಸೆಯಿಂದ ಆತ್ಮವೇ (ಅಂದರೆ ಜೀವಾತ್ಮವೇ) ಶುದ್ಧವಾಗುವುದೆಂದು ದೊಡ್ಡ ಫಲವನ್ನೇ ಹೇಳಿದ್ದಾರೆ.[12] **ಬೃಹಸ್ಪತಿಯು** ಯಾರು ಚತುರ್ವಿಧವಾದ ಭೂತಗ್ರಾಮವನ್ನು ಹಿಂಸಿಸುವುದಿಲ್ಲವೋ ಅವನು ಅನಿಂದಾತ್ಮನು, ಅವನಿಗೆ ಪರಲೋಕದಲ್ಲಿ ಭಯವಿಲ್ಲವೇ ಇಲ್ಲ[13] ಎಂದು ಐಹಿಕವನ್ನು ಸೂಚಿಸಿ ಪಾರಲೌಕಿಕವನ್ನು ಒತ್ತಿ ಹೇಳಿದ್ದಾರೆ. ಅವರ ಉಕ್ತಿಯಲ್ಲಿ ಅಹಿಂಸೆಯು ಕೇವಲ ಜಂಗಮಜೀವಿಗಳ ಪರವಾದುದು ಮಾತ್ರವೇ ಅಲ್ಲ, ಸ್ವೇದಜಾಂಡಜೋದ್ಭಿಜ್ಜಜರಾಯುಜಗಳೆಂಬ ನಾಲ್ಕು ವಿಧವಾದ[14] ಜೀವಿಗಳಿಗೆಲ್ಲಕ್ಕೂ

---

7 ಅಭಯಂ ಸತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ । ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪಆರ್ಜವಂ ॥ ೧ ॥ ಅಹಿಂಸಾ ಸತ್ಯಮಕ್ರೋಧಸ್ತ್ಯಾಗಶ್ಶಾಂತಿರಪೈಶುನಂ । ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ ॥೨॥ ತೇಜಃ ಕ್ಷಮಾ ಧೃತಿಶ್ಶೌಚಮದ್ರೋಹೋ ನಾತಿಮಾನಿತಾ । ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥೩॥ . ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ॥೫॥ ಭ ಗೀ-xvi ॥ ಯಸ್ಯ ವರ್ಣಸ್ಯ ಯಸ್ಯಾಶ್ರಮಸ್ಯ ಯಾ ಚ ವಿಹಿತಾ ಸಾತ್ತ್ವಿಕೀ ಫಲಾಭಿಸಂಧಿರಹಿತಾ ಕ್ರಿಯಾ ಸಾ ದೈವೀಸಂಪತ್ ಸಾ ಸಂಸಾರಬಂಧನಾದ್ವಿಮೋಕ್ಷಾಯ ಭವತಿ ॥ ಮ. ಟೀ. ॥

8 ಅಹಿಂಸಯೇಂದ್ರಿಯಾಸಂಗೈರ್ವೈದಿಕೈಶ್ಚೈವ ಕರ್ಮಭಿಃ । ತಪಸಶ್ಚರಣೈರುಗ್ರೈಸ್ಸಾಧಯಂತೀಹ ತತ್ಪದಂ ॥ ಮ-vi-೭೫॥

9 ಆನೃಶಂಸ್ಯಂ ಕ್ಷಮಾ ಸತ್ಯಮಹಿಂಸಾ ದಾನಮಾರ್ಜವಂ । ಪ್ರೀತಿಃ ಪ್ರಸಾದೋ ಮಾಧುರ್ಯಂ ಮಾರ್ದವಂ ಚ ಯಮಾ ದಶ ॥ ಅತ್ರಿಃ ॥

10 ಬ್ರಹ್ಮಚರ್ಯಂ ದಯಾ ಕ್ಷಾಂತಿರ್ದಾನಂ ಸತ್ಯಮಕಲ್ಕತಾ । ಅಹಿಂಸಾಸ್ತೇಯ ಮಾಧುರ್ಯೇ ದಮಶ್ಚೇತಿ ಯಮಾಸ್ಮೃತಾಃ ॥ ಯಾ-iii-೩೧೨॥

11 ಅಹಿಂಸಾ ಸತ್ಯವಚನಂ ಬ್ರಹ್ಮಚರ್ಯಮಕಲ್ಕತಾ । ಅಸ್ತೇಯಮಿತಿ ಪಂಚೈತೇ ಯಮಾಖ್ಯಾನಿ ವ್ರತಾನಿ ಚ ॥

12 ಅದ್ಭಿಶ್ಶುದ್ಧ್ಯಂತಿ ಗಾತ್ರಾಣಿ ಬುದ್ಧಿರ್ಜ್ಞಾನೇನ ಶುದ್ಧ್ಯತಿ । ಅಹಿಂಸಯಾ ಚ ಭೂತಾತ್ಮಾ ಮನಸ್ಸತ್ಯೇನ ಶುದ್ಧ್ಯತಿ ॥ ಬೋಧಾಯನಃ ॥

13 ಯೋ ನ ಹಿಂಸ್ಯಾದನಿಂದಾತ್ಮಾ ಭೂತಗ್ರಾಮಂ ಚತುರ್ವಿಧಂ । ತಸ್ಯ ದೇಹಾದ್ವಿಯುಕ್ತಸ್ಯ ಭಯಂ ನಾಸ್ತಿ ಕದಾಚನ ॥ ಬೃಹಸ್ಪತಿಃ ॥

14 **ಸ್ವೇದಜಗಳು**=ಬೆವರು ಮುಂತಾದ ಕೊಳೆಯಲ್ಲಿ ಜನಿಸುವ ಕ್ರಿಮಿಕೀಟಾದಿಗಳು. **ಅಂಡಜಗಳು**=ಮೊದಲು ಮೊಟ್ಟೆಯಾಗಿ ಜನಿಸಿ ಆಮೇಲೆ ಮೊಟ್ಟೆಯನ್ನೊಡೆದುಕೊಂಡು ಹುಟ್ಟುವ ಪಕ್ಷಿ ಮುಂತಾದವುಗಳು. **ಉದ್ಭಿಜ್ಜಗಳು**=ಭೂಮಿಯಲ್ಲಿ ಮೊಳೆತು ಆಮೇಲೆ

ಅನ್ವಯಿಸತಕ್ಕದ್ದೆಂಬುದು ವೈಶಿಷ್ಟ್ಯವು. **ಮನುವೂ** ಇದೇ ಮಾತನ್ನು ಪ್ರಕಾರಾಂತರವಾಗಿ ಹೇಳಿದ್ದಾನೆ :—ಹಿಂಸಕನು ಬದುಕಿದ್ದರೂ ಸತ್ತಹಾಗೆಯೇ, ಅವನಿಗೆ ಇಹಪರಗಳಲ್ಲಿಯೂ ಸುಖವಿಲ್ಲ ಎಂದು[15] **ಹಾರೀತರು** ಹದಿಮೂರು ವಿಧವಾದ ಶೀಲವನ್ನು ವಿವರಿಸುತ್ತಾ ಅದರಲ್ಲಿ ಅಪರೋಪತಾಪಿತಾ ಅಂದರೆ ಪರರಿಗೆ ಹಿಂಸೆ ಮಾಡದಿರುವುದು ಎಂಬುದನ್ನೂ ಸೇರಿಸಿದ್ದಾರೆ.[16] ಅವರಾಉಕ್ತಿಯಿಂದ ಅಹಿಂಸೆಯು ಪರೋಪಕಾರವಲ್ಲ, ಅದು ಶೀಲವು, ಶುದ್ಧ ಚಾರಿತ್ರವು, ತನ್ನ ಅಂತಃಕರಣವನ್ನು ಪರಿಶುದ್ಧವಾಗಿಟ್ಟುಕೊಂಡಿರುವ ಪ್ರಕಾರವು ಎಂಬುದು ವ್ಯಕ್ತವಾಗುತ್ತದೆ. ಸರ್ವವರ್ಣದವರಿಗೂ ಸಮಾನವಾದ ಧರ್ಮಗಳನ್ನೂ ಧರ್ಮಸಾಧನಗಳನ್ನೂ ಸಂಕ್ಷೇಪವಾಗಿ ವಿವರಿಸುತ್ತಾ **ಮನುವೂ**[17] **ಯಾಜ್ಞವಲ್ಕ್ಯರೂ**[18] ಅಹಿಂಸೆಯನ್ನು ಮೊದಲು ಹೇಳಿರುತ್ತಾರೆ. ಸಂಗ್ರಹವೇನೆಂದರೆ ಈಶ್ವರಪ್ರೇರಣೆಯಿಂದ ಸತ್ವಸಂಶುದ್ಧಿದ್ವಾರಾ ಅಭ್ಯುದಯನಿಶ್ರೇಯಸಸಿದ್ಧಿಗಾಗಿ ಸರ್ವವರ್ಣದವರೂ ಸಮಸ್ತವಾದ ಪ್ರಾಣಿಗಳ ವಿಷಯದಲ್ಲಿಯೂ ಸತತವಾಗಿ ತೋರಿಸಬೇಕಾದ ಶುದ್ಧಚಾರಿತ್ರಾತ್ಮಕವಾದ ಶೀಲವೇ **ಅಹಿಂಸೆಯು.** ಇದರ ಪ್ರಶಂಸೆಯೂ ಪ್ರಾಶಸ್ತ್ಯವೂ ಎಲ್ಲಾ ಸ್ಮೃತಿಗಳಲ್ಲಿಯೂ ಪುರಾಣೇತಿಹಾಸಗಳಲ್ಲಿಯೂ ಏಕಪ್ರಕಾರವಾಗಿ ಉಕ್ತವಾಗಿವೆ. ಹೀಗೆ ಅಹಿಂಸೆಯೇ ಪರಮಧರ್ಮವು[19] ಎಂಬ ತತ್ತ್ವವನ್ನು ನಮ್ಮವರು ಅನಾದಿಯಿಂದಲೂ ಅನೂಚಾನವಾಗಿಯೂ ಅರಿತು, ಸೇವಿಸಿ, ಬೋಧಿಸುತ್ತಾ, ಬಂದಿದ್ದಾರೆ. ಗೀತೆಯಲ್ಲುಕ್ತವಾಗಿರುವ ಒಂದು ಭಗವದ್ವಚನವನ್ನು ಗಮನಿಸಿದರೆ ಸಾಕು, ಈ ತತ್ತ್ವವು ತಾನಾಗಿ ವ್ಯಕ್ತವಾಗುವುದು :—ಸ್ಥಾವರಜಂಗಮಾತ್ಮಕವಾದ ಸಕಲ ಜೀವಿಗಳಲ್ಲಿಯೂ ಪರಮಾತ್ಮನು ಒಂದೇ ಪ್ರಕಾರವಾಗಿ ಯಾವ ವಿಶೇಷವೂ ಇಲ್ಲದೆ ಸದ್ರೂಪದಲ್ಲಿದ್ದಾನೆಂದೂ ಪ್ರಾಣಿಗಳು ನಾಶವಾದರೂ ಆ ಆತ್ಮವು ಅವಿನಾಶಿಯೆಂದೂ ಯಾರು ತಿಳಿಯುತ್ತಾರೋ ಅವರೇ ನಿಜವನ್ನು ಕಂಡ ಜ್ಞಾನಿಗಳು. ಅಂಥಾವರು

---

ಭೂಮಿಯನ್ನೊಡೆದು ಹುಟ್ಟುವ ಸಸ್ಯವರ್ಗಗಳು. ಜರಾಯುಜಗಳು = ಮಾತೃಗರ್ಭಗತವಾದ ಜರಾಯುವೆಂಬ ತೆಳ್ಳನೆಯ ಚರ್ಮಚೀಲದಲ್ಲಿ ಬೆಳೆದು ಜನಿಸುವ ಮೃಗಮಾನುಷಾದಿಗಳು.

15 ಯೋಽಹಿಂಸಕಾನಿ ಭೂತಾನಿ ಹಿನಸ್ತ್ಯಾತ್ಮಸುಖೇಚ್ಛಯಾ । ಸ ಜೀವಂಶ್ಚ ಮೃತಶ್ಚೈವ ನ ಕ್ವಚಿತ್ಸುಖಮೇಧತೇ ॥ಮ-v-೪೫॥

16 ಬ್ರಹ್ಮಣ್ಯತಾ ದೇವಪಿತೃಭಕ್ತಿತಾ ಸೌಮ್ಯತಾಽಪರೋಪತಾಪಿತಾಽನಸೂಯತಾ ಮೃದುತಾಽಪಾರುಷ್ಯಂ ಮೈತ್ರತಾ ಪ್ರಿಯವಾದಿತ್ವಂ ಕೃತಜ್ಞತಾ ಶರಣ್ಯತಾ ಕಾರುಣ್ಯಂ ಪ್ರಶಾಂತಿಶ್ಚೇತಿ ತ್ರಯೋದಶವಿಧಂ ಶೀಲಂ ॥ಹಾರೀತಃ॥

17 ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ । ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇಽಬ್ರವೀನ್ಮನುಃ ॥ಮ-x-೬೩॥

18 ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ । ದಾನಂ ದಮೋ ದಯಾ ಕ್ಷಾಂತಿಸ್ಸರ್ವೇಷಾಂ ಧರ್ಮಸಾಧನಂ ॥ಯಾ-i-೧೨೨॥

19 ಅಹಿಂಸಾ ಪರಮೋ ಧರ್ಮಃ ॥

ಎಲ್ಲಾ ಪ್ರಾಣಿಗಳಲ್ಲಿಯೂ ಇರುವವನು ಪರಮೇಶ್ವರನೇ ಎಂದು ತಿಳಿದವರಾದುದರಿಂದ ಆತ್ಮದಿಂದ ಆತ್ಮವನ್ನು ನಾಶಮಾಡುವಂಥಾ ಅಸಂಭವ ಪ್ರಸಕ್ತಿಗೇಹೋಗುವ ಹಾಗಿಲ್ಲ.[20]

**ಭೂತದಯೆಯೂ** ಇಂಥಾ ತತ್ತ್ವದ ಮೇಲೆಯೇ ವ್ಯವಸ್ಥಿತವಾಗಿದೆ. ನನಗೆ ಸುಖವು ಹೇಗೆ ಪ್ರಿಯವೋ ದುಃಖವು ಅಪ್ರಿಯವೋ ಹಾಗೆಯೇ ಎಲ್ಲಾ ಪ್ರಾಣಿಗಳಿಗೂ ಎಂದರಿತು ಯಾವುದಕ್ಕೂ ದುಃಖವನ್ನು ಬಯಸದೆ ಸುಖವನ್ನು ಕೋರಬೇಕು, ಅವನೇ ಶ್ರೇಷ್ಠನಾದ ಯೋಗಿ.[21] ಸಮದರ್ಶಿತ್ವವೇ ಭೂತದಯೆಯ ಅಂತಸ್ಸಾರವು, ಇದೇ ಅರ್ಥದ ಮತ್ತೊಂದು ವಾಕ್ಯವೂ ಇದೆ, ಅದೇನೆಂದರೆ—ತನಗೆ ಹೇಗೆ ತನ್ನ ಪ್ರಾಣವು ಇಷ್ಟವೋ ಹಾಗೆಯೇ ಎಲ್ಲಾ ಪ್ರಾಣಿಗಳಿಗೂ ತಮ್ಮ ತಮ್ಮ ಪ್ರಾಣಗಳೂ ಇಷ್ಟವೇ. ಇದನ್ನರಿತ ಸಂತರು ತಮ್ಮನ್ನೇ ಉಪಮಾನವಾಗಿಟ್ಟುಕೊಂಡು ಪ್ರಾಣಿಗಳಿಗೆ ದಯೆಯನ್ನು ತೋರಿಸುತ್ತಾರೆ—ಎಂಬ ನೀತಿಯು.[22] ಹಾಗೆಯೇ ದಾನದಿಂದ ಧನವೂ ಜೀವರಕ್ಷಣೆಯಿಂದ ಜೀವವೂ ಸಾರ್ಥಕವಾಗುವುದೆಂಬ ಬೃಹಸ್ಪತಿ ವಚನವೂ ಇದನ್ನೇ ಸಮರ್ಥಿಸುತ್ತದೆ.[23]

ಅಹಿಂಸಾತತ್ತ್ವದ ಆವಿರ್ಭಾವವಾದ ಭೂತದಯಾಪಶ್ಚಾತ್ತಾಪಗಳು ಸತತವಾಗಿ ನಡೆದು ಅಭ್ಯಾಸಬಲದಿಂದ ಜೀವನವೇ ರೂಪಗೊಳ್ಳುವಂತೆ ಮಾಡಲು ಕರ್ಮಧರ್ಮಗಳು ಏರ್ಪಟ್ಟಿವೆ. ಮೊದಲು ದೇಹಧಾರಣೆಗೆ ಆಹಾರವು ಬೇಕಷ್ಟೆ. ನಿರ್ಜೀವಿಗಳನ್ನು ತಿಂದು ಜೀವಿಸುವಹಾಗಿಲ್ಲ, ಜೀವಿಗಳನ್ನು ತಿಂದೇ ಜೀವಿಸಬೇಕು. ಆಹಾರವಸ್ತುಗಳು ಎರಡು ವಿಧವಾದವು—ಧಾನ್ಯಾದಿಸ್ಥಾವರಗಳು ಕೆಲವು, ಮೃಗಮತ್ಸ್ಯರೂಪದ ಜಂಗಮಗಳು ಕೆಲವು, ಎಲ್ಲವೂ ಸಜೀವಗಳೇ. ಅವರವರ ಸಂಪ್ರದಾಯಾಭ್ಯಾಸಗಳಿಗನುಗುಣವಾಗಿ ಎರಡರಲ್ಲೊಂದನ್ನು ಅಥವಾ ಎರಡನ್ನೂ ತಿನ್ನಬೇಕು. ಜಂಗಮಗಳಿಗಾಗುವ ಹಿಂಸೆಯು ಕಾಣುತ್ತದೆ, ಸ್ಥಾವರಗಳಿಗಾಗುವುದು ಕಾಣುವುದಿಲ್ಲ. ಧಾನ್ಯಾದಿಗಳನ್ನು ಮೃಗಮತ್ಸ್ಯಗಳಿಗಿಂತಲೂ ಅಲ್ಪಜೀವಿಗಳೆಂದು ಭಾವಿಸಿ ಸಸ್ಯಾಹಾರಿಗಳು ಅದನ್ನು ಅಲ್ಪದ್ರೋಹವೆಂದು ಪರಿಗಣಿಸುವುದು. ಅದನ್ನೇ ಪರಿಮಾಣ ಅಥವಾ ಸಂಖ್ಯೆಯ ದೃಷ್ಟಿಯಿಂದ ನೋಡಿದರೆ ಸಸ್ಯಾಹಾರಿಗಳು

---

20 ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ । ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸಪಶ್ಯತಿ ॥೨೭॥ ಸಮಂ ಪಶ್ಯತಿ ಸರ್ವತ್ರ ಸಮವಸ್ಥಿತಮೀಶ್ವರಂ। ನಹಿನಸ್ತ್ಯಾತ್ಮನಾತ್ಮಾನಾಂ ತತೋ ಯಾತಿ ಪರಾಂ ಗತಿಂ ॥೨೮॥ ಭ.ಗೀ-xiii ॥

21 ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ । ಸುಖಂ ವಾ ಯದಿ ವಾ ದುಃಖಂ ಸಯೋಗೀ ಪರಮೋ ಮತಃ ॥ ಭ. ಗೀ.॥

22 ಪ್ರಾಣಾ ಯಥಾತ್ಮನೋಽಭೀಷ್ಟಾ ಭೂತಾನಾಮಪಿ ತೇ ತಥಾ । ಆತ್ಮೌಪಮ್ಯೇನ ಭೂತೇಷು ದಯಾಂ ಕುರ್ವಂತಿ ಸಾಧವಃ ॥ ಇತಿಸ್ಮರಣಾತ್॥

23 ಧನಂ ಫಲತಿ ದಾನೇನ ಜೀವನಂ ಜೀವರಕ್ಷಣಾತ್। ರೂಪಮೈಶ್ವರ್ಯಮಾರೋಗ್ಯಮಹಿಂಸಾಫಲಮಶ್ನುತೇ ॥ ಬೃಹಸ್ಪತಿಃ॥

ಕೊಲ್ಲುವಷ್ಟು ಜೀವಿಗಳನ್ನು ಮಾಂಸಾಹಾರಿಗಳು ಕೊಲ್ಲುವುದಿಲ್ಲ—ಪ್ರಕೃತವೇನೆಂದರೆ ಧಾನ್ಯಾದಿಗಳನ್ನು ಕುಟ್ಟುವುದೂ ಬೀಸುವುದೂ ಅರೆಯುವುದೂ ಅಡುವುದೂ ಗುಡಿಸುವುದೂ ಹಿಂಸೆಯೇ.[24] ಇಂಥಾ ಪಾಪದ ನಿಷ್ಕೃತಿಗಾಗಿ ಪಂಚಮಹಾಯಜ್ಞಗಳು ವಿಧಾಯಕವಾಗಿವೆ.[25] (ವಿವರವನ್ನು ಪಂಚಯಜ್ಞ ಪ್ರಕರಣದಲ್ಲಿಯೂ ಭೋಜನ ಪ್ರಕರಣದಲ್ಲಿಯೂ ನೋಡುವುದು). ಅನಿವಾರ್ಯವಾಗಿ ಮಾಡುವ ದ್ರೋಹಕ್ಕೆ ಪಶ್ಚಾತ್ತಾಪರೂಪದ ಪ್ರಾಯಶ್ಚಿತ್ತವಿದು ಹತವಾದುವುಗಳಿಗೆ ಉಪಕಾರವಲ್ಲ, ಹತ್ಯಮಾಡುವವನನ್ನು ಶೋಧಿಸುವ ವಿಧಿವಿಧಾನವು, ಸೇವೆಯು ಅಲ್ಪವಾದರೂ ವ್ಯಕ್ತಿಯ ಮೇಲಾಗುವ ಪರಿಣಾಮವು ಮಹತ್ತಾದುದು ; ಏಕೆಂದರೆ ಮರ ಗಿಡ ಬಳ್ಳಿ ಪೈರು ಪಚ್ಚೆ ಧಾನ್ಯ ಇತ್ಯಾದಿಗಳ ಹಿಂಸೆಯೂ ಉಪಪಾತಕಗಳು[26] ಎಂದಮೇಲೆ ಅಹಿಂಸಾಧರ್ಮದ ಪರಮಾವಧಿಯಾಯಿತೆಂದು ಹೇಳಬೇಕಾದುದೇ ಇಲ್ಲ.

ಮತ್ತೊಂದು ವಿಶೇಷವೇನೆಂದರೆ ಮಹರ್ಷಿಗಳ ವಿಶಾಲ ದೃಷ್ಟಿಯಲ್ಲಿ ಸಾಕ್ಷಾತ್ತಾಗಿ ವಧೆ ಮಾಡಿದರೇ ಹಿಂಸೆ, ಇಲ್ಲದಿದ್ದರಿಲ್ಲವೆಂದಲ್ಲ. ಇನ್ನೊಬ್ಬನಿಂದ ವಧೆ ಮಾಡಿಸುವುದೂ, ವಧೆಯಾದುದನ್ನು ತುಂಡರಿಸುವುದೂ, ಮಾಂಸವನ್ನು ಮಾರುವುದೂ, ಕೊಳ್ಳುವುದೂ, ಅಡಿಗೆಮಾಡುವುದೂ, ಬಡಿಸುವುದೂ, ಉಣುವುದೂ ಎಲ್ಲವೂ ವಧೆಮಾಡಿದಹಾಗೆಯೇ ಎಂದು ಭಾವನೆ, ಹೀಗೆ ಮಾಡುವವರೆಲ್ಲರನ್ನೂ ಘಾತುಕರೆಂದಿದ್ದಾರೆ.[27] ಈ ಪ್ರತ್ಯಕ್ಷಪರೋಕ್ಷವಧೆಯ ವಿಧಾನವು ಸಸ್ಯಾದಿಗಳ ವಧೆಗೂ ಅನ್ವಯಿಸುತ್ತದೆ. ಹತ್ಯವು ಮಾತ್ರವೇ ಹಿಂಸೆಯಲ್ಲ :—ಪ್ರಾಣಿಯನ್ನು ಬಂಧನದಲ್ಲಿಡುವುದೂ, ಅತಿಯಾಗಿ ದುಡಿಸುವುದೂ, ಅಶಕ್ತಪಶುಗಳಿಂದ ಕೆಲಸ ಮಾಡಿಸುವುದೂ ಹಿಂಸೆಯೇ. ಪ್ರಾಣಿಮಾತ್ರವು ತನ್ನ ಆಹಾರವನ್ನು ಹಿಡಿದು ತಿನ್ನುವಾಗಲೂ (ಬೆಕ್ಕು ಇಲಿಯನ್ನೂ ಹಲ್ಲಿಯು ಹುಳವನ್ನೂ ಹಿಡಿದು ತಿನ್ನುವಂತೆ) ಪಶುವು

---

24 ಪಂಚ ಸೂನಾ ಗೃಹಸ್ಥಸ್ಯ ಚುಲ್ಲೀ ಪೇಷಣ್ಯುಪಸ್ಕರಃ । ಕಂಡನೀ ಚೋದಕುಂಭಶ್ಚ ಬಧ್ಯತೇ ಯಾಸ್ತು ವಾಹಯರ್ನ ॥ಮ-iii-೬೮॥ ಪಶುವಧಸ್ಥಾನಂಸೂನಾ । ಸೂನಾ ಇವ ಸೂನಾ ಹಿಂಸಾಸ್ಥಾನಗುಣಯೋಗಾತ್ ಚುಲ್ಲ್ಯಾದಯಃ ಪಂಚ ಗೃಹಸ್ಥಸ್ಯ ಹಿಂಸಾಬೀಜಾನಿ ಹಿಂಸಾಸ್ಥಾನಾನಿ ॥ಕುಲ್ಲೂಕಃ॥ ಚುಲ್ಲೀ=ಒಲೆ, ಪೇಷಣೀ=ಅರೆಯುವ ಕಲ್ಲು ತಿರುವುವ ಒರಳು, ಉಪಸ್ಕರಃ=ಗುಡಿಸುವ ಪರಿಕೆಯು, ಕಂಡನೀ=ಒರಳುಒನಿಕೆಗಳು, ಉದಕುಂಭಃ =ನೀರುತುಂಬುವ ಪಾತ್ರೆ.

25 ತಾಸಾಂ ಕ್ರಮೇಣ ಸರ್ವಾಸಾಂ ನಿಷ್ಕೃತ್ಯರ್ಥಂ ಮಹರ್ಷಿಭಿಃ । ಪಂಚ ಕ್ಲಪ್ತಾ ಮಹಾಯಜ್ಞಾಃ ಪ್ರತ್ಯಹಂ ಗೃಹಮೇಧಿನಾಂ ॥ಮ-iii-೬೯॥

26 ದ್ರುಮಗುಲ್ಮವಲ್ಲೀಲತೌಷಧೀನಾಂ ಹಿಂಸಾ ॥೨೪॥ ...ಇತ್ಯುಪಪಾತಕಾನಿ ॥೩೪॥ ವಿ-೩೭॥ ವಲ್ಲೀ ಎಂದರೆ ಬಳ್ಳಿಯು ಚಿಕ್ಕದಾಗಿ ಹಬ್ಬುವುದು ; ಲತೆಯೆಂದರೆ ದೊಡ್ಡದಾಗಿ ಹಬ್ಬುವುದು.

27 ಅನುಮಂತಾ ವಿಶಸಿತಾ ನಿಹಂತಾ ಕ್ರಯವಿಕ್ರಯೀ । ಸಂಸ್ಕರ್ತಾ ಚೋಪಹರ್ತಾ ಚ ಖಾದಕಶ್ಚೇತಿ ಘಾತಕಾಃ ॥ಮ-v-೫೧॥

ಹೊಲಗದ್ದೆಗಳನ್ನು ಮೇಯುವಾಗಲೂ, ಕರುವು ಹಾಲುಕುಡಿದುಕೊಳ್ಳುವಾಗಲೂ, ಅವು ನಮ್ಮ ಕಣ್ಣಿಗೆ ಬಿದ್ದರೂ ಬಿಡಿಸುವುದಕ್ಕೂ ಅಟ್ಟುವುದಕ್ಕೂ ಹೋಗಬಾರದು, ಬಿಡಿಸಲಿ ಅಟ್ಟಲಿ ಎಂದು ಯಾರಿಗೂ ತಿಳಿಸಲೂಬಾರದು.[28] ಪ್ರಾಣಿಗಳು ತಮ ತಮಗೆ ನಿಯತವಾದ ಆಹಾರವನ್ನು ತಿಂದು ದೇಹರಕ್ಷಣೆಯನ್ನು ಮಾಡಿಕೊಳ್ಳುವುದ ಕ್ಕಾಗಿ ಸಹಜವಾಗಿ ಪ್ರವರ್ತಿಸುತ್ತವೆ. ಅವುಗಳ ಅನ್ನಕ್ಕೆ ಕಲ್ಲು ಹಾಕುವುದು ಅಧರ್ಮವು ಅದೂ ಒಂದು ಪ್ರಕಾರದ ಹಿಂಸೆಯೇ ಹೊಲಗದ್ದೆಗಳ ಸ್ವಾಮಿಗೂ ಗೋಪಾಲಕನಿಗೂ ಆಗುವ ಅಲ್ಪನಷ್ಟವನ್ನು ನಿವಾರಿಸುವುದಕ್ಕಾಗಿ ಅರಿಯದ ಮೂಕ ಜಂತುಗಳ ಆಹಾರವನ್ನು ತಪ್ಪಿಸುವುದು ದೊಡ್ಡ ತಪ್ಪು. ಹಸಿದ, ರೋಗದ, ಕೊಂಬುಮುರಿದ, ಕುರುಡಾದ, ಗೊರಸುಶೀಳಿದ, ಬಾಲವು ಮೊಂಡಾದ, ಎಳೆಯು ದಾದ, ದುರ್ಬಲವಾದ, ಅಂಗಹೀನವಾದ, ಪಶುವನ್ನು ವಾಹನಕ್ಕೆ ಉಪಯೋಗಿಸ ಬಾರದು, ಕೆಲಸಕ್ಕೂ ಹಾಕಬಾರದು [29] ವಾಹನಕ್ಕೆ (ಕೆಲಸಕ್ಕೂ) ಉಪಯೋಗಿಸಿದ ಪ್ರಾಣಿಗಳಿಗೆ ಕೆಲಸವು ಮುಗಿದ ಕೂಡಲೇ ಮೇವು ಹಾಕಿ ನೀರು ಕುಡಿಸಿ ಆಮೇಲೆ ತನ್ನ ಹೊಟ್ಟೆಯಪಾಡಿಗೆ ಗಮನವನ್ನು ಕೊಡಬೇಕು.[30]

ಗೋವಿನ ವಿಷಯದಲ್ಲಿ ಗಮನವನ್ನು ವಿಶೇಷವಾಗಿ ಸೆಳೆದಿದ್ದಾರೆ. ಗೋವು ಸನಾತನಿಗಳಿಗೆ ಪೂಜ್ಯವಾದ ಪ್ರಾಣಿಯು. ಅದನ್ನು ಮಾತೃವತ್ತಾಗಿ ದೇವತಾವತ್ತಾಗಿ ಸತ್ಕರಿಸಬೇಕು. ಅದು ಸಾಧುವಾದ ಪ್ರಾಣಿಯು ಅದರ ಹಾಲು ಒಳ್ಳೆಯ ಆಹಾರ, ಸಾತ್ವಿಕಾಹಾರ. ಶಿಶುಗಳೂ, ರೋಗಿಗಳೂ ದುರ್ಬಲರೂ ಸೂಕ್ಷ್ಮ ಪ್ರಕೃತಿಯವರೂ ಅದರಿಂದಲೇ ಜೀವಿಸಬೇಕು. ಯಾರು ಕುಡಿದರೂ ಅದರಿಂದ ಹಾನಿಯು ಸಂಭವಿಸುವುದಿಲ್ಲ. ಗೋವಿನ ಹಾಲು, ಮೊಸರು, ತುಪ್ಪ, ಗೋಮಯ, ಗೋಮೂತ್ರ ಈ ಐದೂ ಪವಿತ್ರವಾದ ಪಂಚಗವ್ಯಗಳು. ಅವನ್ನು ವಿಧಿಯಾಗಿ ಪ್ರಾಶನಮಾಡುವುದು ಒಂದು ಪಾಪಕ್ಷಯಕರವಾದ ಪ್ರಾಯಶ್ಚಿತ್ತವು. ಸಾರಿಸು ವುದಕ್ಕೂ ಅಶುಚಿನಿವಾರಣೆಗೂ ಗೋಮಯವು ಬೇಕೇಬೇಕು. ಅಗ್ನಿಯನ್ನು ರಕ್ಷಿಸು ವುದಕ್ಕೂ ವಿಭೂತಿಯನ್ನು ಮಾಡುವುದಕ್ಕೂ ಗೋಮಯವು ಅವಶ್ಯವಾಗಿ ಬೇಕು. ಅದರ ಕೊಟ್ಟಿಗೆಗೆ ಹೋಗುವಾಗ ಉತ್ತರೀಯವನ್ನು ಬಲಕಂಕುಳ ಕೆಳಗೆ ಹೊದ್ದು

---

28 ನ ಪರಕ್ಷೇತ್ರಂ ಚರಂತೀಂ ಗಾಮಾಚಕ್ಷೀತ ॥೬೦॥ ನ ಪಿಬಂತಂ ವತ್ಸಕಂ ॥೬೨-ವಿ-೭೦॥ ನ ವಾರಯೇದ್ಗಾಂ ಧಯಂತೀಂ ನ ಚಾಚಕ್ಷೀತ ಕಸ್ಯಚಿತ್ ॥ಮ-iv-೫೯॥ ಗಾಂ ಜಲಂ ಕ್ಷೀರಂ ವಾ ಪಿಬಂತೀಂ ನ ನಿವಾರಯೇತ್ । ನಾಪಿ ಪರಕೀಯಕ್ಷೀರಾದಿ ಪಿಬಂತೀಂ ತಸ್ಯ ಕಥ ಯೇತ್ ॥ಕುಲ್ಲೂಕಃ॥ ನಾಚಕ್ಷೀತ ಧಯಂತೀಂ ಗಾಂ ॥ಯಾ-i-೧೪೦॥

29 ನಾವಿನೀತೈರ್ವ್ರಜೇದ್ಧುರ್ಯೈರ್ನ ಚಕ್ಷುದ್ವ್ಯಾಧಿಪೀಡಿತೈಃ । ನ ಭಿನ್ನಶೃಂಗಾಕ್ಷಿ ಖುರೈರ್ನ ವಾಲಧಿವಿರೂಪಿತೈಃ ॥ಮ-iv-೬೭॥

30 ನ ಯುವಸೋದಕೇವಾಹನಾನಾಮದತ್ವಾತ್ಮನಃ ಕ್ಷುತ್ತೃಷ್ಣಾಪನೋದನೇ ಸ ಕುರ್ಯಾತ್ ॥ವಿ-೬೩-೧೮॥

ಕೊಂಡು ವಿನೀತನಾಗಿ ಪ್ರವೇಶಿಸಬೇಕು.[31] ಮೈತುರಿಸಿ ಉಣ್ಣಿತೊಣಚಿ ಮುಂತಾದ ವನ್ನು ನಿವಾರಿಸಿ ಸತ್ಕರಿಸಬೇಕು.[32] ಎಂಜಲು ಕೈಯಿಂದ ಮುಟ್ಟಬಾರದು. ಗೋದಾನವೊಂದು ಮಹಾದಾನವು. ಅಂಥಾ ಪೂಜ್ಯವಾದ ಪ್ರಾಣಿಯನ್ನು ಬಂಡಿಗೂ ಏರಿಗೂ ಗಾಣಕ್ಕೂ ಕಟ್ಟಬಾರದು.[33] ಅದರಮೇಲೆ ಸವಾರಿಮಾಡುವು ದಂತೂ ಅತ್ಯಂಗ ವಿಗರ್ಹಿತವಾದ ಅಕಾರ್ಯವು.[34] ಗೋವಿಲ್ಲದೆ ನಮ್ಮ ಧರ್ಮವೂ ಇಲ್ಲ, ಕರ್ಮವೂ ಇಲ್ಲ.

ಇಂಥಾ ಧರ್ಮಕರ್ಮ ವಿಶಿಷ್ಟವಾದ ಆರ್ಯಸಂಸ್ಕೃತಿಯಲ್ಲಿ ಅಹಿಂಸೆಯೂ ಭೂತದಯವೂ ತ್ವಗಸ್ಥಿಗತವಾದ ಸದ್ವರ್ತನವು.

## ೧೦. ಪ್ರವಾಸ

ಪ್ರವಾಸನಿಯಮಗಳು ಕಾಲುನಡಿಗೆಯವರಿಗೂ ಕಾಲುದಾರಿಯಲ್ಲಿ ನಡೆಯು ವವರಿಗೂ ನಿಧಾನವಾಗಿ ನಡೆಯುವ ವಾಹನದವರಿಗೂ ಹೇಳಿದವು. ಶಕುನವು ಎಲ್ಲರಿಗೂ ಹೇಳಿದವು—ಅದನ್ನು ದಾರಿಯುದ್ದಕ್ಕೂ ನೋಡಬೇಕಾದುದಿಲ್ಲ. ಗ್ರಾಮ ಗಳಲ್ಲಿ ಸ್ವಲ್ಪದೂರ ಹೋಗುವುದರೊಳಗೂ ನಗರಗಳಲ್ಲಿ ಮೂರು ಮನೆ ದಾಟುವುದ ರೊಳಗೂ ನೋಡುವುದು.

**ಪ್ರಯಾಣದ ಕಾಲ**—ಉಷಃಕಾಲದಲ್ಲಿಯೂ (ಬೆಳಕುಹರಿಯಲು ಆರಂಭ ವಾದೊಡನೆ) ಪ್ರದೋಷಕಾಲದಲ್ಲಿಯೂ (ಕತ್ತಲೆ ಮುಸುಕುವಾಗ) ಸಂಧ್ಯಾಕಾಲ ಗಳಲ್ಲಿಯೂ, ನಡುಹಗಲಿನಲ್ಲಿಯೂ, ರಾತ್ರಿ ಸರಿಹೊತ್ತಿನಲ್ಲಿಯೂ ಹೊರಡಬಾರದು.[1] ಅಂದರೆ ಪ್ರಯಾಣ ಮಾಡುತ್ತಿದ್ದವರು ಎಲ್ಲಿದ್ದರಲ್ಲೇ ನಿಲ್ಲಬೇಕೆಂದರ್ಥವಲ್ಲ.

**ಶುಭಶಕುನಗಳು**—ಉರಿವಬೆಂಕಿ, ಹೊತ್ತಮಣ್ಣು, ಇಬ್ಬರು ಬ್ರಾಹ್ಮಣರು, ಹೆಡಗಾರ, ಕನ್ನಿಕೆ, ವೇಶ್ಯೆ, ಆನೆ, ಕುದುರೆ, ಆಡು, ಹಸು, (ಕಟ್ಟಿದ ಒಂದು) ಎತ್ತು, ಗಂಧ, ಪುಷ್ಪ, ಫಲ, ಗೋರೋಚನ, ತುಂಬಿದ ಕೊಡ, ಕನ್ನಡಿ, ಛತ್ರಿ, ಚಾಮರ, ಬೀಸಣಿಗೆ, ಧ್ವಜ, ಆಯುಧ, ಮಣೆ, ಹಾಲು, ಮೊಸರು, ಜೇನುತುಪ್ಪ, ಮೀನು, ರಕ್ತಸೋರುವ ಮಾಂಸ, ತಿನ್ನುವ ಸೊಪ್ಪು, ಗರಿಕೆ, ಬೀಜ, ಹಸಿಯ ಗೋಮಯ (ಸಗಣಿ), ರತ್ನ, ಚಿನ್ನ, ಬೆಳ್ಳಿ, ಒಡವೆ, ಬಂಗಾರದ ಗಿಂಡಿ, ವಸ್ತ್ರ, ರುಮಾಲು,

---

31 ಗವಾಂ ಗೋಷ್ಠೇ ...ದಕ್ಷಿಣಂ ಪಾಣಿಮುದ್ಧರೇತ್ ॥ಮ-iv-೫೮॥

32 ಕಂಡೂಯನೈರ್ದಂಶನಿವಾರಣೈಶ್ಚ ॥ (ಎಂದು ದಿಲೀಪನು ನಂದಿನೀಧೇನುವನ್ನು ಸೇವಿಸಿದ ಪ್ರಕಾರವು ಉಕ್ತವಾಗಿದೆ) ॥ರ.ವಂ-ii ॥

33 ನ ಗೋಭಿಃ ॥ವಿ-೬೩-೧೬॥ (ವ್ರಜೇತ ಇತ್ಯನ್ವಯಃ)

34 ಗವಾಂ ಚ ಯಾನಂ ಪೃಷ್ಠೇನ ಸರ್ವಥೈವ ವಿಗರ್ಹಿತಂ ॥ಮ-iv-೭೨॥

1 ನಾತಿಕಲ್ಯಂ ನಾತಿಸಾಯಂ ನಾತಿಮಧ್ಯಂದಿನೇಸ್ಥಿತೇ। (ಗಚ್ಛೇತ್)॥ಮ-iv-೧೪೦॥ ನ ಸಂಧ್ಯಯೋಃ ॥೮॥ ನ ಮಧ್ಯಾಹ್ನೇ ॥೯॥ ನ ರಾತ್ರೌ ॥೧೨॥ ವಿ-೬೩॥

ಬಿಲ್ವಪತ್ರೆ, ನಂಜಬಟ್ಲು, ಹೆರಳುಗಿಡಗಳು, ಇವುಗಳನ್ನು ಕಂಡರೆ ಶುಭವು. ಇವನ್ನು ಬಲಗಡೆಗೆ ಬಿಟ್ಟುಕೊಂಡು ನಡೆಯಬೇಕು.[2]

**ಅಪಶಕುನಗಳು**—ಕೆಂಡ, ಬೂದಿ, ಒಂಟಿಬ್ರಾಹ್ಮಣ, ಸಂನ್ಯಾಸಿ, ಕಾವೀ ಬಟ್ಟೆ ಉಟ್ಟವನು, ಜಟೆಧರಿಸಿದವನು, ತಲೆಕೆದರಿದವನು, ಬೋಳ, ಕುಳ್ಳ, ಅಂಗ ಹೀನ, ಕೊಳಕ, ನಪುಂಸಕ, ಹೇಡಿ, ಮತ್ತ(ಮದಿಸಿದವ), ಉನ್ಮತ್ತ(ಹುಚ್ಚ), ಬೆಲ್ಲ, ಎಣ್ಣೆ, ಉಪ್ಪು, ಸೌದೆ, ಒಣಗಿದ ಗೋಮಯ(ಬೆರಣಿ), ಮುತ್ತುಗದೆಲೆ, ಹುಲ್ಲು, ಹತ್ತಿ, ಹಗ್ಗ, ಬೇಡಿ, ವಾಂತಿ, ಮಲ, ನಾರಾಯಿ(ಹೆಂಡವಲ್ಲ–ಹೆಂಡ ಶಕುನ), ಇವನ್ನು ಕಂಡರೆ ಅಪಶಕುನ[3]

**ಮಾರ್ಗಧರ್ಮ**—ನಾಲ್ಕು ದಾರಿ ಸೇರುವ ಸ್ಥಳ, ದೊಡ್ಡ ಮರಗಳು, ಗೋವು, ಬ್ರಾಹ್ಮಣ, ದೇವರು, ತುಪ್ಪ, ಜೇನುತುಪ್ಪ, ಮುಂತಾದುವನ್ನು ಬಲಗಡೆ ಬಿಟ್ಟು ಕೊಂಡು ಪ್ರದಕ್ಷಿಣೆಯಾಗಿ ಹೋಗಬೇಕು[4] ಮುದುಕ, ಭಾರವನ್ನು ಹೊತ್ತವನು, ರಾಜ, ಸ್ನಾತಕ, ಸ್ತ್ರೀ, ರೋಗಿ, ವರ, ರಥಾರೂಢ,ಇವರಿಗೆ ದಾರಿಯನ್ನುಬಿಟ್ಟು ಪಕ್ಕಕ್ಕೆ ಸರಿಯಬೇಕು, ಅವರವರೇ ಸಂಧಿಸಿದರೆ ರಾಜನಿಗೂ ಸ್ನಾತಕನಿಗೂ ಮಿಕ್ಕವರೂ, ಸ್ನಾತಕನಿಗೆ ರಾಜನೂ ದಾರಿಕೊಡಬೇಕು[5] ಬಾಲಕನಿಗೂ ಮತ್ತನಿಗೂ ಉನ್ಮತ್ತ

---

2 ಅಗ್ನಿಬ್ರಾಹ್ಮಣಗಣಿಕಾಪೂರ್ಣಕುಂಭಾದರ್ಶಚ್ಛತ್ರಧ್ವಜಪತಾಕಾಶ್ರೀವೃಕ್ಷವರ್ಧಮಾನನಂದ್ಯಾವರ್ತಾಶ್ಚ ॥೨೯॥ ತಾಲವೃಂತಚಾಮರಾಶ್ವಗಜಾಜಗೋದಧಿಕ್ಷೀರಮಧುಸಿದ್ಧಾರ್ಥಕಾಂಶ್ಚ ॥೩೦॥ ವೀಣಾಚಂದನಾಯುಧಾದ್ರ್ಗಗೋಮಯಫಲಪುಷ್ಪಾದ್ರ್ರಶಾಕಗೋರೋಚನದೂರ್ವಾಪ್ರರೋಹಾಂಶ್ಚ ॥೩೧॥ ಉಷ್ಣೀಷಾಲಂಕಾರಮಣಿಕನಕರಜತವಸ್ತ್ರಾಸನಯಾನಾಮಿಷಾಂಶ್ಚ ॥೩೨॥ ಭೃಂಗಾರೋದ್ಧೃತೋರ್ವರಾಬದ್ಧೈಕಪಶುಕುಮಾರೀಮೀನಾಂಶ್ಚ ದೃಷ್ಟ್ವಾ ಪ್ರಯಾತಿ ॥೩೩॥ ವಿ-೬೩॥

3 ಅಥ ಮತ್ತೋನ್ಮತ್ತವ್ಯಂಗಾನ್ ದೃಷ್ಟ್ವಾ ನಿವರ್ತೇತ ॥೩೪॥ ವಾಂತವಿರಕ್ತಮುಂಡಿತಜಟಿಲವಾಮನಾಂಶ್ಚ ॥೩೫॥ ಕಾಷಾಯಿಪ್ರವ್ರಜಿತಮಲಿನಾಂಶ್ಚ ॥೩೬॥ ತೈಲಗುಡಶುಷ್ಕಗೋಮಯೇಂಧನತೃಣಪಲಾಶಭಸ್ಮಾಂಗಾರಾಂಶ್ಚ ॥೩೭॥ ಲವಣಕ್ಲೀಬಾಸವನಪುಂಸಕಕಾರ್ಪಾಸರಜ್ಜುನಿಗಡಮುಕ್ತಕೇಶಾಂಶ್ಚ॥೩೮॥ ವಿ-೬೩॥ ಕಾಷಾಯಿಣೋವೃಥಾಲಿಂಗಧಾರಿಣಃ। ಪ್ರವ್ರಜಿತಸ್ಸಂನ್ಯಾಸೀ। ಮಲಿನೋಮಲಾಕ್ರಾಂತದೇಹಃ ಕಾಪಾಲಿಕಾದಿ। ತೃಣಂ ಕುಶದೂರ್ವಾವ್ಯತಿರಿಕ್ತಂ। ಪಲಾಶಂ ಪಲಾಶಾದಿಪರ್ಣಂ। ನಿಗಡಃ ಪಾದಶೃಙ್ಖಲಾ ॥

4 ಮೃದಂ ಗಾಂ ದೈವತಂ ವಿಪ್ರಂ ಘೃತಂ ಮಧು ಚತುಷ್ಪಥಂ। ಪ್ರದಕ್ಷಿಣಾನಿ ಕುರ್ವೀತ ಪ್ರಜ್ಞಾತಾಂಶ್ಚ ವನಸ್ಪತೀನ್ ॥ಮ-IV-೩೯॥ ಚತುಷ್ಪಥಂ ಪ್ರದಕ್ಷಿಣೀಕುರ್ಯಾತ್ ॥೨೬॥ ದೇವತಾರ್ಚಾಂ ಚ ॥೨೭॥ ಪ್ರಜ್ಞಾತಾಂಶ್ಚವನಸ್ಪತೀನ್ ॥೨೮॥ ವಿ-೬೩॥

5 ಚಕ್ರಿಣೋ ದಶಮೀಸ್ಥಸ್ಯ ರೋಗಿಣೋ ಭಾರಿಣಸ್ತ್ರಿಯಾಃ। ಸ್ನಾತಕಸ್ಯ ಚ ರಾಜ್ಞಸ್ಯ ಪಂಥಾ ದೇಯೋ ವರಸ್ಯ ಚ ॥೧೩೮॥ ತೇಷಾಂ ತು ಸಮವೇತಾನಾಂ ಮಾನ್ಯೌ ಸ್ನಾತಕಪಾರ್ಥಿವೌ। ರಾಜಸ್ನಾತಕಯೋಶ್ಚೈವ ಸ್ನಾತಕೋ ನೃಪಮಾನಭಾಕ್ ॥೧೩೯॥ ಮ-ii ॥ ವೃದ್ಧಭಾರಿನೃಪಸ್ನಾತಸ್ತ್ರೀರೋಗಿವರಚಕ್ರಿಣಾಂ। ಪಂಥಾ ದೇಯೋ ನೃಪಸ್ತೇಷಾಂ ಮಾನ್ಯ ಸ್ನಾತಸ್ಯ ಭೂಪತೇಃ ॥ಯಾ-1-೧೧೭॥

ಸಿಗೂ ಗಾಯವಾದವನಿಗೂ ಸಂನ್ಯಾಸಿಗೂ ದಾರಿಯನ್ನು ಬಿಡಬೇಕು.[6] ಅವರವರೇ ಸಂಧಿಸಿದರೆ ರಾಜಸ್ನಾತಕರ ವಿಷಯದಲ್ಲಿ ಹೇಳಿರುವ ಕ್ರಮವನ್ನೇ ಅನುಸರಿಸಬೇಕು. ಉಪಲಕ್ಷಣದಿಂದ ಇತರರು ಸಂಧಿಸಿದರೆ ಶಕ್ತರು ಅಶಕ್ತರಿಗೂ, ಪ್ರಜ್ಞೆಯಿರುವವರು ಪ್ರಜ್ಞೆಯಿಲ್ಲದವರಿಗೂ, ಕಷ್ಟವಾಗದವರು ಕಷ್ಟವಾಗುವವರಿಗೂ, ಗಂಡಸರು ಹೆಂಗಸರಿಗೂ, ವಿಧೇಯರು ಪೂಜ್ಯರಿಗೂ, ದಾರಿಯನ್ನ ಬಿಡಬೇಕು—ಅಂದರೆ ಸಂದರ್ಭಾನುಸಾರವಾಗಿ ನಡೆಯಬೇಕು. ದೇವರು ರಾಜ ಸ್ನಾತಕ ಗುರು ಆಚಾರ್ಯ ದೀಕ್ಷಿತ ಋತ್ವಿಕ್ಕು ಪರಸ್ತ್ರೀ, ಇವರ ನೆರಳನ್ನು ಬೇಕೆಂದು ಆಕ್ರಮಿಸಬಾರದು.[7] ಮಳೆಯು ಹುಯ್ಯುವಾಗ ಓಡಬಾರದು, ಮರವನ್ನೇರಬಾರದು, ಬಾವಿಗಿಳಿಯಬಾರದು, ಬಾವಿಯನ್ನಿಣುಕಿ ನೋಡಬಾರದು ದಾಟಲೂಬಾರದು, ನದಿಯನ್ನು ಈಜಿಕೊಂಡು ಅಥವಾ ಒಡಕು ದೋಣಿಯಲ್ಲಿ ದಾಟಬಾರದು, ನದಿಯ ದಡದಲ್ಲಿ ನಿಂತಿರಬಾರದು.[8] ಪರಸ್ತ್ರೀಯರು ಹೋಗುತ್ತಿದ್ದರೆ ಅವರ ಜತೆಯಲ್ಲಾಗಲೀ ಹಿಂದಾಗಲೀ ನಡೆಯಬಾರದು.[9]

**ವಿಶ್ರಾಮ**—ನಾಲ್ಕು ದಾರಿಗಳು ಸೇರುವ ಕಡೆ ನಿಲ್ಲಬಾರದು.[10] ರಾತ್ರಿ ಮರದ ಬುಡದಲ್ಲುಳಿಯಬಾರದು, ದೂರ ಉಳಿಯಬೇಕು.[11] ಬೆಟ್ಟದ ಮೇಲೆ ಬಹಳ ಹೊತ್ತಿರಬಾರದು.[12] ಹುಲ್ಲಿನಮೇಲೂ ದನದ ಕೊಟ್ಟಿಗೆಯಲ್ಲಿಯೂ ವಿಶ್ರಮಿಸಿಕೊಳ್ಳಬಾರದು.[13] ಯಾರೂ ಇಲ್ಲದ ಮನೆಯಲ್ಲಿ ತಂಗಲೂಬಾರದು, ಒಬ್ಬನೇ ಮಲಗಲೂಬಾರದು.[14] ಮತ್ತೊಬ್ಬರ ಹಾಸಿಗೆ ಮಣೆ ಮನೆ ಉದ್ಯಾನ ಯಾನ ವಾಹನಗಳನ್ನು, ಅವರು ಅನುಮತಿ ಕೊಟ್ಟಲ್ಲದೆ, ಆಕ್ರಮಿಸಬಾರದು.[15]

---

6 ಬಾಲವೃದ್ಧಮತ್ತೋನ್ಮತ್ತೋಪಹತದೇಹ ಭಾರಾಕ್ರಾಂತಸ್ತ್ರೀಸ್ನಾತಕ ಪ್ರವ್ರಜಿತೇಭ್ಯಃ । ಪಂಥಾದೇಯಾಃ ॥ಶಂಖಃ॥

7 ದೇವತಾನಾಂ ಗುರೋರಾಜ್ಞಸ್ಸ್ನಾತಕಾಚಾರ್ಯಯೋಸ್ತಥಾ। ನಾಕ್ರಾಮೇತ್ಕಾಮತಶ್ಛಾಯಾಂ ಬಭ್ರುಣೋ ದೀಕ್ಷಿತಸ್ಯ ಚ॥ಮ-iv-೧೩೦॥ದೇವತ್ವಿರ್ಕ್ಸ್ನಾತಕಾಚಾರ್ಯರಾಜ್ಞಾಂ ಛಾಯಾಂಪರಸ್ತ್ರಿಯಾಃ। ನಾಕ್ರಾಮೇತ್ ॥ಯಾ-i-೧೫೨॥ ಕಾಮತಇತಿಮನುಸ್ಮರಣಾತ್ ॥

8 ನ ಪ್ರಧಾವೇಚ್ಚವರ್ಷತಿ ॥ಮ-iv-೩೮॥ ನ ಪೃಥಾನದೀಂತರೇತ್ ॥೪೪॥ ನಬಾಹುಭ್ಯಾಂ ॥೪೬॥ ನ ಭಿನ್ನನಾವಾ ॥೪೭॥ ನ ಕೂಲಮಧಿತಿಷ್ಠೇತ್ ॥೪೮॥ ನ ಕೂಪಮವಲೋಕಯೇತ್ ॥೪೯॥ ನ ಲಂಘಯೇತ್ ॥೫೦॥ ವಿ-೬೩॥

9 ಗಚ್ಛಂತೀಂನ್ನಾನುಗಚ್ಛೇತ ॥ಇತಿಸ್ಮರಣಾತ್॥

10 ನ ಚತುಷ್ಪಥಮಧಿತಿಷ್ಠೇತ್ ॥ವಿ-೬೩-೧೯॥

11 ನ ರಾತ್ರೌವೃಕ್ಷಮೂಲಂ ॥ವಿ-೬೩-೨೦॥

12 ನ ಚಿರಂಪರ್ವತೇವಸೇತ್ ॥ಮ-iv-೬೦॥॥ ನ ಚಿರಂಪರ್ವತೇ ॥ವಿ ೭೧-೬೮॥

13 ನ ತೃಣಂ ॥೨೩॥ ನ ಪಶೂನಾಂಬಂಧನಾಗಾರಂ ॥೨೪॥ (ಅಧಿತಿಷ್ಠೇತ್) ವಿ-೬೩॥

14 ನ ಶೂನ್ಯಾಲಯಂ ॥೨೧॥ (ಅಧಿತಿಷ್ಠೇತ್) ವಿ-೬೩॥ ನೈಕಸ್ಸುಪ್ಯಾಚ್ಛೂನ್ಯಗೃಹೇ ॥ಮ-iv-೫೭॥

15 ಪರಶಯ್ಯಾಽಽಸನೋದ್ಯಾನಗೃಹಯಾನಾನಿವರ್ಜಯೇತ್ । ಅದತ್ತಾನಿ. .॥ಯಾ-i-೧೬೦॥

## ೧೧. ಇತರ ನಿಷಿದ್ಧ ಕಾರ್ಯಗಳು

ಆಯಾ ವಿಷಯಗಳಿಗೆ ಸಂಬಂಧಪಟ್ಟ ನಿಷೇಧಗಳನ್ನು ಆಯಾ ಪ್ರಕರಣಗಳಲ್ಲಿ ಹೇಳಿದೆ. ಸದಾಚಾರಕ್ಕೆ ಸಂಬಂಧಪಟ್ಟ ಮಿಕ್ಕವನ್ನು ಮಾತ್ರ ಇಲ್ಲಿ ಸಂಗ್ರಹಿಸಿದೆ :—

**ನೋಡಬಾರದವು**—ಉದಯವಾಗುತ್ತಿರುವ ಅಸ್ತವಾಗುತ್ತಿರುವ ನೆತ್ತಿಯ ಮೇಲಿರುವ ಗ್ರಹಣ ಹಿಡಿದ ವಸ್ತ್ರದ ಮರೆಯಲ್ಲಿ ಕಾಣುವ ನೀರಿನಲ್ಲಿ ಕನ್ನಡಿಯಲ್ಲಿ ಪ್ರತಿಬಿಂಬಿಸುವ ಸೂರ್ಯನನ್ನು ನೋಡಬಾರದು. (ಕಣ್ಣಿಗೆ ಅಪಾಯ) ಅಶುಚಿಯಾಗಿದ್ದಾಗ ಗ್ರಹಣವನ್ನು ನೋಡಬಾರದು.[1] ಕಾಮನಬಿಲ್ಲನ್ನು ನೋಡಬಾರದು, ತೋರಿಸಲೂಬಾರದು [2] ಅತ್ಯುಜ್ಜ್ವಲವಾದ ಯಾವುದನ್ನೂ ನಡುಗುವುದನ್ನೂ ಸೂಕ್ಷ್ಮವಾದುದನ್ನೂ ಅಪ್ರಿಯವಾದುದನ್ನೂ ನಿರೀಕ್ಷಿಸಬಾರದು [3] (ಅಪಾಯಕರ.) ಕ್ರುದ್ಧನಾದ ಗುರುವಿನ ಹುಚ್ಚನ ಮದಿಸಿದವನ ಮುಖವನ್ನೂ, ಬಂಧದಿಂದ ಬಿಡಿಸಿಕೊಂಡ ಆನೆ(ಸಿಂಹ ಹುಲಿ)ಗಳನ್ನೂ ನೋಡಬಾರದು [4] ತಪ್ಪಿಸಿಕೊಳ್ಳಲು ಮಾರ್ಗವಿಲ್ಲದ ಕಡೆ ಗೂಳಿಗಳ ಕೋಣಗಳ ಕಾಳಗವನ್ನೂ ನೋಡುತ್ತಾ ನಿಂತಿರಬಾರದು [5] ನೀರು ಎಣ್ಣೆ (ತುಪ್ಪ) ಕೊಳೆಯಾದ ಕನ್ನಡಿ, ಇವುಗಳಲ್ಲಿ ಮುಖವನ್ನು ನೋಡಿಕೊಳ್ಳಬಾರದು.[6]

**ಮಾಡಬಾರದವು**—ಬೆಂಕಿಯನ್ನು ದಾಟುವುದೂ ಹಾರುವುದೂ ಬಾಯಿಯಿಂದೂದುವುದೂ ಮತ್ತು ಕಾಲಿನ ದೆಸೆಯಲ್ಲಿಟ್ಟುಕೊಳ್ಳುವುದೂ ನಿಷೇಧವು; ಬೆಂಕಿಯಿಂದ ಕಾಲುಕಾಯಿಸಬಾರದು [7] ಎಳೆಯ ಬಿಸಿಲನ್ನು ಕಾಯಬಾರದು, ಶವದ ಹೊಗೆಯನ್ನು ವರ್ಜ್ಯಮಾಡಬೇಕು [8] ಕಂಚಿನ (ಊಟದ) ಪಾತ್ರೆಯೊಳಗೂ ಕಾಲಿನಿಂದ ಉಜ್ಜಿಯೂ ಕಾಲನ್ನು ತೊಳೆದುಕೊಳ್ಳಬಾರದು, ಕೌಚುಗಾಲು ಹಾಕ

---

1 ನೇಕ್ಷೇತೋದ್ಯಂತಮಾದಿತ್ಯಂ ನಾಸ್ತಂ ಯಾಂತಂ ಕದಾಚನ । ನೋಪಸೃಷ್ಟಂ ನ ವಾರಿಸ್ಥಂ ನ ಮಧ್ಯಂ ನಭಸೋಗತಂ ॥ಮ-IV-೩೭॥ ನ ಚಾದರ್ಶಜಲಮಧ್ಯಗತಂ ॥೨೦॥ ನ ವಾಸಸಾ ತಿರೋಹಿತಂ ॥೧೯॥ ವಿ-೭೧॥ ಉದ್ಯಂತಮಸ್ತಮಾಯಾಂತಂ ತಪಂತಂ ಪ್ರತಿಮಾಗತಂ । ಉಪರಕ್ತಂ ಚ ಭಾಸ್ವಂತಂ ವಾಸಸಾ ವಾ ತಿರೋಹಿತಂ ॥ಅ.ಸಂ.॥

2 ನ ದಿವೀಂದ್ರಾಯುಧಂ ದೃಷ್ಟ್ವಾ ಕಸ್ಯಚಿದ್ದರ್ಶಯೇದ್ಬುಧಃ ॥ಮ-IV-೫೯॥

3 ನಾನ್ಯದಪ್ಯತಿತೇಜಸ್ವಿ.. ॥ ಸತತಂ ನ ನಿರೀಕ್ಷೇತ ಚಲಸೂಕ್ಷ್ಮಾಪ್ರಿಯಾಣಿ ಚ ॥ ಅ. ಸಂ.॥

4 ನೋನ್ಮತ್ತಂ ॥೩೦॥ ನ ಚ ಮತ್ತಂ ॥೩೧॥ ನ ಕ್ರುದ್ಧಸ್ಯ ಗುರೋರ್ಮುಖಂ ॥೩೨॥ ನ ಚಾಲಾನಭ್ರಷ್ಟಕುಂಜರಾನ್ ॥೨೮॥ ಚಕಾರಾತ್ ವ್ಯಾಘ್ರಾದೀಂಶ್ಚ (ಈಕ್ಷೇತ) ॥ವಿ-೭೧॥

5 ನ ಚ ವಿಷಮಸ್ಥೋ ವೃಷಾದಿಯುದ್ಧಂ ॥ (ವಿಷಮೇಪಲಾಯನಾಯೋಗ್ಯೇ ॥ (ಈಕ್ಷೇತ) ॥ ವಿ ೭೧-೨೯॥ 6 ನ ತೈಲೋದಕಯೋಃ ಸ್ವಾಂ ಛಾಯಾಂ ॥೨೩॥ ನ ಮಲವತ್ಯಾದರ್ಶೇ (ಈಕ್ಷೇತ) ॥೨೪॥ ವಿ ೭೧॥

7 ನಾಗ್ನಿಂ ಲಂಘಯೇತ್ ॥೩೬॥ ನಾಗ್ನಿಂ ಮುಖೇನೋಪಧಮೇತ್ ॥ ನ ಚ ಪಾದೌ ಪ್ರತಾಪಯೇತ್ ॥೫೩॥ ನ ಚೈನಂ ಪಾದತಃ ಕುರ್ಯಾತ್ ॥೫೪॥ ಮ-೪॥

8 ಬಾಲಾತಪಃ ಪ್ರೇತಧೂಮೋ ವರ್ಜ್ಯಂ ॥ಮ-೪-೬೯॥

ಬಾರದು.[9] ಕೂದಲು ಬೂದಿ ಇದ್ದಲು ಹತ್ತಿ ಹೊಟ್ಟು ಮೂಳೆ ತಲೆಯಬುರುಡೆ ಅಮೇಧ್ಯ ಇವನ್ನೂ, ಸ್ನಾನಮಾಡಿದ ನೀರು ಮೈಗೆ ಉಜ್ಜಿದ ಪುಡಿ ಜಲಮಲ ಉಗುಳು ಶ್ಲೇಷ್ಮವಾಂತಿ ಇವನ್ನೂ, ತುಳಿಯಬಾರದು.[10] ಕರುವಿನ ಹಗ್ಗವನ್ನು ದಾಟಬಾರದು. ಪಾದರಕ್ಷೆಯನ್ನು ಕೈಯಲ್ಲಿ ಹಿಡಿದು ನಡೆಯಬಾರದು.[11] ಅಧಾರ್ಮಿಕರೂ ರೋಗಗಳೂ ಹೆಚ್ಚಾಗಿರುವ, ವೈದ್ಯರಿಲ್ಲದ, ಗ್ರಾಮದಲ್ಲಿರಬಾರದು.[12] ರೋಗಿಗಳೊಡನೆಯೂ ಬಹುಕಾಲ ಇರಬಾರದು.[13] ಜಲಮಲ ಉಗುಳುಶ್ಲೇಷ್ಮ ರಕ್ತ ರೇತಸ್ಸು ವಿಷ ಉಗುರು ಕೂದಲು ಹೊಟ್ಟು ಬೂದಿ ಮೂಳೆ ಅಮೇಧ್ಯತಗಲಿದ ವಸ್ತು, ಇವನ್ನು ನೀರಿಗೆ ಹಾಕಬಾರದು.[14] ಸರ್ಪಶಸ್ತ್ರಗಳೊಡನೆಯೂ ಧರ್ಮಘ್ನರೊಡನೆಯೂ ಆಟವಾಡಬಾರದು.[15] ಮಜ್ಜಿಗೆ ಹೂವು ಹಾಸಿಗೆ ಉಳಿಯಲು ಸ್ಥಳ ಇವನ್ನೂ, ದರ್ಭೆಯನ್ನೂ, ಗಂಧವನ್ನೂ, ನೀರನ್ನೂ (ವಿಷನಾಶಕವಾದ) ಮಣಿ ಮೂಲಿಕೆಗಳನ್ನೂ, ಮೊಸರನ್ನೂ, ಹುರಿಹಿಟ್ಟನ್ನೂ, ಮೀನನ್ನೂ, ಮಾಂಸವನ್ನೂ ತಿನ್ನುವ ಸೊಪ್ಪನ್ನೂ, ಕೇಳಿದವರಿಗೆ ಇದ್ದರೂ ಕೊಡದೆ ಇರಬಾರದು.[16] ಮತ್ತೊಬ್ಬರ ಜುಟ್ಟನ್ನು ಹಿಡಿದುಕೊಳ್ಳಲೂಬಾರದು, ಮತ್ತೊಬ್ಬರ ತಲೆಯಮೇಲೆ ಹೊಡೆಯಲೂಬಾರದು.[17] ಜೂಜಾಡಬಾರದು, ವಗಡೆಯಾಡಬಾರದು.[18]

—ಂಂ೦ಂ—

9 ನ ಪಾದೌ ಧಾವಯೇತ್ಕಾಂಸ್ಯೇ ಕದಾಚಿದಪಿ ಭಾಜನೇ ॥ಮ-೪-೬೫॥ ನ ಪಾದಂ ಪಾದೇನ ಧಾವಯೇತ್ ॥ವಿ-೭೧-೩೯॥ ಪಾದಂ ಪಾದೇನ ನಾಕ್ರಾಮೇನ್ನ ಕಂಡೂಯೇನ್ನ ಶೌಚಯೇತ್ । ನ ಕಾಂಸ್ಯಭಾಜನೇಶೌಚಂ ॥ಅ.ಸಂ-ದಿನ॥ (ಭಾಜನಂ-ಭೋಜನಪಾತ್ರಂ)

10 ಅಧಿತಿಷ್ಠೇನ್ನ ಕೇಶಾಂಸ್ತು ನ ಭಸ್ಮಾಸ್ಥಿಕಪಾಲಕಾಃ। ನ ಕಾರ್ಪಾಸಾಸ್ಥಿ ನ ತುಷಾನ್ ದೀರ್ಘಮಾಯುರ್ಜಿಜೀವಿಷುಃ ॥೭೮॥ ಉದ್ವರ್ತನಮುಪಸ್ನಾನಂ ವಿಣ್ಮೂತ್ರೇ ರಕ್ತಮೇವ ಚ। ಶ್ಲೇಷ್ಮನಿಷ್ಠ್ಯೂತವಾಂತಾನಿ ನಾಧಿತಿಷ್ಠೇತ್ತು ಕಾಮತಃ ॥೧೩೨॥ ಮ-iv॥

11 ನ ಲಂಘಯೇದ್ವತ್ಸತಂತ್ರೀಂ ॥೩೮॥ ಸ್ವಯಂ ನೋಪಾನಹೌ ಹರೇತ್ ॥೭೪॥ ಮ-iv ॥ 12 ನಾಧಾರ್ಮಿಕೇ ವಸೇದ್ಗ್ರಾಮೇ ನ ವ್ಯಾಧಿಬಹುಲೇ ಭೃಶಂ ॥ಮ-iv ೬೦॥ ನ ವೈದ್ಯವಿಹೀನೇ ॥ವಿ.೭೧.೬೬॥ 13 (ನಾಕ್ಷೈಃಕ್ರೀಡೇ) ನ್ನ ಧರ್ಮಘ್ನೈರ್ವ್ಯಾಧಿತೈರ್ವಾ ನ ಸಂವಿಶೇತ್ ॥ಯಾ-i-೧೩೮॥

14 ನಾಪ್ಸು ಮೂತ್ರಂ ಪುರೀಷಂ ವಾ ಷ್ಠೀವನಂ ವಾ ಸಮುತ್ಸೃಜೇತ್ । ಅಮೇಧ್ಯಲಿಪ್ತಮನ್ಯದ್ವಾ ಲೋಹಿತಂ ವಾ ವಿಷಾಣಿವಾ ॥ಮ iv-೫೬॥ ತುಷಕೇಶಭಸ್ಮಾಸ್ಥಿಶ್ಲೇಷ್ಮನಖಲೋಮಾನ್ಯಪ್ಸುನ ನಿಕ್ಷಿಪೇತ್ ॥ಶಂಖಃ॥ ಷ್ಠೀವನಾಸೃಕ್ಶಕೃನ್ಮೂತ್ರರೇತಾಂಸ್ಯಪ್ಸು ನ ನಿಕ್ಷಿಪೇತ್ ॥ಯಾ i-೧೩೭॥ 15 ನ ಶಸ್ತ್ರಸರ್ಪೈಃ ಕ್ರೀಡೇತ್ ॥ವಿ-೭೧-೭೮॥ ನಾಕ್ಷೈಃ ಕ್ರೀಡೇನ್ನ ಧರ್ಮಘ್ನೈಃ ॥ಯಾ-i ೧೩೮॥ 16 ನ ದಧಿಸುಮನಸೀ ಪ್ರತ್ಯಾಚಕ್ಷೀತ ॥ವಿ.೭೧-೫೪॥ ಶಯ್ಯಾಂ ಗೃಹಾನ್ ಕುಶಾನ್ ಗಂಧಾನಪಃ ಪುಷ್ಪಂ ಮಣೀನ್ ದಧಿ । ಧಾನಾ ಮತ್ಸ್ಯಾನ್ ಪಯೋ ಮಾಂಸಂ ಶಾಕಂ ಚೈವ ನ ನಿರ್ಣುದೇತ್ ॥ಮ-iv-೨೫೦॥

17 ಕೇಶಗ್ರಹಾನ್ ಪ್ರಹಾರಾಂಶ್ಚ ಶಿರಸ್ಯೇತಾನಿ ವರ್ಜಯೇತ್ ॥ಮ-iv-೮೩॥

18 ದ್ಯೂತಂ ವರ್ಜಯೇತ್ ॥ವಿ-೭೧.೭೮॥ ನಾಕ್ಷೈಃ ಕ್ರೀಡೇತ್ ॥ಯಾ-i ೧೩೮॥

# ೩ನೆಯ ಪ್ರಕರಣ—ವೃತ್ತಿ

ಪ್ರಾಚೀನಕಾಲದಲ್ಲಿ ನಾವು ಸ್ವತಂತ್ರರಾಗಿದ್ದೆವು ನಮ್ಮ ದೇಶದಲ್ಲಿ ಲಕ್ಷ್ಮಿಯು ತಾಂಡವವಾಡುತ್ತಿತ್ತು ರಾಜಪ್ರಜೆಗಳೆಲ್ಲರೂ ನಮ್ಮವರೇ ಆಗಿದ್ದುದರಿಂದ ಎಲ್ಲರೂ ಹೊಂದಿಕೊಂಡು ಬಾಳುತ್ತಿದ್ದೆವು. ಅಂತಶ್ಛಿದ್ರಗಳಿಗೆ ಅವಕಾಶವಿರಲಿಲ್ಲ. ಇದ್ದರೂ ಸಾರ್ವಜನಿಕ ಜೀವನಕ್ಕೆ ಕುಂದಕ ಬರುತ್ತಿರಲಿಲ್ಲ. ನಮ್ಮ ಧರ್ಮಕರ್ಮಗಳಲ್ಲಿ ನಮಗೆ ಶ್ರದ್ಧಾಭಕ್ತಿಯಿತ್ತು. ನಮ್ಮವರೆಂದರೆ ಪ್ರೀತಿವಿಶ್ವಾಸವಿತ್ತು. ಸಮೃದ್ಧಿಯು ಸಾರ್ವತ್ರಿಕವಾಗಿತ್ತು ಅಹನ್ಯಹನಿಯ ಹಾಹಾಕಾರವಿರಲಿಲ್ಲ. ಕೊಡಬೇಕೆಂದರೆ ಯಾರೂ ಹಿಂತೆಗೆಯುತ್ತಿರಲಿಲ್ಲ. ಕೊಡುವುದೇ ಒಂದು ಪ್ರಕಾರದ ವಿತರಣೆಯೆಂಬ ಭಾವನೆಯಿತ್ತು. ಪ್ರತಿಗ್ರಹಕ್ಕೇ ಪ್ರಾಶಸ್ತ್ಯವಿರಲಿಲ್ಲ. ವಿದ್ಯಾಭ್ಯಾಸ ಕಾಲದಲ್ಲಿ ಜೀವನಕ್ಕೆ ತಾಪತ್ರಯವಿರಲಿಲ್ಲ. ವಿದ್ಯಾಶುಲ್ಕದ ಹೆಸರಿರಲಿಲ್ಲ. ವಿದ್ಯಾಭ್ಯಾಸವಾದ ಮೇಲೆ ಲೋಕಾನುಭವಕ್ಕೂ ಹೆಚ್ಚು ವಿದ್ಯಾರ್ಜನೆಗೂ ದೇಶಾಟನೆಗೆ ಹೊರಟವನಿಗೆ ಸರ್ವಶ್ರೇಷ್ಠತ್ವವೂ ಸರ್ವತ್ರ ಮಾನ್ಯತ್ವವೂ ಇತ್ತು. ಗೃಹಿಯಾದಾಗಲೂ ಧನಾರ್ಜನೆಗಾಗಿ ತಾಪತ್ರಯಪಡಬೇಕಾದುದಿರಲಿಲ್ಲ, ಪಡುತ್ತಲೂ ಇರಲಿಲ್ಲ ಕಾರ್ಮಿಕರೂ ಶಿಲ್ಪಿಗಳೂ ನಿರ್ಮಾಪಕರೂ ವ್ಯಾಪಾರಿಗಳೂ ಎಲ್ಲರೂ ಸೌಖ್ಯವಾಗಿ ತಾಪತ್ರಯಗಳಿಲ್ಲದೆ ಇದ್ದರು. ಎಲ್ಲರೂ ಸುಖಿಗಳು, ಎಲ್ಲರೂ ಸಂತುಷ್ಟರು, ಎಲ್ಲರೂ ಉದಾರಿಗಳು. ಸಮೃದ್ಧಿಗೆ ಸುಭಿಕ್ಷವೆಂದೂ, ಕ್ಷಾಮಕ್ಕೆ ದುರ್ಭಿಕ್ಷವೆಂದೂ, ಅನ್ನುವವರು ಹೇಗಿರಬೇಕೋ ಹಾಗಿದ್ದರು.

ಅಂಥಾ ಕಾಲದಲ್ಲಿ ವೃತ್ತಿಯು ವ್ಯಕ್ತಿಯ ಇಚ್ಛಾಧೀನವಾಗಿದ್ದಿತು. ಇದು ನನಗೆ ಯೋಗ್ಯವು—ಇದನ್ನು ಮಾಡುತ್ತೇನೆ, ಇದು ನನಗೆ ಅನುಚಿತವು—ಇದನ್ನು ಮಾಡುವುದಿಲ್ಲ, ಎಂಬ ಪ್ರವೃತ್ತಿರೂಪದ ಸ್ವಾತಂತ್ರ್ಯವಿತ್ತು. ವಿದ್ಯಾವಂತರೂ ಚಾರಿತ್ರವಂತರೂ ತೇಜೋವಂತರೂ ಸಂಪತ್ತಿಗೆ ಮರುಳಾಗುತ್ತಲೂ ಇರಲಿಲ್ಲ, ಆರ್ಜನೆಗಾಗಿ ಸೇವಾದಿ ಹೀನವೃತ್ತಿಯನ್ನವಲಂಬಿಸುತ್ತಲೂ ಇರಲಿಲ್ಲ. ಅಂಥಾ ತೇಜಸ್ವಿಗಳಾದ ಮಹಾಜನರಿಗೆ ತೃಣೀಕೃತಬ್ರಹ್ಮರಾದ ಮಹರ್ಷಿಗಳು ವೃತ್ತಿನಿಯಮಗಳನ್ನು ಮಾಡಿದ್ದರು. ಈಗ ಕಾಲವು ಪರಿವರ್ತಿತವಾಗಿದೆ. ಸ್ವಾತಂತ್ರ್ಯವೇನೋ ಲಭಿಸಿದೆ, ಆದರೆ ಸ್ವಾವಲಂಬನ ಸಾಮರ್ಥ್ಯವಿನ್ನೂ ಬಂದಿಲ್ಲ. ಅನೇಕ ಶತಮಾನಗಳಿಂದ ಪಾರಂಪರ್ಯವಾಗಿ ನಡೆದುಬಂದಿರುವ ದೈನ್ಯಭಾವವಿನ್ನೂ ತೊಲಗಿಲ್ಲ. ವ್ಯಕ್ತಿಗೂ ವೃತ್ತಿಗೂ ಪರಾಧೀನವು ಇದ್ದೇ ಇದೆ. ಯಾವುದೋ ಯಾವಾಗಲೋ ಎಂಥಾದ್ದೋ ವೃತ್ತಿಯೆಂದೊಂದು ಸಿಗುವುದೇ ಅಹೋಭಾಗ್ಯವಾಗಿರುವಾಗ ನಮಗೀ ವೃತ್ತಿಯು ಬೇಕು, ಇದು ಬೇಡ, ಎಂಬ ವಿವೇಚನೆಗೇ ಅವಕಾಶವಿಲ್ಲ. ಇಂಥಾ

ಪರಿಸ್ಥಿತಿಯಲ್ಲಿ ಮಹರ್ಷಿಪ್ರೋಕ್ತವಾದ ವೃತ್ತಿ ನಿಯಮಗಳಲ್ಲಿ ತುಂಬಿ ತೇಲುವ ಸ್ವಾತಂತ್ರ್ಯವನ್ನವಲಂಬಿಸುವುದಸಾಧ್ಯ. ಆ ನಿಯಮಗಳನ್ನು ವಿಮರ್ಶಿಸುವುದು— ಈ ಕ್ಷಣದಲ್ಲಿಯೇ ಜಗತ್ತೆಲ್ಲವೂ ಪರಿವರ್ತಿತವಾಗುವುದು, ಅವನತಿಯ ಪಾತಾಲ ದಿಂದೆದ್ದು ಉನ್ನತಿಯ ಶಿಖರವನ್ನು ಹತ್ತುತ್ತೇವೆ, ಪ್ರಾಚೀನಪರಿಸ್ಥಿತಿಯೇ ಮತ್ತೆ ಉಪಸ್ಥಿತವಾಗುತ್ತದೆ, ಎಂಬ ಭ್ರಾಂತಿಯಿಂದಲ್ಲ. ನಮ್ಮ ಪೂರ್ವಿಕರು ಎಂಥಾ ಉಚ್ಚಧ್ಯೇಯಗಳನ್ನು ಇಟ್ಟುಕೊಂಡಿದ್ದರು, ಎಂಥಾ ಜೀವನತತ್ಪರರಾಗಿದ್ದರು, ಎಷ್ಟಕ್ಕೆ ಬಾಳಿದರು, ಎಂಬ ಹೆಮ್ಮೆಯು ಹುಟ್ಟಿ ನಾವೂ ಕಾಲಾನುಕಾಲಕ್ಕಾದರೂ ಅವರ ಹೆಸರು ಹೇಳುವುದಕ್ಕೆ ಅರ್ಹರಾದೇವೇ ಎಂಬ ಆಶಯದಿಂದಲೇ ಹೊರತು ಅನ್ಯಥಾ ಅಲ್ಲ. ಆ ಕಾಲಕ್ಕುಕ್ತವಾದ ವೃತ್ತಿಗಳೇ ಈ ಕಾಲಕ್ಕೂ ಸಾಧ್ಯವಲ್ಲದಿದ್ದರೂ ವೃತ್ತಿತತ್ತ್ವವೇನೂ ಅಕಾಲೀನವಲ್ಲ.

ವೃತ್ತಿಯು ನಮ್ಮ ನಮ್ಮ ವಯಸ್ಸು ಬುದ್ಧಿ ಅನುಕೂಲ ಭಾಷೆ ವೇಷ ವಿದ್ಯೆ ಕುಲ ಕರ್ಮ ಮುಂತಾದ ವೈಶಿಷ್ಟ್ಯಗಳಿಗೆ ಸದೃಶವಾದುದಾಗಿರಬೇಕು, ವಕ್ರವೂ ಮತ್ಸರ ಯುಕ್ತವೂ ಆಗಿರಬಾರದು.[1] ವೃತ್ತಿಯಿಂದ ಪ್ರಾಣಿಮಾತ್ರಕ್ಕೆ ದ್ರೋಹವಾಗ ಬಾರದು, ಅಥವಾ ದ್ರೋಹವು ಅನಿವಾರ್ಯವಾದರೆ ಎಷ್ಟು ಅನಿವಾರ್ಯವೋ ಅಷ್ಟು ಮಾತ್ರವೇ ಆಗಬೇಕು.[2] **ಉಞ್ಛವೃತ್ತಿ**ಯಿಂದ[3]ಲೂ **ಶಿಲವೃತ್ತಿ**[4]ಯಿಂದಲೂ ಜೀವಿಸುವುದು **ಸರ್ವೋತ್ತಮ**ವಾದುದು. ಅದರಲ್ಲಿ ದ್ರೋಹವೂ ಇಲ್ಲ, ಹಂಗೂ ಇಲ್ಲ, ದುರ್ದಾಹವೂ ಇಲ್ಲ.[5] ಆದಾಗದಿದ್ದರೆ ಅಯಾಚಿತವಾಗಿ ಎಷ್ಟು ಲಭ್ಯವಾದರೆ ಅಷ್ಟರಿಂದಲೇ ಸಂತುಷ್ಟರಾಗಿ[6]ರುವುದು **ಎರಡನೆಯ ಪ್ರಕಾರವು**.[7] ಅದೂ ಆಗ

---

1 ವಯೋ ಬುದ್ಧ್ಯರ್ಥವಾಗ್ವೇಷಶ್ರುತಾಭಿಜನಕರ್ಮಣಾಂ । ಆಚರೇತ್ಸದೃಶೀಂ ವೃತ್ತಿ ಮಜಿಹ್ಮಾಮಶಠಾಂ ತಥಾ ।।ಯಾ.i-೧೨೩।। ವಯಸಃ ಕರ್ಮಣೋಽರ್ಥಸ್ಯ ಶ್ರುತಸ್ಯಾಭಿಜನಸ್ಯ ಚ । ವೇಷವಾಗ್ಬುದ್ಧಿಸಾರೂಪ್ಯಮಾಚರನ್ ವಿಚರೇದಿಹ ।।೧೮।। ನ ಲೋಕವೃತ್ತಂ ವರ್ತೇತ ವೃತ್ತಿಹೇತೋಃ ಕಥಂಚನ। ಅಜಿಹ್ಮಾಮಶಠಾಂ ಶುದ್ಧಂ ಜೀವೇದ್ಬ್ರಾಹ್ಮಣಜೀವಿಕಾಂ।।೧೧।। ಮ.iv।।

2 ಅದ್ರೋಹೇಣೈವ ಭೂತಾನಾಮಲ್ಪದ್ರೋಹೇಣ ವಾ ಪುನಃ। ಯಾ ವೃತ್ತಿಸ್ತಾಂಸಮಾ ಸ್ಥಾಯ ವಿಪ್ರೋ ಜೀವೇದನಾಪದಿ ।।ಮ.iv-೨।। ಪರಸ್ಯ ಪೀಡಾ—ಶಿಲೋಂಛಾಯಾಚಿತಾ ಭಿರದ್ರೋಹಃ। ಈಷತ್ಪೀಡಾ ಯಾಚಿತಾದಿರಲ್ಪದ್ರೋಹಃ । ನ ತುಹಿಂಸ್ಯೈವ ದ್ರೋಹಃ ತಸ್ಯಾ ನಿಷಿದ್ಧತ್ವಾತ್ । ಶಿಲೋಂಛಾ, ಅಯಾಚಿತಾ, ಇತ್ಯಾದಿಗಳು ಅದ್ರೋಹಗಳು. ಯಾಚಿತವು ಅಲ್ಪದ್ರೋಹವು. ದ್ರೋಹವೆಂದರೆ ಹಿಂಸೆಯಲ್ಲ. 3 ಯಾರ ಹಂಗೂ ಅಡ್ಡಿಯೂ ಇಲ್ಲದೆ ಮಾರ್ಗಕ್ಷೇತ್ರಗಳಲ್ಲಿ ಉದುರಿದ ಕಾಳುಗಳನ್ನು ಆರಿಸಿ ಸಂಗ್ರಹಿಸುವುದು ಉಂಛವು.

4 ಅಂಥಾ ಕಡೆಗಳಲ್ಲಿ ಉದುರಿದ ತೆನೆಗಳನ್ನು ಆರಿಸಿಕೊಳ್ಳುವುದು ಶಿಲವು.

5 ಉಂಛವೂ ಶಿಲವೂ ಋತಪ್ರಾಯವಾದುದರಿಂದ ಋತವು.

6 ಯದೃಚ್ಛಾಲಾಭಸಂತುಷ್ಟಃ ॥ಭ. ಗೀ.॥ ಯಲ್ಲಭಸೇ ನಿಜಕರ್ಮೋಪಾತ್ತಂ ವಿತ್ತಂ ತೇನ ವಿನೋದಯ ಚಿತ್ತಂ ॥ಶಂಕರಭಗವತ್ಪಾದಾಃ॥

7 ಅಯಾಚಿತವಾಗಿ ಲಭಿಸುವುದು ಅಮೃತಪ್ರಾಯವಾದುದರಿಂದ ಅಮೃತವು.

ದಿದ್ದರೆ ಯಾಚನೆಯನ್ನೇ ಆದರೂ ಮಾಡಿ **ಭೈಕ್ಷ್ಯ**[8] ವೃತ್ತಿಯಿಂದ ಜೀವಿಸಬೇಕು. ಅದೂ ಆಗದಿದ್ದರೆ **ಕೃಷಿ**[9] ಯಿಂದಲೂ **ವಾಣಿಜ್ಯ**[10] ದಿಂದಲೂ ಬದುಕಬೇಕು. **ಸೇವಾವೃತ್ತಿ**[11] ಯನ್ನು ಮಾತ್ರ ವರ್ಜ್ಯಮಾಡಬೇಕು.[12] ಅಸಜ್ಜನರ ಪ್ರಿಯವಾದ ವಿಚಿತ್ರ ಕಥಾಕಥನಾದಿಗಳಿಂದ ಜೀವಿಸುವುದು ಸರ್ವಥಾ ವರ್ಜ್ಯವು.[13] ಗೀತ ವಾದ್ಯಾದಿ ಕುಶಲಕಲೆಗಳನ್ನು ಅಭಿರುಚಿಗಾಗಿ ಕಲಿಯಬಹುದೇ ಹೊರತು ವೃತ್ತಿಗಾಗಿ ಅವಲಂಬಿಸಬಾರದು. ಅವುಗಳಿಂದಲೂ, ಶಾಸ್ತ್ರವಿರುದ್ಧವಾದ ಕರ್ಮಗಳಿಂದಲೂ, ಧನವನ್ನು ಆರ್ಜಿಸಬಾರದು ಧನವಿರದಿದ್ದರೂ ಯಾರಿಂದಲೋ ಯಾವುದರಿಂದಲೋ ಎಷ್ಟು ಲಭ್ಯವಾದರೆ ಅದೇ ನಾಕೆಂದು ಅಸತ್ಪ್ರತಿಗ್ರಹಾದಿಗಳಿಂದ ಧನಾರ್ಜನೆಯನ್ನು ಮಾಡಬಾರದು.[14] ಪರದ್ರೋಹವನ್ನು ಮಾಡಲೂಬಾರದು, ಚಿಂತಿಸಲೂಬಾರದು.[15] ದೈನ್ಯವಿಲ್ಲದೆ ಜೀವಿಸಬೇಕು.[16]

ಪೃಥ್ವಿಯಲ್ಲಿ ಧನಧಾನ್ಯಸಂಪತ್ತಿಗೆ ಮಿತಿಯಿದೆ. ಇರುವಷ್ಟೂ ಬೆಳೆಯುವಷ್ಟೂ ಎಲ್ಲಾ ಜೀವಿಗಳ ಜೀವನಕ್ಕೆ ನಾಕಾಗಬೇಕು—ಅದನ್ನು ಬಿಟ್ಟರೆ ಇನ್ನಿಷ್ಟಿಲ್ಲ. ಅದುದ ರಿಂದ ಜೀವನಸಂಪತ್ತಿಯು ಜೀವರಾಶಿಗಳಿಗೆಲ್ಲ ವಿಭಕ್ತವಾಗಿ ವಿನಿಯೋಗವಾಗ ಬೇಕಾದುದು ಸಾಮೂಹಿಕ ಜೀವನನಿರ್ವಾಹದ ಕ್ರಮವು. ನಿಪುಣರೂ ಚತುರರೂ ಅದೃಷ್ಟಶಾಲಿಗಳೂ ಆದ ಕೆಲವರು ಕೊನೆಮೊದಲೇ ಇಲ್ಲದ ದುರ್ದಾಹಕ್ಕೊಳಗಾಗಿ ಅತಿಯಾಗಿ ಸಂಗ್ರಹವನ್ನು ಮಾಡುತ್ತಾ ಹೋದರೆ ಅಷ್ಟೂ ಅಷ್ಟು ಮೂಢರೂ ಹೀನರೂ ದುರದೃಷ್ಟದವರೂ ಆದ ಜೀವಿಗಳ ಜೀವಿಕೆಯನ್ನು ಅಪಹರಿಸಿಕೊಂಡಂತಾ

---

8 ಯಾಚನೆಯು, ಮಾಡುವವನಿಗೆ ಮರಣಪ್ರಾಯವೂ ಕೊಡುವವನಿಗೆ ಪೀಡಾದಾಯಕವೂ ಆದುದರಿಂದ ಮೃತವು (ಭೈಕ್ಷ್ಯವು)

9 ಉಳುವಾಗಲೂ ಅಗೆಯುವಾಗಲೂ ಭೂಮಿಗತವಾದ ಪ್ರಾಣಿಸಮೂಹಗಳಿಗೆ ವಿನಾಶವಾಗುವುದರಿಂದಲೂ (ಎಲ್ಲಾ ಕೃಷಿಕಾರ್ಯಗಳಿಂದಲೂ ಎತ್ತು ಕ್ರಿಮಿ ಸಸ್ಯ ಮುಂತಾದವುಗಳಿಗೆ ಹಿಂಸೆಯಾಗುವುದರಿಂದಲೂ) ಕೃಷಿಯು ಪ್ರಮೃತವು.

10 ವಾಣಿಜ್ಯವು ಸತ್ಯಾನೃತಮಿಶ್ರವಾದುದರಿಂದ ಸತ್ಯಾನೃತವು.

11 ಸೇವೆಯು ಶ್ವವೃತ್ತಿಯು. (ನಾಯಿಯ ಬಾಳು.)

12 ಋತಾಮೃತಾಭ್ಯಾಂ ಜೀವೇತ್ತು ಮೃತೇನ ಪ್ರಮೃತೇನ ವಾ। ಸತ್ಯಾನೃತಾಭ್ಯಾಮಿತಿವಾ ನ ಶ್ವವೃತ್ತ್ಯಾ ಕದಾಚನ ॥೪॥ ಋತಮುಂಛಶಿಲಂ ಜ್ಞೇಯಮಮೃತಂ ಸ್ಯಾದಯಾಚಿತಂ। ಮೃತಂ ತು ಯಾಚಿತಂ ಭೈಕ್ಷ್ಯಂ ಪ್ರಮೃತಂ ಕರ್ಷಣಂ ಸ್ಮೃತಂ ॥೫॥ ಸತ್ಯಾನೃತಂ ತು ವಾಣಿಜ್ಯಂ ತೇನ ಚೈವಾಪಿ ಜೀವ್ಯತೇ। ಸೇವಾ ಶ್ವವೃತ್ತಿರಾಖ್ಯಾತಾ ತಸ್ಮಾತ್ತಾಂ ಪರಿವರ್ಜಯೇತ್ ॥೬॥ ಮ-iv ॥

13 ನ ಲೋಕವೃತ್ತಂ ವರ್ತೇತ ವೃತ್ತಿಹೇತೋಃ ಕಥಂಚನ ॥ ಮ-iv-೧೧॥

14 ನೇಹೇತಾರ್ಥಾನ್ ಪ್ರಸಂಗೇನ ನ ವಿರುದ್ಧೇನ ಕರ್ಮಣಾ। ನ ವಿದ್ಯಮಾನೇಷ್ವರ್ಥೇಷು ನಾರ್ತ್ಯಾಮಪಿ ಯತಸ್ತತಃ ॥ ಮ-iv-೧೫॥

15 ನ ಪರದ್ರೋಹಕರ್ಮಧೀಃ ॥ ಮ-iv-೧೭೭॥

16 ವಿನಾ ದೈನ್ಯೇನ ಜೀವನಂ ॥ ಇತಿಸ್ಮರಣಾತ್॥

ಗುವುದು. ಪ್ರಕೃತಿಯು ಸೃಷ್ಟಿಗೆಲ್ಲಕ್ಕೂ ಮಾಡಿಟ್ಟುದನ್ನು ಅಪಹರಿಸಿ "ದೇವರು ಕೊಟ್ಟರೂ ಪೂಜಾರಿ ಕೊಡ" ಎಂಬ ನ್ಯಾಯದಂತೆ ಸಂಗ್ರಹಿಸುವುದು ನಿಂದಿತವು. ಲೋಕಹಿತೈಷಿಗಳೂ ದೂರದರ್ಶಿಗಳೂ ಆದ ಮಹರ್ಷಿಗಳು ಜೀವಲೋಕಕ್ಕೇ ಹಾನಿಕರವಾದ ಅತಿಸಂಗ್ರಹವನ್ನು ನಿಷಿದ್ಧಮಾಡಿ ಮಿತಿಯನ್ನೂ, ಮಿತಿಮೀರಿದ ಸಂಗ್ರಹಕ್ಕೆ ವಿನಿಯೋಗವನ್ನೂ ನೇಮಿಸಿದ್ದಾರೆ:—ತನ್ನ ತನ್ನವರ ದೇಹರಕ್ಷಣೆಗೂ ಭೃತ್ಯರ ಭರಣಕ್ಕೂ ಪಂಚಮಹಾಯಜ್ಞಾದಿ ನಿತ್ಯಕರ್ಮಗಳಿಗೂ ಬೇಕಾದಷ್ಟನ್ನು ಸಂಗ್ರಹಿಸಬೇಕೆಂದು ಹೇಳಿ ಹೆಚ್ಚು ಸಂಗ್ರಹಕ್ಕೆ ನಿಯಮವನ್ನು ಹೇಳಿದ್ದಾರೆ. ಸಂಗ್ರಹಕಾರರನ್ನು ಕುಶೂಲಧಾನ್ಯರೆಂದೂ ಕುಂಭೀಧಾನ್ಯರೆಂದೂ ತ್ರ್ಯಾಹಿಕರೆಂದೂ ಅಶ್ವಸ್ತನರೆಂದೂ ವಿಂಗಡಿಸಿದ್ದಾರೆ.[17] ತನ್ನ ತನ್ನವರ ಜೀವನಕ್ಕೂ ನಿತ್ಯ ನೈಮಿತ್ತಿಕ ಧರ್ಮಕಾರ್ಯಗಳಿಗೂ ಮೂರು ವರ್ಷಕ್ಕೆ ಸಾಕಾಗುವಷ್ಟು ಧಾನ್ಯಾದಿಗಳನ್ನು ಶೇಖರಿಸಿಟ್ಟುಕೊಳ್ಳುವವನು **ಕುಶೂಲಧಾನ್ಯನು(ಕುಸೂಲಧಾನ್ಯಕನು)**[18]—ಕುಶೂಲವೆಂದರೆ, ಕಣಜವು.[19] ಒಂದು ವರ್ಷಕ್ಕಾಗುವಷ್ಟನ್ನು ಶೇಖರಿಸಿದವನು **ಕುಂಭೀಧಾನ್ಯನು (ಕುಂಭೀಧಾನ್ಯಕನು)**.[20] (ಕುಂಭೀ ಎಂದರೆ ಒಂಟೆಯ ಮರಿಯಷ್ಟು ಪ್ರಮಾಣದ ಮಣ್ಣಿನ ಪಾತ್ರೆ, ಓಡೆ.) ಮೂರು ದಿವಸಕ್ಕಾಗುವಷ್ಟಿರುವವನು **ತ್ರ್ಯಾಹಿಕ (ತ್ರ್ಯಹೈಹಿಕ)**ನು.[21] ನಾಳೆಗೂ ಸಹ ಇಡದ ಹಾಗೆ ಆಯಾ ದಿವಸಕ್ಕೆ ತಕ್ಕಷ್ಟು ಇರುವವನು **ಅಶ್ವಸ್ತನನು(ಅಶ್ವಸ್ತನಿಕನು)**.[22] ವಿಜ್ಞಾನೇಶ್ವರರು ಮಿತಾಕ್ಷರದಲ್ಲಿ ಇನ್ನೂ ಹ್ರಸ್ವಮಾಡಿದ್ದಾರೆ. ಕುಶೂಲಧಾನ್ಯ, ಕುಂಭೀಧಾನ್ಯ, ತ್ರ್ಯಾಹಿಕ, ಅಶ್ವಸ್ತನ, ಶಿಲೋಂಛಜೀವಿ ಇವರುಗಳಲ್ಲಿ ಮೊದಮೊದಲು ಹೇಳಿದವರಿಗಿಂತಲೂ ಆಮೇಲಾಮೇಲೆ ಹೇಳಿದವರು ಶ್ರೇಷ್ಠರು; ಅಂದರೆ ಶಿಲೋಂಛವೃತ್ತಿಯವನೇ ಸರ್ವೋತ್ತಮನು.[23] ಈರೀತಿಯಾಗಿ ಸಂಗ್ರಹಕ್ಕೆಕಾಲ ಮತ್ತು ಪರಿಮಾಣದ ಪರಮಾವಧಿಯನ್ನು ವಿಧಿಸಿ ಪರಮಾವಧಿ ಅಥವಾ ಅದಕ್ಕಧಿಕವಾಗಿ ಸಂಗ್ರಹವಾದರೆ ಆಗ ಕಾಮ್ಯಸೋಮ

---

17 ಕುಶೂಲಕುಂಭೀಧಾನ್ಯೋವಾ ತ್ರ್ಯಾಹಿಕೋಽಶ್ವಸ್ತನೋಽಪಿ ವಾ ॥ಯಾ.i-೧೨೮॥

18 ನಿತ್ಯನೈಮಿತ್ತಿಕಧರ್ಮಕೃತ್ಯವೋಷ್ಯವರ್ಗಸಹಿತಸ್ಯಗೃಹಿಣಃ ಯಾವತಾ ಧಾನ್ಯಾದಿಧನೇನ ವರ್ಷತ್ರಯಂ ಸಮಧಿಕಂ ನಿರ್ವಾಹೋ ಭವತಿ ತಾವದ್ಧನಃ ಕುಸೂಲಧಾನ್ಯ(ಕ) ಉಚ್ಯತೇ ॥ಕುಲ್ಲೂಕಃ-ಮ iv-೭॥

19 ಕುಸೂಲೋವ್ರೀಹ್ಯಾಗಾರಂ ಸ್ಯಾತ್ ॥ಇತ್ಯಾಭಿಧಾನಿಕಾಃ॥

20 ವರ್ಷನಿರ್ವಾಹೋಚಿತಧಾನ್ಯಾಧಿಧನಃ ಕುಂಭೀಧಾನ್ಯಕಃ ॥ಕುಲ್ಲೂಕಃ॥

21 ತ್ರ್ಯಹಪರ್ಯಾಪ್ತಮೈಹಿಕಂ (ಈಹಾ ಚೇಷ್ಟಾ ತಸ್ಯಾಂ ಭವಂ ಐಹಿಕಂ) ಧನಂ ಯಸ್ಯ ಸಃ ತ್ರ್ಯಹೈಹಿಕಃ। ದಿನತ್ರಯ ನಿರ್ವಾಹೋಚಿತಧನಇತ್ಯರ್ಥಃ ॥ಕುಲ್ಲೂಕಃ॥

22 ಶ್ವೋಭವಂ ಶ್ವಸ್ತನಂ ಭಕ್ತಂ ತದಸ್ಯಾಸ್ತೀತಿ ಶ್ವಸ್ತನಃ, ನ ಶ್ವಸ್ತನೋ ಅಶ್ವಸ್ತನಃ ॥ ಕುಲ್ಲೂಕಃ॥

23 ಕುಶೂ(ಸೂ)ಲಕುಂಭೀಧಾನ್ಯೋವಾ ತ್ರ್ಯಾಹಿಕೋಽಶ್ವಸ್ತನೋಽಪಿ ವಾ। ಜೀವೇದ್ವಾಪಿ ಶಿಲೋಂಛೇನ ಶ್ರೇಯಾನೇಷಾಂ ಪರಃಪರಃ ॥ಯಾ-ii-೧೨೮॥

ಯೋಗವನ್ನು ಮಾಡಿ ಹೆಚ್ಚು ಸಂಗ್ರಹವನ್ನು ವಿನಿಯೋಗಮಾಡಬೇಕೆಂದು ಹೇಳಿದ್ದಾರೆ.[24] ಉಕ್ತವಾದ ಪರಮಾವಧಿಯನ್ನು ಮೀರದೆ ಅಷ್ಟರೊಳಗೆ ಸಂಗ್ರಹವಾದಷ್ಟಕ್ಕೇ ಸಂತೋಷಪಡಬೇಕು, ಸಂತುಷ್ಟಿಯೇ ಸುಖಕ್ಕೆ ಮೂಲವು, ಅಸಂತುಷ್ಟಿಯು ದುಃಖಕ್ಕೆ ಕಾರಣವು ಸಂತುಷ್ಟಿಯೇ ಸರ್ವೋತ್ತಮವಾದ ಶೇಖರವು.[25] ಅಸಂತುಷ್ಟನು ನಾಶವಾಗುವನು.[26]

---

24 ಯಸ್ಯ ತ್ರೈವಾರ್ಷಿಕಂ ಭಕ್ತಂ ಪರ್ಯಾಪ್ತಂ ಭೃತ್ಯವೃತ್ತಯೇ । ಅಧಿಕಂ ವಾಪಿ ವಿದ್ಯೇತ ಸ ಸೋಮಂ ಪಾತುಮರ್ಹತಿ ॥ ಮ-xi-೭॥

25 ಸಂತೋಷಂ ಪರಮಾಸ್ಥಾಯ ಸುಖಾರ್ಥೀ ಸಂಯತೋ ಭವೇತ್ ॥ ಸಂತೋಷಮೂಲಂ ಹಿ ಸುಖಂ ದುಃಖಮೂಲಂ ವಿಪರ್ಯಯಃ ॥ ಮ-iv-೧೨॥

26 ಅಸಂತುಷ್ಟೋ ದ್ವಿಜೋ ನಷ್ಟಃ ॥ ಇತಿಸ್ಮರಣಾತ್॥

# ೫ನೆಯ ಪ್ರಕರಣ—ದಾನ

## ೧. ದಾನದ ಲಕ್ಷಣ

ದಾನವೆಂದರೆ ದಾತನು ದಾನಮಾಡುವ ಸ್ವತ್ತಿನಮೇಲೆ ತನಗಿರುವ ಸ್ವತ್ವವನ್ನು ನಿವೃತ್ತಿಮಾಡಿ ಅದರಮೇಲೆ ಪ್ರತಿಗೃಹೀತನ ಸ್ವತ್ವವನ್ನು ಉತ್ಪಾದನ ಮಾಡುವ ಕ್ರಿಯೆಯು.[1] ಸಂನ್ಯಾಸಿಯು ಆಶ್ರಮವನ್ನು ಸ್ವೀಕರಿಸುವಾಗ ತನ್ನ ವಿಶಿಷ್ಟ ಸ್ವತ್ತುಗಳ ಮೇಲೆಯೂ ತನಗಿರುವ ಸ್ವತ್ವವನ್ನು ತ್ಯಾಗಮಾಡುತ್ತಾನೆ. ಅದರಲ್ಲಿ ಸ್ವತ್ವ ನಿವೃತ್ತಿಯಾದರೂ ಪರಸ್ವೋತ್ಪಾದನವಿಲ್ಲದ್ದರಿಂದ ಅದು ದಾನವಲ್ಲ. ಮದುವೆ ಮಾಡಿಕೊಂಡು ಮನೆಗೆ ಕರೆತಂದ ನೂತನ ವಧುವಿಗೆ ಕುಟುಂಬದ ಸ್ವತ್ತುಗಳನ್ನು ನಿರ್ದೇಶಿಸಿ ಇದೆಲ್ಲವೂ ನಿನ್ನದು ಎಂದು ಹೇಳಿದರೆ ಆ ಸತ್ತುಗಳ ಮೇಲೆ ಅಧಿಕಾರವಿಲ್ಲದಿದ್ದ ಆಕೆಗೆ ಅಧಿಕಾರವನ್ನು ಕಲ್ಪಿಸಿದುದಾಗುತ್ತದೆ, ಹಾಗೆ ಮಾಡಿದ ಮಾತ್ರದಿಂದ ಅದು ದಾನವಲ್ಲ, ಆ ಕಾರ್ಯದಲ್ಲಿ ಪೂರ್ವಸ್ವಾಮಿಯ ಸ್ವತ್ವವು ನಿವೃತ್ತವಾಗುವುದಿಲ್ಲ. ಪೂರ್ವಸ್ವಾಮಿಯ ಸ್ವತ್ವವು ನಿವೃತ್ತಿಯಾಗಲೂಬೇಕು, ಪರಸ್ವಾಮಿಯ ಸ್ವತ್ವವು ಉತ್ಪಾದಿತವಾಗಲೂ ಬೇಕು, ಎರಡೂ ಆದರೇ ದಾನವು. ಅದರಿಂದಲೇ ದಾನವನ್ನು ಮಾಡುವಾಗ "ತುಭ್ಯಮಹಂ ಸಂಪ್ರದದೇ, ನಮಮ"—ಇದನ್ನು ನಿನಗೆ ಕೊಡುತ್ತೇನೆ, ನನ್ನದಲ್ಲ. ಎಂದು ಹೇಳುವ ವೈದಿಕಸಂಪ್ರದಾಯ. ನಾವು ನಿತ್ಯವೂ ಆಡುವ ಮಾತಿನಲ್ಲೇ ಈ ಸಂಪ್ರದಾಯದ ಅರ್ಥವು ವ್ಯಕ್ತವಾಗಿದೆ ಕೊಡುವವನು "ಕೊಟ್ಟುಬಿಟ್ಟೆ" ಎನ್ನುವುದೂ ತೆಗೆದುಕೊಳ್ಳುವವನು "ತೆಗೆದುಕೊಂಡೆ" ಎನ್ನುವುದೂ ಅಂಥಾ ಮಾತುಗಳು

ದಾನವು ದಾತನ ಐಚ್ಛಿಕ ಕ್ರಿಯೆಯು ಇಚ್ಛೆಯು ಸಂಕಲ್ಪಾತ್ಮಕವಾದುದು. ಸಂಕಲ್ಪವು ಮಾನಸಿಕ ಕ್ರಿಯೆಯು. ಮಾನಸಿಕ ಕ್ರಿಯೆಯು ತಾನಾಗಿ ನಡೆಯಬೇಕು, ಅಂದರೆ ದಾತನಿಗೆ ಇಚ್ಛಾಸ್ವಾತಂತ್ರ್ಯವಿರಬೇಕು. ಹಾಗೆಯೇ ಸಮರ್ಪಣವನ್ನು ಮಾಡಲು ಅವನಿಗೆ ಅರ್ಹತೆಯೂ ಇರಬೇಕು. ಇಚ್ಛೆಯು ಅಸ್ವತಂತ್ರವಾದರೂ ದಾತನಿಗೆ ಅರ್ಹತೆಯಿಲ್ಲದಿದ್ದರೂ ದಾನವು ಸಿದ್ಧಿಸುವುದಿಲ್ಲ. **ಭಯ**ದಿಂದಾಗಲೀ, **ಕ್ರೋಧ**ದಿಂದಾಗಲೀ, **ಶೋಕ**ದಿಂದಾಗಲೀ, **ಲಂಚ**(ಉತ್ಕೋಚ)ವೆಂದಾಗಲೀ, **ಪರಿಹಾಸ**ಕ್ಕಾಗಲೀ, **ವ್ಯತ್ಯಾಸ**ವಾಗಿಯಾಗಲೀ, **ಹಠ**(**ಛಲ**)ದಿಂದಾಗಲೀ ಕೊಡುವುದು ದಾನವಲ್ಲ. ಈ ಏಳು ಪ್ರಕಾರಗಳಲ್ಲಿ ಇಚ್ಛೆಯು ಸ್ವತಂತ್ರವಲ್ಲ. (ಹೊಡೆಯುತ್ತಾರೆ ಹಿಡಿದುಕೊಂಡು ಹೋಗುತ್ತಾರೆಂದು ಹೆದರಿ ಶುಲ್ಕವನ್ನು ಕೊಡುವುದು

---

1 ಸ್ವತ್ವನಿವೃತ್ತಿಪೂರ್ವಕಪರಸ್ವೋಪಾದಾನಂ ದಾನಂ॥ ಸ್ವತ್ವ means ownership.

**ಭಯ**ಕ್ಕೂ, ಪುತ್ರಾದಿಗಳ ಮೇಲಣ ವೈರವನ್ನು ಸಾಧಿಸಿ ಕೊಡುವುದು **ಕ್ರೋಧ**ಕ್ಕೂ, ಪುತ್ರವಿಯೋಗಾದಿ ನಿಮಿತ್ತವಾದ ಶೋಕದಿಂದ ಕೊಡುವುದು **ಶೋಕ**ಕ್ಕೂ, ತನ್ನ ಕಾರ್ಯಕ್ಕೆ ಪ್ರತಿಬಂಧಕವನ್ನು ಮಾಡದಿರಲೆಂದು ಅಧಿಕಾರಿಗಳಿಗೆ ಕೊಡುವುದು **ಉತ್ಕೋಚ(ಅಂದರೆ ಲಂಚ)**ಕ್ಕೂ, ಕುಚೋದ್ಯಕ್ಕಾಗಿ ಕೊಡುವುದು **ಪರಿಹಾಸ**ಕ್ಕೂ, ಯಾವುದನ್ನೋ ಕೊಡಬೇಕೆಂದು ಮತ್ತೊಂದನ್ನೂ, ಯಾರಿಗೋ ಎಂದು ಮತ್ತೊಬ್ಬನಿಗೂ, ಯಾರದನ್ನೋ ತನ್ನದೆಂದೂ ಭ್ರಾಂತಿಯಿಂದ ಕೊಡುವುದು **ವ್ಯತ್ಯಾಸ**ಕ್ಕೂ, ನೂರನ್ನು ಕೊಡುತ್ತೇನೆಂದು ಸಂಕಲ್ಪಮಾಡಿ ಸಾವಿರವೆಂದು ಹೇಳಿ ಕೊಡುವುದು **ಛಲ**ಕ್ಕೂ, ಉದಾಹರಣೆಗಳು **ಬಾಲಕನೂ, ಮೂಢನೂ, ಅಸ್ವತಂತ್ರನೂ, ರೋಗಿಯೂ, ಮತ್ತನೂ, ಉನ್ಮತ್ತನೂ,** ಈ ಆರು ಜನರೂ ದಾನ ಮಾಡಲು ಅರ್ಹರಲ್ಲ ಹದಿನಾರು, ಈಗ ಹದಿನೆಂಟು, ವರ್ಷಗಳು ತುಂಬದಿದ್ದರೆ ಬಾಲಕನು, ಲೋಕರೀತಿಯನ್ನರಿಯದವನು ಮೂಢನು, ಪುತ್ರದಾಸಾದಿಗಳು ಅಸ್ವತಂತ್ರರು, ರೋಗದಿಂದ ನರಳುವವನು ಆರ್ತನು, ಮಾದಕಗಳಿಂದ ಬುದ್ಧಿ ವ್ಯತ್ಯಾಸವಾದವನು ಮತ್ತನು, ಹುಚ್ಚು ಹಿಡಿದವನು ಉನ್ಮತ್ತನು. ಇವರು ಮಾಡಿದ ದಾನವೂ ಸಿದ್ಧಿಸುವುದಿಲ್ಲ ಇವನಿಂದ ನನಗೆ ಈ ಪ್ರತ್ಯುಪಕಾರವಾಗುತ್ತದೆಂಬ ಆಶೋತ್ತರದಿಂದ ಕೊಟ್ಟಿದೂ ದಾನವಲ್ಲ, ಏಕೆಂದರೆ ದಾನಕ್ಕೆ ಪ್ರತಿಲಾಭೇಚ್ಛೆಯಿರಬಾರದು, ಇದ್ದರೆ ಸಂಕಲ್ಪವು ಕಲುಷಿತವಾಗುವುದು ಸತ್ಪಾತ್ರನೆಂದು ಭ್ರಾಂತಿಯನ್ನು ಹುಟ್ಟಿಸಿದ ಅಪಾತ್ರನಿಗೆ ಕೊಟ್ಟಿದೂ ದಾನವಲ್ಲ, ಇದರಲ್ಲೂ ಇಚ್ಛೆಯು ಭ್ರಾಂತಿ ದೂಷಿತವಾಗುವುದು. ಯಜ್ಞಾರ್ಥವಾಗಿ ಎಂದು ದಾನವನ್ನು ಪಡೆದು ಧನವನ್ನು ಜೂಜಾಡುವುದು ಮುಂತಾದ ದುರ್ವಿನಿಯೋಗಮಾಡುವವನಿಗೆ ಕೊಟ್ಟಿದೂ ದಾನವಲ್ಲ, ಏಕೆಂದರೆ ದಾನದ ಉದ್ದೇಶವು ಫಲಿಸದೆ ಅಕಾರ್ಯಕ್ಕೆ ಸಹಾಯಮಾಡಿದ ಹಾಗಾಗುವುದು, ಇದೂ ಭ್ರಾಂತಿದೂಷಿತವೇ. ಹೀಗೆ ಅದತ್ತವು ಹದಿನಾರು ವಿಧವಾದುದು.[2] ಅದತ್ತವನ್ನು ಹಿಂದಕ್ಕೆ ಪಡೆಯಬಹುದು.

---

2 ದತ್ತಂ ಸಪ್ತವಿಧಂ ಪ್ರೋಕ್ತಂ ಅದತ್ತಂ ಷೋಡಶಾತ್ಮಕಂ॥ (ಅದತ್ತಸ್ಯ ಸ್ವರೂಪಂತು) —ಅದತ್ತಂ ತು ಭಯಕ್ರೋಧಶೋಕವೇಗರುಗನ್ವಿತೈಃ। ತಥೋತ್ಕೋಚಪರೀಹಾಸವ್ಯತ್ಯಾಸಚ್ಛಲಯೋಗತಃ॥ ಬಾಲಮೂಢಾಸ್ವತಂತ್ರಾರ್ತಮತ್ತೋನ್ಮತ್ತಾಪವರ್ಜಿತಂ। ಕರ್ತಾ ಮಮಾಯಂ ಕರ್ಮೇತಿ ಪ್ರತಿಲಾಭೇಚ್ಛಯಾ ಚ ಯತ್॥ ಅಪಾತ್ರೇ ಪಾತ್ರಮಿತ್ಯುಕ್ತೇ ಕಾರ್ಯೇ ವಾ ಧರ್ಮಸಂಹಿತೇ। ಯದ್ದತ್ತಂ ಸ್ಯಾದವಿಜ್ಞಾನಾದದತ್ತಮಿತಿ ತತ್ಸ್ಮೃತಂ॥ ನಾರದಃ॥ ॥ಅತ್ರ ಮಿತಾಕ್ಷರಾ॥ ಅಯಮರ್ಥಃ—ಭಯೇನ ಬಂದಿಗ್ರಾಹಾದಿಭ್ಯೋ ದತ್ತಂ, ಕ್ರೋಧೇನ ಪುತ್ರಾದಿಭ್ಯೋ ವೈರನಿರ್ಯಾತನಾಯಾನ್ಯಸ್ಮೈ ದತ್ತಂ, ಪುತ್ರವಿಯೋಗಾದಿನಿಮಿತ್ತಶೋಕಾವೇಶೇನ ದತ್ತಂ, ಉತ್ಕೋಚೇನ ಕಾರ್ಯಪ್ರತಿಬಂಧನಿರಾಸಾರ್ಥಮಧಿಕೃತೇಭ್ಯೋ ದತ್ತಂ, ಪರಿಹಾಸೇನೋಪಹಾಸೇನ ದತ್ತಂ, ಏಕಃ ಸ್ವಂ ದ್ರವ್ಯಮನ್ಯಸ್ಮೈ ದದಾತ್ಯನ್ಯೋಽಪಿ ತಸ್ಮೈ ದದಾತೀತಿ ದಾನವ್ಯತ್ಯಾಸಃ, ಛಲಯೋಗತಃ ಶತದಾನಮಭಿಸಂಧಾಯ ಸಹಸ್ರಮಿತಿ

ಇದಕ್ಕೆ **ಅಪವಾದ**[3]ವೂ ಇದೆ. ಅದತ್ತಪ್ರತ್ಯಾಹರಣ ನಿಯಮಗಳು ಧಾರ್ಮಿಕಕ್ಕೆ ಅನ್ವಯಿಸುವುದಿಲ್ಲ.[4] ಆರ್ತರು ಶಾಂತಿಗೂ ರೋಗಿಗಳು ರೋಗ ಶಮನಕ್ಕೂ ಪಾಪಿಗಳು ಪಾಪಕ್ಷಯಕ್ಕೂ ಆಸ್ತಿಕರು ಪುಣ್ಯಕ್ಕೂ ಶ್ರದ್ಧಾಳುಗಳು ಈಶ್ವರಪ್ರೀತಿಗೂ ದಾನವನ್ನು ಮಾಡುವುದಕ್ಕೆ ಅವಕಾಶವು ಬೇಕು. ಇಲ್ಲದಿದ್ದರೆ ಯಾರೂ ಧರ್ಮವನ್ನು ಮಾಡುವಹಾಗೂ ಇಲ್ಲ, ಹಿಂತಿರುಗಿಸಬೇಕಾಗಬಹುದೆಂದು ಯಾರೂ ಪ್ರತಿಗ್ರಹ ಮಾಡುವುದೂ ಇಲ್ಲ. ಧರ್ಮಾಚರಣೆಗೆ ಧರ್ಮವೇ ಪ್ರತಿಬಂಧಕ ವಾಗುವುದು ಅಸಂಗತವು. ಮೂಲ್ಯವೂ ವೇತನವೂ ಪಾರಿತೋಷಕವೂ ಸ್ನೇಹ ದಿಂದ ಕೊಡುವುದೂ ಪ್ರತ್ಯುಪಕಾರಾರ್ಥವಾಗಿ ಕೊಡುವುದೂ ಕನ್ಯಾಶುಲ್ಕವೂ ಅನು ಗ್ರಹಿಸಿ ಕೊಡುವುದೂ, ಏಳೂ ದತ್ತವೇ, ಅದತ್ತವಲ್ಲ.[5] "ಸ್ವಂದೇಯಂ"[6]—ತನ್ನ ಸ್ವತ್ತನ್ನು ಕೊಡಬೇಕು ಎಂದಿರುವುದರಿಂದ ತನ್ನದಲ್ಲದ್ದನ್ನು ಕೊಡಬಾರದೆಂದು ವ್ಯತಿರೇಕನ್ಯಾಯ[7]ದಿಂದ ಸಿದ್ಧಾಂತವಾಯಿತು. ಆದರಿಂದ ತನ್ನ ವಶದಲ್ಲಿದ್ದರೂ ಪತ್ನೀ ಮುಂತಾದವರ ಸ್ತ್ರೀಧನವನ್ನೂ ಎರವು ತಂದುದನ್ನೂ ಗಿರವಿ ಇಟ್ಟಿದನ್ನೂ ಸಂಸೃಷ್ಟಸ್ವವನ್ನೂ ಠೇವಣಿಯನ್ನೂ ದಾನಮಾಡಬಾರದು, ಅದತ್ತವಾಗುತ್ತದೆ.[8]

---

ಪರಿಭಾಷ್ಯ ದದಾತಿ, ಬಾಲೇನಾಪ್ರಾಪ್ತಷೋಡಶವರ್ಷೇಣ (ಅಧುನಾತುಅಪ್ರಾಪ್ತಾಷ್ಟಾದಶ ವರ್ಷೇಣ), ಮೂಢೇನ ಲೋಕವ್ಯವಹಾರಾನಭಿಜ್ಞೇನ, ಅಸ್ವತಂತ್ರೇಣ ಪುತ್ರದಾಸಾದಿನಾ, ಆರ್ತೇನ ರೋಗಾಭಿಭೂತೇನ, ಮತ್ತೇನ ಮದನೀಯಮತ್ತೇನ, ಉನ್ಮತ್ತೇನ ವಾತಿಕಾದ್ಯು ನ್ಮಾದಗ್ರಸ್ತೇನ, ಅಪವರ್ಜಿತಂದತ್ತಂ, ಯಥಾಯಂ ಮದೀಯಂ ಕರ್ಮಕರಿಷ್ಯತೀತಿ, ಪ್ರತಿಲಾಭೇಚ್ಛಯಾ ದತ್ತಂ, ಅಚತುರ್ವೇದಾಯ ಚತುರ್ವೇದೋಽಹಮಿತ್ಯುಕ್ತವತೇ ದತ್ತಂ, ಯಜ್ಞಂ ಕರಿಷ್ಯಾಮೀತಿ ಧನಂ ಲಬ್ಧ್ವಾ ದ್ಯೂತಾದೌ ವಿನಿಯುಂಜ್ಯಮಾನಾಯ ದತ್ತಂ, ಇತ್ಯೇವಂ ಷೋಡಶಪ್ರಕಾರಮಪಿದತ್ತಮದತ್ತಮಿತ್ಯುಚ್ಯತೇ । ಪ್ರತ್ಯಾಹರಣೀಯತ್ವಾತ್ ॥ ಮಿತಾಕ್ಷರಾ-ಯಾ-ii-೧೭೬॥

3 Exception.

4 ಆರ್ತದತ್ತಸ್ಯ ಅದತ್ತತ್ವಂ ಧರ್ಮಕಾರ್ಯವ್ಯತಿರಿಕ್ತಂ ॥ಯಾ-ii-೧೭೬-ಮಿತಾಕ್ಷರ॥

5 ಪಣ್ಯಮೂಲ್ಯಂ ಭೃತಿಸ್ತುಷ್ಟ್ಯಾ ಸ್ನೇಹಾತ್ಪ್ರತ್ಯುಪಕಾರತಃ । ಸ್ತ್ರೀಶುಲ್ಕಾನುಗ್ರಹಾ ರ್ಥಂ ಚ ದತ್ತಂ ದಾನವಿದೋಽವಿದುಃ ॥ನಾರದಃ॥ ಇತ್ಯತ್ರ ಮಿತಾಕ್ಷರೇ-ಅಯಮರ್ಥಃ । ಪಣ್ಯಸ್ಯ ಕ್ರೀತದ್ರವ್ಯಸ್ಯ ಯನ್ಮೂಲ್ಯಂ ದತ್ತಂ, ಭೃತಿರ್ವೇತನಂ ಯತ್ಕೃತಕರ್ಮಣೇ ದತ್ತಂ, ತುಷ್ಟ್ಯಾ ಬಂದಿಚಾರಣೇಭ್ಯೋ ದತ್ತಂ, ಸ್ನೇಹಾದ್ದುಹಿತೃಪುತ್ರಾದಿಭ್ಯೋ ದತ್ತಂ, ಪ್ರತ್ಯುಪ ಕಾರತಃ ಉಪಕಾರಕೃತೇ ಪ್ರತ್ಯುಪಕಾರರೂಪೇಣ ದತ್ತಂ, ಸ್ತ್ರೀಶುಲ್ಕಂ ಪರಿಣಯನಾರ್ಥಂ ಕನ್ಯಾಜ್ಞಾತಿಭ್ಯೋ ದತ್ತಂ, ಯಚ್ಚ ಅನುಗ್ರಹಾರ್ಥಂ ದತ್ತಂ, ತದೇತತ್ಸಪ್ತವಿಧಮಪಿದತ್ತ ಮೇವ ॥

6 ಸ್ವಂಕುಟುಂಬಾವಿರೋಧೇನ ದೇಯಂ ॥ಯಾ-ii-೧೭೫॥ 7 conversely.

8 ಸ್ವಂ ದದ್ಯಾದಿತ್ಯನೇನ ಚಾಸ್ವಭೂತಾನಾಂ ಅನ್ವಾಹಿತಯಾಚಿತಕಾಧಿಸಾಧಾರಣ ನಿಕ್ಷೇಪಾಣಾಂ ಪಂಚಾನಾಮಪ್ಯದೇಯತ್ವಂ ವ್ಯತಿರೇಕೇಣದರ್ಶಿತಂ ॥ಯಾ-ii-೧೭೫-ಮಿತಾ ಕ್ಷರ ॥

ಪತ್ತಾಪಹಾರವು ನಿಷಿದ್ಧವು[9] ದೇಶ ಕಾಲ ಪಾತ್ರ ವಸ್ತು ವಿಮರ್ಶೆಯಿಂದಲೂ ಶ್ರದ್ಧೆಯಿಂದಲೂ ಅದತ್ತವಾಗದಂತೆ ಕೊಡುವುದೇ ದಾನದ ಲಕ್ಷಣವೆಂಬುದು ಸಂಗ್ರಹವು[10]

## ೨. ದಾನದ ವೈವಿಧ್ಯ

ದಾನವು ಧರ್ಮಕಾರ್ಯವಾದುದರಿಂದ ಶ್ರದ್ಧೆಯಿಂದಲೂ[11] ಸಂತೋಷ ದಿಂದಲೂ ನಡೆಯಬೇಕು.[12] ಅಶ್ರದ್ಧೆಯಿಂದ ಮಾಡಿದುದು ಅಸತ್ಕಾರ್ಯವಾಗು ವುದು.[13] ನನಗೆ ಯಥೇಚ್ಛವಾಗಿದೆ, ಎಷ್ಟು ವ್ಯಯಮಾಡಿದರೂ ಸವೆಯುವುದಿಲ್ಲ, ದಾಸದಾಸಿಯರೂ ಅಪಹರಿಸುತ್ತಿದ್ದಾರೆ, ಇವರೂ ಹೊತ್ತುಕೊಂಡು ಹೋಗಲಿ, ಎಂದು ಧನಮದದಿಂದ ಕೊಡುವುದು ತಾಮಸವು.[14] ಸಮಾನಸ್ಕಂಧರು ಕೊಡು ತ್ತಾರೆ, ಕೊಡದಿದ್ದರೆ ಹೀನಾಯ, ಎಂದು ಕೊಡುವುದು ರಾಜಸವು[15] ಋತ್ವಿ ಕ್ಪುರೋಹಿತಾಚಾರ್ಯರಿಗೆ ಉಕ್ತವಾದುದನ್ನು ಕೊಡಲೇಬೇಕು, ಕೊಡದಿದ್ದರೆ ಹಾನಿಯಾಗುತ್ತೆ, ಎಂದು ಪಾಪಭೀತಿಯಿಂದ ಕೊಡುವುದು ಸಾತ್ವಿಕವು.[16] ದೇಶ ಕಾಲ ಪಾತ್ರ ವಿಶೇಷವನ್ನರಿತು ಕೊಡಬೇಕು.[17]

---

9 ದತ್ತಾನ್ನಾಪಹರೇತ್ಪುನಃ ॥ಯಾ-II-೧೭೬॥

10 ದೇಶೇಕಾಲಉಪಾಯೇನ ದ್ರವ್ಯಂ ಶ್ರದ್ಧಾಸಮನ್ವಿತಂ । ಪಾತ್ರೇ ಪ್ರದೀಯತೇ ಯತ್ತತ್ಸಕಲಂ ಧರ್ಮಲಕ್ಷಣಂ॥ಯಾ-i-೬॥ ಉಪಾಯಃ ಶಾಸ್ತ್ರೋಕ್ತೇತಿಕರ್ತವ್ಯತಾಕಲಾಪಃ॥ ಮಿತಾಕ್ಷರ॥

11 ದಾತವ್ಯಂ ಪ್ರತ್ಯಹಂ ಪಾತ್ರೇ ನಿಮಿತ್ತೇಷು ವಿಶೇಷತಃ। ಯಾಚಿತೇನಾಪಿ ದಾತವ್ಯಂ ಶ್ರದ್ಧಾಪೂರ್ವಂ ತು ಶಕ್ತಿತಃ ॥ಯಾ-i-೨೦೩॥ ಶ್ರದ್ಧಯಾ ದೇಯಂ ॥ತೈ.ಉ..ಶಿಕ್ಷಾ॥

12 ದಾನಧರ್ಮಂ ನಿಷೇವೇತ(ನಿತ್ಯಮೈಷ್ಟಿಕಪೌರ್ತಿಕಂ)। ಪರಿತುಷ್ಟೇನ ಭಾವೇನ ॥ಮ- iv-೨೨೭॥

13 ಅಶ್ರದ್ಧಯಾಽದೇಯಂ ॥ತೈ. ಉ.ಶಿಕ್ಷಾ॥ ಅಶ್ರದ್ಧಯಾ ಹುತಂ ದತ್ತಂ. .ಅಸದಿ ತ್ಯುಚ್ಯತೇ ॥ಭ ಗೀ.॥

14 ಶ್ರಿಯಾಽದೇಯಂ ॥ತೈ.ಉ-ಶಿಕ್ಷಾ॥ ಧನಬಾಹುಲ್ಯಾಚ್ಛ್ರೀಮಮವಿದ್ಯತೇ ತತ್ರ ದಾಸಾದಾಸ್ಯಶ್ಚ ಯಥಾ ಧನಮಪಹರನ್ತಿ ತಥಾ ಬ್ರಾಹ್ಮಣೈರಪ್ಯಪಹ್ರಿಯತಾಮಿತ್ಯೇವಮವ ಜಾನಾನಃ ಶ್ರಿಯಾ ಯದ್ದಾನಂ ಕರೋತಿ ತತ್ತಾಮಸಂ ॥ಭಾಷ್ಯ॥

15 ಹ್ರಿಯಾಽದೇಯಂ ॥ತೈ.ಉ-ಶಿಕ್ಷಾ॥ ಮತ್ಸಮಾಃ ದಾನಂ ಕುರ್ವನ್ತಿ ಮಮತ್ವ ದಾನೇನ ಮಹತೀ ಲಜ್ಜೇತ್ಯೇವಂ ಲಜ್ಜಯಾ ನಿಮಿತ್ತಭೂತಯಾ ಯದ್ದದಾತಿ ತದ್ರಾಜಸಂ ॥ ಭಾಷ್ಯ ॥

16 ಭಿಯಾದೇಯಂ ॥ತೈ.ಉ.ಶಿಕ್ಷಾ॥ ಋತ್ವಿಗಾದಿಭ್ಯೋ ಯದ್ದಾನಂ ಶಾಸ್ತ್ರೇಣ ವಿಹಿತಂ ತಸ್ಯಾದಾನೇನ ಮಮಪ್ರತ್ಯವಾಯಸ್ಸ್ಯಾದಿತಿ ಭೀತ್ಯಾ ಯದ್ದಾನಂ ತತ್ಸಾತ್ವಿಕಂ ॥ ಭಾಷ್ಯ ॥ 17 ಸಂವಿದಾದೇಯಂ ॥ತೈ.ಉ-ಶಿಕ್ಷಾ॥ ಸಂವಿದ್ದೇಶಕಾಲಪಾತ್ರವಿಶೇಷ ಜ್ಞಾನಂ ॥ಭಾಷ್ಯ॥

## ೩. ದಾನಮೀಮಾಂಸೆ

ದಾನಶೀಲನಾಗಬೇಕು. ಸತ್ಪಾತ್ರರಿಗೆ ಸದಾಕಾಲವೂ, ವಿಶೇಷವಾಗಿ ಗ್ರಹಣಾದಿ ಕಾಲ ನಿಮಿತ್ತವಾಗಿಯೂ ಕ್ಷೇತ್ರಾದಿ ದೇಶ ನಿಮಿತ್ತವಾಗಿಯೂ ಯಾಚಕರು ಯಾಚಿಸಿದಾಗಲೂ ದಾನಮಾಡಬೇಕು.[18] ಯಜ್ಞಾಂಗವಾಗಿಯೂ ಧರ್ಮಕಾರ್ಯಾಂಗವಾಗಿಯೂ ದಾನಮಾಡಬೇಕು.[19] ಒಬ್ಬರಿಗೆ ಕೊಡುತ್ತೇವೆಂದು ವಾಗ್ದಾನಮಾಡಿದುದನ್ನು ಮತ್ತೊಬ್ಬರಿಗೆ ಕೊಡಬಾರದು.[20] ವಾಗ್ದಾನವಪಡೆದವನು ಅಧರ್ಮಿಷ್ಠನಾದರೆ ಕೊಡುವುದನ್ನು ನಿಲ್ಲಿಸಬೇಕು.[21] ಶಕ್ತಿಗನುಸಾರವಾಗಿ ದಾನಮಾಡಬೇಕು. ಅತಿದಾನಿಯಾಗಬಾರದು, ಕರ್ಣನು ಅತಿದಾನದಿಂದ ಹತನಾದನು.[22] ದಾನಕ್ಕೆ ಮಿತಿಯೂ ಇರಬೇಕು. ತನ್ನ ಕುಟುಂಬಪೋಷಣೆಗೆ ತೊಂದರೆಯಾಗದಹಾಗೂ ಕುಟುಂಬದವರಿಗೆ ವಿರೋಧವಾಗದಹಾಗೂ ದಾನಮಾಡಬೇಕು.[23] ಏಕೆಂದರೆ ವೃದ್ಧರಾದ ತಂದೆತಾಯಿಯನ್ನೂ, ಸಾಧ್ವಿಯಾದ ಹೆಂಡತಿಯನ್ನೂ, ಶಿಶುವಾದ ಮಗನನ್ನೂ, (ಮಗಳನ್ನೂ ಸಂತತಿಯವರನ್ನೂ,) ನೂರು ಅಕಾರ್ಯವನ್ನಾದರೂ ಮಾಡಿ ಪೋಷಣೆ ಮಾಡಬೇಕೆಂದು ಮನುವಚನವಿದೆ.[24] ಸಂತತಿಯವರಿಗೆ ಮಾಡಬೇಕಾದ ಸಂಸ್ಕಾರಗಳನ್ನು ಮಾಡಿ ಅವರ ಜೀವನಕ್ಕೆ ಸರಿಯಾದ ಮಾರ್ಗವನ್ನು ಮಾಡಿಡಬೇಕೆಂದೂ ವಚನವಿದೆ.[25] ಇದ್ದುದನ್ನೂ ಕಳೆದು ಜೀವನಕ್ಕೇ ಇಲ್ಲದಹಾಗೆ ಮಾಡುವುದು ಅನುಚಿತವು.

---

18 ದಾತವ್ಯಂ ಪ್ರತ್ಯಹಂ ಪಾತ್ರೇ ನಿಮಿತ್ತೇಷು ವಿಶೇಷತಃ। ಯಾಚಿತೇನಾಪಿ ದಾತವ್ಯಂ ಶ್ರದ್ಧಾಪೂರ್ವಂ ಸ್ವಶಕ್ತಿತಃ ॥ಯಾ-i-೨೦೩॥

19 ದಾನಧರ್ಮಂ ನಿಶೇವೇತ ನಿತ್ಯಮೈಷ್ಟಿಕಪೌರ್ತಿಕಂ। ಪರಿತುಷ್ಟೇನ ಭಾವೇನ ಪಾತ್ರಮಾಸಾದ್ಯ ಶಕ್ತಿತಃ ॥ಮ-iv-೨೨೭॥

20 (ನ ದಾತವ್ಯಂ) ಯಚ್ಚಾನ್ಯಸ್ಮೈ ಪ್ರತಿಶ್ರುತಂ ॥೧೭೫॥ ದೇಯಂ ಪ್ರತಿಶ್ರುತಂ ಚೈವ ॥೧೭೬॥ ಯಾ-ii ॥

21 ಪ್ರತಿಶ್ರುತ್ಯಾಪ್ಯಧರ್ಮಸಂಯುಕ್ತಾಯ ನ ದದ್ಯಾತ್ ॥ಗೌತಮಃ॥

22 ಮೇಲಿನ 1, 2ನೇ ವಾಕ್ಯಗಳಲ್ಲಿ ಸ್ವಶಕ್ತಿತಃ, ಶಕ್ತಿತಃ, ಎಂದಿರುವುದನ್ನು ಗಮನಿಸಬೇಕು. ಅತಿದಾನೀಹತಃ ಕರ್ಣಃ ॥(ನೀತಿ)॥ ನಾನ್ವಯೇ ಸತಿ ಸರ್ವಸ್ವಂ (ದೇಯಂ) ॥ ಯಾ-ii-೧೭೫॥

23 ಸ್ವಂ ಕುಟುಂಬಾವಿರೋಧೇನ ದೇಯಂ ॥ಯಾ-ii-೧೭೫॥

24 ವೃದ್ಧೌ ಚ ಮಾತಾಪಿತರೌ ಸಾಧ್ವೀ ಭಾರ್ಯಾ ಸುತಶ್ಶಿಶುಃ। ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್ ॥ಮ-xi-೧೦ (a)॥

25 ಪುತ್ರಾನುತ್ಪಾದ್ಯ ಸಂಸ್ಕೃತ್ಯ ವೃತ್ತಿಂ ಚೈಷಾಂ ಪ್ರಕಲ್ಪಯೇತ್ ॥ ವಿಜ್ಞಾನೇಶ್ವರೀಯಮಿತಾಕ್ಷರಾಯಾಂ,-ಯಾ-ii-೧೭೫॥

## ೪. ಪ್ರತಿಗ್ರಹಮೀಮಾಂಸೆ

ದಾನವೆಂದಮೇಲೆ ಪ್ರತಿಗ್ರಹವೂ ನಡೆಯಬೇಕು ಆದರೆ ದಾನದಂತೆ ಪ್ರತಿಗ್ರಹವೂ ಧರ್ಮವೆಂದು ಭಾವಿಸಬಾರದು. ಪ್ರತಿಗ್ರಹ ಮಾಡಲು ಸಮರ್ಥನಾದವನು ಪ್ರತಿಗ್ರಹ ಮಾಡದಿದ್ದರೆ ದಾನಿಗೆ ಉಕ್ತವಾದ ಪುಣ್ಯಕ್ಕೆ ಭಾಗಿಯಾಗುತ್ತಾನೆ.[26] ಅಂದರೆ ದಾನಮಾಡುವುದೂ ಪ್ರತಿಗ್ರಹಮಾಡದಿರುವುದೂ ಎರಡೂ ಸಮವಾಯಿತು. ಪ್ರತಿಗ್ರಹವು ನಡೆದರೆ ನಿಷ್ಕಾಮವಾಗಿಯೇ ಇರಬೇಕು. ಇವರು ಕೊಡುತ್ತಾರೆ ನನಗೆ ಸಿಗುತ್ತದೆ ಎಂಬ ಆಷೋತ್ತರದಿಂದ ಕೈಒಡ್ಡಬಾರದು. ಆಶೆಯಿಂದ ನನಗಿಲ್ಲ—ಬೇಕು, ಅವನಿಗಿದೆ—ಕೊಡಲಿ, ಅವನು ಪುಣ್ಯವಂತ—ನಾನು ಬಡವ, ಅವನು ಮೇಲು—ನಾನು ಕೀಳು, ಇತ್ಯಾದಿಯು ಕೀಳುಭಾವನೆಯಾಗುತ್ತದೆ. ಪ್ರತಿಗ್ರಹವು ಸರ್ವಾತ್ಮನಾವರ್ಜ್ಯವೇ ಅಂದರೆ ಹಾಗೂ ಅಲ್ಲ. ನಿತ್ಯಕರ್ಮ, ಅತಿಥಿಸತ್ಕಾರ, ಕುಟುಂಬಪೋಷಣೆ ಮುಂತಾದವುಗಳಿಗಾಗಿ ಪ್ರತಿಗ್ರಹವನ್ನು ಮಾಡಬಹುದು.[27]



26 ಪ್ರತಿಗ್ರಹಸಮರ್ಥೋಽಪಿ ನಾದತ್ತೇ ಯಃ ಪ್ರತಿಗ್ರಹಮ್ । ಯೇ ಲೋಕಾ ದಾನಶೀಲಾನಾಂ ಸ ತಾನಾಪ್ನೋತಿ ಪುಷ್ಕಲಾನ್ ॥ಯಾ-೧-೨೧೩॥ (ಸ್ವಕಾರ್ಯಧುರೀಣರಾದ ಧೂರ್ತರು ತಿಳಿಯದವರನ್ನು ಮರುಳುಮಾಡಿ ದಾನವಿಧಿಯನ್ನು ಕಲ್ಪಿಸಿದ್ದಾರೆಂದಾಕ್ಷೇಪಿಸುವವರು ಇದನ್ನು ಗಮನಿಸಬೇಕು.)

27 ದೇವಾತಿಥ್ಯರ್ಚನಕೃತೇ ಗುರುಭೃತ್ಯಾರ್ಥಮೇವ ವಾ । ಸರ್ವತಃ ಪ್ರತಿಗೃಹ್ಣೀಯಾದಾತ್ಮವೃತ್ತ್ಯರ್ಥಮೇವ ವಾ ॥ಯಾ-೧-೨೧೬॥ ಗುರವೋ ಮಾತಾಪಿತ್ರಾದಯಃ । ಭೃತ್ಯಾಃ ಭರಣೀಯಾ ಭಾರ್ಯಾಪುತ್ರಾದಯಃ ॥ಮಿತಾಕ್ಷರಾ॥

# ೩ನೆಯ ಪ್ರಕರಣ—ಶುದ್ಧಿ

## ೧. ಶುದ್ಧಿಲಕ್ಷಣ

ಶುದ್ಧಿಯೆಂದರೆ ನೈರ್ಮಲ್ಯ, ಶೌಚವೆಂದೂ ಅನ್ನುತ್ತಾರೆ. ಕೊಳೆಯಾಗದೆ ಇರುವುದು ಸಾಧ್ಯವಲ್ಲ. ಪ್ರಕೃತಿನಿಯಮದಿಂದಲೂ ಶ್ರಮಪಡುವುದರಿಂದಲೂ ಮಲಿನವಸ್ತುಸಂಪರ್ಕದಿಂದಲೂ ಕಶ್ಮಲವು ಪ್ರಾಪ್ತವಾಗುತ್ತಲೇ ಇರುತ್ತದೆ. ಪ್ರಾಪ್ತವಾದುದನ್ನು ಪರಿಹರಿಸುತ್ತಾ ಇರಬೇಕು. ಪರಿಹರಿಸುವುದಕ್ಕೆ ಶುದ್ಧೀಕರಣ, ನಿರ್ಮಲೀಕರಣ, ಎಂದು ಹೆಸರು. ಪ್ರಾಪ್ತವಾದುದನ್ನು ನಿವಾರಿಸುವುದಷ್ಟೇ ಅಲ್ಲ, ಸಾಧ್ಯವಾದಷ್ಟು ಮಾಲಿನ್ಯವು ಪ್ರಾಪ್ತವಾಗದಂತೆ ನೋಡಿಕೊಳ್ಳಲೂಬೇಕು. ದುಷ್ಟರ ಸಂಗದಿಂದಲೂ ದುರಾಲೋಚನೆಯಿಂದಲೂ ಅಂತಃಕರಣವು ಮಲಿನವಾಗುವುದು. ಅಭಕ್ಷ್ಯಗಳನ್ನು ಸೇವಿಸುವುದರಿಂದ ಶರೀರದ ಒಳಗಿನ ಕೋಶಾದಿಗಳು ಮಲಿನವಾಗುವುವು. ದುರಾಚಾರದಿಂದ ದೇಹವೂ ಅಂತಃಕರಣವೂ ಮಲಿನವಾಗುವುವು. ಆದರಿಂದ ದುಷ್ಟರ ಸಂಗ ಮಾಡದೆ ದುರಾಲೋಚನೆಗೆ ಅವಕಾಶ ಕೊಡದೆ ಅಭಕ್ಷ್ಯಗಳನ್ನು ಭಕ್ಷಿಸದೆ ಆಚಾರವಂತರಾಗಿರಬೇಕು[1] ನಾವೂ ಶುದ್ಧರಾಗಿರಬೇಕು; ನಮ್ಮವಸ್ತ್ರಗಳೂ ವಸ್ತುಗಳೂ ಮನೆಯೂ ನೆರೆಹೊರೆಯೂ,ನಾವುತಿರುಗುವ ದಾರಿಯೂ ಇರುವ ಊರೂ, ನಮ್ಮ ಊರಿನ ಬಾವಿಕೆರೆಕಟ್ಟೆಕೊಳಹೊಳೆಗಳೂ, ನಮ್ಮ ದನಕರುಗಳೂ ಕಟ್ಟುವ ಕೊಟ್ಟಿಗೆಯೂ ಮೇಯಿಸುವ ಕಾವಲೂ, ನಮ್ಮ ಹುಡುಗರಾಡುವ ಮೈದಾನವೂ, ಒಟ್ಟಿನಲ್ಲಿ ನಾವಿರುವ ವಾತಾವರಣವೆಲ್ಲವೂ ಶುಚಿಯಾಗಿರಬೇಕು. ನಾವು ಶುಚಿಯಾಗಿರಬೇಕೆಂದರೆ ನಮ್ಮ ದೇಹ ಮಾತ್ರವೆಂದಲ್ಲ, ಅಂತಃಕರಣವೂ ಪರಿಶುದ್ಧವಾಗಿರಬೇಕು. ಮನಸ್ಸು ಬುದ್ಧಿ ಚಿತ್ತ ಅಹಂಕಾರ ಎಂಬೀ ನಾಲ್ಕು ಅಂತಃಕರಣಗಳು.[2] ಮನಸ್ಸು ಬುದ್ಧಿ ಅಹಂಕಾರ ಮೂರೇ ಅಂತಃಕರಣವೆಂದೂ ಒಂದು ಮತ.[3] ಕಾಮಕ್ರೋಧಗಳು ಅಂತಃಕರಣದ ಕಶ್ಮಲ; ಅದರಿಂದಲೇ ಗೀತೆಯಲ್ಲಿ ಇವನ್ನು ಕನ್ನಡಿಯ ಮೇಲಣ ಕೊಳೆಗೆ ಹೋಲಿಸಿದೆ.[4] ಈ ಕಶ್ಮಲವನ್ನು ಪರಿಹರಿಸು

---

1 ಅಭಕ್ಷ್ಯಪರಿಹಾರಶ್ಚ ಸಂಸರ್ಗಶ್ಚಾಪ್ಯನಿಂದಿತೈಃ । ಆಚಾರೇಷು ವ್ಯವಸ್ಥಾನು ಶೌಚಮಿತ್ಯಭಿಧೀಯತೇ ॥ಅತ್ರಿ॥

2 ಮನೋಬುದ್ಧಿರಹಂಕಾರಶ್ಚಿತ್ತಂ ಕರಣಮಾಂತರಂ ॥ವೇದಾಂತಿನಃ॥

3 ಅಂತಃಕರಣಂ ತ್ರಿವಿಧಂ । ಬುದ್ಧ್ಯಹಂಕಾರಮನಾಂಸಿ ॥ಸಂಖ್ಯಾ॥

4 ಯಥಾಽಽದರ್ಶೋ ಮಲೇನ ಚ ॥ ......ತಥಾ ತೇನೇದಮಾವೃತಂ ॥ (ತೇನ ಕಾಮಕ್ರೋಧೇನ ಇದಂ ಜ್ಞಾನಮಾವೃತಂ) ॥ಭ.ಗೀ.॥

ವುದೇ ಆಭ್ಯಂತರ ಶೌಚವು. ಇದಕ್ಕೆ ಭಾವಶುದ್ಧಿಯೆಂದು ಹೆಸರು. ದೇಹವೂ ದೇಹದ ರಕ್ಷಣ ಪೋಷಣೆಗಳಿಗೆ ಅವಶ್ಯವಾದ ವಸ್ತುವಸ್ತ್ರಗೃಹಗ್ರಾಮಾದಿಗಳೆಲ್ಲವೂ ಬಾಹ್ಯವು. ಅವೂ ಶುಚಿಯಾಗಿರಬೇಕು. ಅದಕ್ಕೆ ಬಾಹ್ಯಶೌಚವೆಂದು ಹೆಸರು. ಇದು ಮಣ್ಣು ನೀರು ಮುಂತಾದ ಶೋಧಕಗಳಿಂದ ಸಾಧಿತವಾಗುವುದು. ಹೀಗೆ ಶೌಚವು ಬಾಹ್ಯವೆಂದೂ ಆಭ್ಯಂತರವೆಂದೂ ಎರಡು ವಿಧವಾದುದು.[5] ಬಾಹ್ಯವನ್ನು ಕಾಯಶುದ್ಧಿ, ದ್ರವ್ಯ[6] ಶುದ್ಧಿ, ಗೃಹಶುದ್ಧಿ ಗ್ರಾಮನೈರ್ಮಲ್ಯ, ಎಂದು ನಾಲ್ಕಾಗಿ ವಿಂಗಡಿಸಬಹುದು ಅಶೌಚವೆಂಬುದು ಮತ್ತೊಂದು ಪ್ರಕಾರದ ಅಶುಚಿಯು. ಇದು ಕೊಳೆಯಲ್ಲ. ವಂಶದಲ್ಲಿ, ಕೆಲವು ತಲೆಮಾರೊಳಗೆ, ಯಾರಾದರೂ ಜನಿಸಿದರೂ ಮೃತರಾದರೂ ನಿಯಮವಾದ ಕಾಲಪರ್ಯಂತವಾಗಿರುವ ಕರ್ಮಕ್ಕೆ ಅಧಿಕಾರವಿಲ್ಲದ ಅವಸ್ಥೆ–ಇದನ್ನು ಜಾತಾಶೌಚ ಮೃತಾಶೌಚವೆನ್ನುತ್ತಾರೆ. ಉಕ್ತಕಾಲವು ಕಳೆದರೆ ಇದು ಪರಿಹಾರವಾಗುವುದು.

## ೨. ಶೋಧಕದ್ರವ್ಯ

ನಾಗರಿಕತೆಯು ದಿನೇ ದಿನೇ ಹೊಸ ಹೊಸ ರೂಪವನ್ನು ತಾಳುತ್ತಿದೆ; ಹೊಸ ಹೊಸದಾದ ನಿರ್ಮಲೀಕರಣ ವಿಧಾನಗಳೂ ಸಾಮಗ್ರಿಗಳೂ ಹೊರಬೀಳುತ್ತಿವೆ. ನಾವೂ ದೇಶಕಾಲವರ್ತಮಾನಾನುಗುಣವಾಗಿ ನವೀನ ಶೋಧನವಸ್ತು ವಿಧಾನಗಳನ್ನು ಬಳಸುತ್ತಿದ್ದೇವೆ. ಆದರೂ ಎಷ್ಟೋ ಸಂಬಂಧಪಟ್ಟ ಪೂರ್ವಾಚಾರಗಳೂ ಪ್ರಚಾರದಲ್ಲಿದ್ದೇ ಇವೆ, ಅವು ಸುಗಮವೂ ಆಗಿವೆ. ಅದರಿಂದ ಅವನ್ನು ವಿಮರ್ಶಿಸುವುದು; ನವೀನಗಳು ವರ್ಜ್ಯವೆಂದಾಗಲೀ ಪ್ರಾಚೀನಗಳೇ ಗ್ರಾಹ್ಯವೆಂದಾಗಲೀ ವಿಮರ್ಶೆಯ ಪ್ರಕೃತವಲ್ಲ. ಋಷಿಗಳೂ ಕೂಡ ಹೇಳಿದಹಾಗೆಯೇ ನಡೆಯಬೇಕು, ಸ್ವಲ್ಪ ವ್ಯತ್ಯಾಸವೂ ಆಗಕೂಡದು, ಎಂದೂ ಹೇಳಿಲ್ಲ. ಶುದ್ಧಿಯೇ ಸಾಧ್ಯವೆಂಬುದನ್ನು ಮರೆಯದೆ, ಸಮಯ ಸಂದರ್ಭಾನುಸಾರವಾಗಿ, ನಿಯಮಗಳನ್ನು ರೂಪಿಸಿಕೊಂಡು ಶೌಚವನ್ನು ಸಾಧಿಸಬೇಕೆಂದು ವ್ಯಕ್ತವಾಗಿಯೇ ಹೇಳಿದ್ದಾರೆ. ದೇಶ, ಕಾಲ, ತಾನು ತನ್ನ ಸ್ವಭಾವ, (ಶೋಧಕ)ದ್ರವ್ಯ, ದ್ರವ್ಯದ ಪ್ರಯೋಜನ, ದ್ರವ್ಯದ ಸೌಲಭ್ಯ, ವಯಸ್ಸು ಅವಸ್ಥೆ ಇವುಗಳಿಗೆ ತಕ್ಕಹಾಗೆ ಶೌಚವನ್ನು ಕಲ್ಪಿಸಿಕೊಳ್ಳಬೇಕು,[7] ಎಂದು ವಚನವೇ ಇದೆ ಸಂಕುಚಿತ ಭಾವನೆಗೆ ಅವಕಾಶವೇ ಇಲ್ಲ.

---

5 ಶೌಚಂ ತು ದ್ವಿವಿಧಂ ಪ್ರೋಕ್ತಂ ಬಾಹ್ಯಮಾಭ್ಯನ್ತರಂ ತಥಾ । ಮೃಜ್ಜಲಾಭ್ಯಾಂ ಸ್ಮೃತಂ ಬಾಹ್ಯಂ ಭಾವಶುದ್ಧಿಸ್ತಥಾನ್ತರಂ ॥ದಕ್ಷಃ॥

6 ದ್ರವ್ಯವೆಂದರೆ ಪದಾರ್ಥ.

7 ದೇಶಂ ಕಾಲಂ ತಥಾತ್ಮಾನಂ ದ್ರವ್ಯಂ ದ್ರವ್ಯಪ್ರಯೋಜನಂ । ಉಪಪತ್ತಿಮವಸ್ಥಾಂ ಚ ಜ್ಞಾತ್ವಾ ಶೌಚಂ ಪ್ರಕಲ್ಪಯೇತ್ ॥ಬೋಧಾಯನಃ॥

ಶುದ್ಧಿಗೆ ತಾರತಮ್ಯಕ್ಕನುಗುಣವಾಗಿ ಶೋಧಕಗಳೂ ಉಕ್ತವಾಗಿವೆ:—ಜ್ಞಾನ, ತಪಸ್ಸು, ಕರ್ಮ, ಪಶ್ಚಾತ್ತಾಪ, ಆಹಾರ, ನಿರಾಹಾರ, ಮಣ್ಣು, ನೀರು, ಅಗ್ನಿ, ಸೂರ್ಯ(ರಶ್ಮಿ), ವಾಯು, ಕಾಲ, ಮನಸ್ಸು, ಉಪಲೇಪನ, ಇತ್ಯಾದಿಗಳು[8] ಇವನ್ನೇಕೆ ಹೇಳಿದ್ದಾರೆಂಬುದಕ್ಕೆ ಇಲ್ಲಿ ಒಂದೊಂದುದಾಹರಣೆಯೇ ಸಾಕು.(ವಿಸ್ತಾರವು ಮುಂದೆ ತಿಳಿಯುವುದು):—**ಜ್ಞಾನವು** ಬುದ್ಧಿಗೂ,[9] **ತಪಸ್ಸು** ವೇದಜ್ಞನಿಗೂ,[10] ಅಶ್ವಮೇಧ**ಕರ್ಮವು** ಮಹಾಪಾತಕಕ್ಕೂ,[11] **ಪಶ್ಚಾತ್ತಾಪವು** ರಹಸ್ಯವಾಗಿ ಮಾಡಿದ ಪಾಪಕ್ಕೂ,[12] ಒಂದು ತಿಂಗಳು ಹಾಲನ್ನೇ **ಆಹಾರವಾಗಿ** ಸೇವಿಸಿದರೆ ಉಪಪಾತಕಕ್ಕೂ,[13] ತ್ರಿರಾತ್ರಿಯ **ಉಪವಾಸವು**[14] (ಅಘಮರ್ಷಣಜಪವೂ) ಮಹಾಪಾತಕಕ್ಕೂ, **ಮಣ್ಣು ನೀರು**[15] ಶರೀರಾವಯವಗಳಿಗೂ ಉಪಕರಣಗಳಿಗೂ, **ಅಗ್ನಿಯು** ಮಣ್ಣಿನ ಪಾತ್ರೆಗಳಿಗೂ,[16] **ಸೂರ್ಯ**(ರಶ್ಮಿಯೂ) **ವಾಯುವೂ**[17] ಮಾರ್ಗಕ್ಕೂ, **ಕಾಲವು** ಆಶೌಚಕ್ಕೂ,[18] **ಮನಸ್ಸು** ಸತ್ಕಾರ್ಯವನ್ನು ತೋರಿಸುವುದಕ್ಕೂ,[19] **ಉಪಲೇಪನವು** ಗೃಹಶುದ್ಧಿಗೂ,[20] ಶೋಧಕಗಳು. ಇತರ ಶೋಧಕಗಳನ್ನು ಆಯಾ ಪ್ರಕರಣದಲ್ಲಿ ಸೂಚಿಸಲಾಗುವುದು

## ೩. ಅಂತಶ್ಶುದ್ಧಿ (ಭಾವಶುದ್ಧಿ)

ಅಂತಶ್ಶುದ್ಧಿಯು ಪ್ರಧಾನವಾದುದು. ದೇಹವು ಸ್ಥೂಲವಾದುದು, ಕಾಣಿಸುವುದು, ಕೈಗೆ ಸಿಗುವುದು, ಅದರ ಮಾಲಿನ್ಯವೂ ಗೊತ್ತಾಗುವುದು. ಅದನ್ನು ಶೋಧಿಸುವುದು ಸರಾಗವು. ಅಂತಃಕರಣವು ಅಂಥಾದ್ದಲ್ಲ, ಸೂಕ್ಷ್ಮವಾದುದು, ಕಣ್ಣಿಗೆ

---

8 ಕಾಲೋಽಗ್ನಿಃ ಕರ್ಮ ಮೃದ್ವಾಯುರ್ಮನೋ ಜ್ಞಾನಂ ತಪೋ ಜಲಮ್। ಪಶ್ಚಾತ್ತಾಪೋ ನಿರಾಹಾರಸ್ಸರ್ವೇಽಮೀ ಶುದ್ಧಿಹೇತವಃ ॥ಯಾ-iii-೩೧॥ ಜ್ಞಾನಂ ತಪೋಽಗ್ನಿರಾಹಾರೋ ಮೃನ್ಮನೋ ವಾರ್ಯುಪಾಂಜನಮ್। ವಾಯುಃ ಕರ್ಮಾರ್ಕಕಾಲೌ ಚ ಶುದ್ಧೇಃ ಕರ್ತ್ರೂಣಿ ದೇಹಿನಾಮ್ ॥ಮ.iv-೧೦೫॥ 9 ಬುದ್ಧಿರ್ಜ್ಞಾನೇನ ಶುಧ್ಯತಿ ॥ಮ-v-೧೦೯॥

10 ತಪಸಾ ವೇದವಿತ್ತಮಃ ॥ಮ-v-೧೦೭॥

11 ತಥಾಶ್ವಮೇಧಾವಭೃತಸ್ನಾನಾದ್ವಾ ಶುದ್ಧಿಮಾಪ್ನುಯಾತ್ ॥ಯಾ-iii-೨೪೪॥

12 ಖ್ಯಾಪನೇನಾನುತಾಪೇನ ॥ಮ-xi-೨೨೭॥

13 ಪಯಸಾ ವಾ ಪಿ ಮಾಸೇನ ॥ (ಉಪಪಾತಕಶುದ್ಧಿಃ) ॥ಯಾ-iii-೨೬೫॥

14 ತ್ರಿರಾತ್ರೋಪೋಷಿತೋ ಜಪ್ತ್ವಾ ಬ್ರಹ್ಮಹಾ ತ್ವಘಮರ್ಷಣಮ್ ॥ಯಾ-iii-೩೦೧॥

15 ಮೃತ್ತೋಯೈಶ್ಶುಧ್ಯತೇ ಶೋಧ್ಯಂ ॥ಮ-v-೧೦೮॥

16 ಪುನಃಪಾಕೇನ ಮೃಣ್ಮಯಂ ॥ಮ-v-೧೨೨॥

17 ಪಂಥಾನಶ್ಚ ವಿಶುಧ್ಯಂತಿ ಸೋಮಸೂರ್ಯಾಂಶುಮಾರುತೈಃ ॥ಯಾ-i-೧೯೪॥

18 ಶುಧ್ಯೇದ್ವಿಪ್ರೋ ದಶಾಹೇನ ॥ಮ v-೮೩॥

19 ಮನಃಪೂತಂ ಸಮಾಚರೇತ್ ॥ಮ-vi-೪೬॥

20 ಮಾರ್ಜನೋಪಾಂಜನೈರ್ವೇಶ್ಮ ॥ಮ-v-೧೨೨॥

ಕಾಣಿಸುವುದಿಲ್ಲ, ಕೈಗೆ ಸಿಗುವುದಿಲ್ಲ. ತ್ವಕ್ಕು ಚಕ್ಷುಸ್ಸು ಶ್ರೋತ್ರ ಜಿಹ್ವೆ ಆಘ್ರಾಣ ವೆಂಬ ಜ್ಞಾನೇಂದ್ರಿಯಗಳು ಚರ್ಮ ಕಣ್ಣು ಕಿವಿ ನಾಲಿಗೆ ಮೂಗುಗಳೆಂಬ ಅಂಗ ಗಳಿಗೆ ಸಂಬಂಧಪಟ್ಟವೇ ಆದರೂ ಅವಕ್ಕೆ ಪೃಥಕ್ಕಾದವು, ಅಗೋಚರಗಳು. ಮನಸ್ಸು ಸಂಕಲ್ಪವಿಕಲ್ಪಾತ್ಮಕವಾದುದು, ಅದು ಬೇಕಿದುಬೇಕೆಂದು ಅಪೇಕ್ಷಿಸುತ್ತದೆ, ಸಿಗುತ್ತೋ ಇಲ್ಲವೋ ಎಂದು ಸಂಶಯಪಡುತ್ತದೆ. ಬುದ್ಧಿಯು ನಿಶ್ಚಯಾತ್ಮಕ ವಾದುದು. ಚಿತ್ತವು ಸ್ಮೃತ್ಯಾತ್ಮಕವಾದುದು. ಅಹಂಕಾರವು ಅಭಿಮಾನಾತ್ಮಕವು.[1] ಒಂದಕ್ಕಿಂತ ಒಂದು ಸೂಕ್ಷ್ಮತರಗಳು[2] ಇಂದ್ರಿಯಗಳೂ ಮನಸ್ಸೂ ಬುದ್ಧಿಯೂ ಕಾಮಕ್ಕೆ ನೆಲೆ[3] ಮನಸ್ಸಿನ ಸಂಕಲ್ಪ[4] ದಿಂದಲೂ ಬುದ್ಧಿಯ ಅಧ್ಯವಸಾಯ[5] ದಿಂದಲೂ ಇಂದ್ರಿಯಗಳು ವಿಷಯ[6] ಗಳಲ್ಲಿ ಪ್ರವರ್ತಿಸುತ್ತವೆ. ಅಂತಃಕರಣ ಪ್ರವೃತ್ತಿಯೇ ಕಾಮ. ಕಾಮಕ್ಕೆ ಅಡ್ಡಿಯಾದರೆ ಕ್ರೋಧವಾಗಿ ಪರಿಣಮಿಸುತ್ತದೆ.[7] ಕಾಮದಿಂದ ರಾಗವೂ ಕ್ರೋಧದಿಂದ ದ್ವೇಷವೂ ಸಂಭವಿಸುವುವು. ಕಾಮಕ್ರೋಧ ಗಳೂ ರಾಗದ್ವೇಷಗಳೂ ಪಾಪಕ್ಕೆ ಮೂಲಗಳು.[8] ಇವೇ ಅಂತಃಕರಣವನ್ನು ಮಲಿನ ಮಾಡುವುವು. ಮಾಲಿನ್ಯಕ್ಕೆ ಮೂರು ವಿಧದ ಕಾರಣಗಳು :—ಒಂದು ಜನ್ಮಾಂತ್ರೀಯ, ಒಂದು ಸ್ವಯಂಕೃತ, ಒಂದು ಆಗಂತುಕ. ಜತೆಯಲ್ಲಿಯೇ ಹುಟ್ಟಿ ಬರುವುದು ಜನ್ಮಾಂತ್ರೀಯ, ನಾವಾಗಿ ಮಾಡಿಕೊಳ್ಳುವುದು ಸ್ವಯಂಕೃತ, ಹೊರಗಿನಿಂದ ಬರು ವುದು ಆಗಂತುಕ ಆದರಿಂದಲೇ ಭಗವದ್ಗೀತೆಯಲ್ಲಿ ಇದಕ್ಕೆ ಗರ್ಭದ ಜತೆಯಲ್ಲಿಯೇ ಜನಿಸುವ ಜರಾಯುವಿನ, ಅಗ್ನಿಯಿಂದಲೇ ಉದ್ಭವಿಸುವ ಹೊಗೆಯ, ಕನ್ನಡಿಗೆ ಮೆತ್ತಿದ ಹೊರಗಣ, ಆಚ್ಛಾದನಗಳಿಗೆ ಹೋಲಿಸಿರುವುದು.[9] ಈ ಕಶ್ಮಲಗಳನ್ನು ಶೋಧಕದ್ರವ್ಯಗಳಿಂದ ತೊಳೆಯುವಂತಿಲ್ಲ, ವಿಶೇಷ ಪ್ರಯತ್ನಗಳಿಂದಲೂ ಪರಿಶ್ರಮ ದಿಂದಲೂ ನಿವಾರಿಸಬೇಕು. ಹಾಗೆ ಮಾಡದೆ ಒಳಗೆ ಕಶ್ಮಲವನ್ನು ತುಂಬಿ

---

1 ಮನೋ ಬುದ್ಧಿರಹಂಕಾರಶ್ಚಿತ್ತಂ ಕರಣಮಾಂತರಂ । ಸಂಶಯೋನಿಶ್ಚಯೋಗರ್ವ ಸ್ಸ್ಮರಣಂ ವಿಷಯಾ ಇಮೇ ॥ 2 ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ । ಮನಸಸ್ತು ಪರಾಬುದ್ಧಿರ್ಯೋಬುದ್ಧೇಃ ಪರತಸ್ತು ಸಃ ॥ಭ.ಗೀ.॥

3 ಇಂದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ ॥ (ಅಸ್ಯ, ಕಾಮಸ್ಯ) ॥ಭ.ಗೀ.॥ 4 Desire concluded, will. 5 Determination ; Volition

6 Objects of senses. 7 ಕಾಮ ಏವ ಹಿ ಕೇನಚಿತ್ಪ್ರತಿಹತಃ ಕ್ರೋಧಾತ್ಮನಾ ಪರಿಣಮತೇ ॥ಶ್ರೀಧರೀಟೀಕಾ-ಭ. ಗೀ.॥

8 ಕಾಮ ಏಷಃ ಕ್ರೋಧ ಏಷ ರಜೋಗುಣಸಮುದ್ಭವಃ। ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ ॥ಭ.ಗೀ.॥ ಅಕಾಮತಃ ಕ್ರಿಯಾಃ ಕಾಶ್ಚಿದ್ದೃಶ್ಯಂತೇ ನೇಹ ಕಸ್ಯ ಚಿತ್ । ಯದ್ಯದ್ಧಿ ಕುರುತೇ ಜಂತುಸ್ತತ್ತತ್ಕಾಮಸ್ಯ ಚೇಷ್ಟಿತಂ ॥

9 ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ। ಯಥೋಲ್ಬೇನಾ ವೃತೋ ಗರ್ಭಸ್ತಥಾ ತೇನೇದಮಾವೃತಂ ॥(ಉಲ್ಬಃ-ಜರಾಯುಃ ; ಇದಂ-ಜ್ಞಾನಂ) ಭ.ಗೀ.॥

ಕೊಂಡು ಸ್ಥೂಲದೇಹವನ್ನು ಮಾತ್ರ ಶುಚಿಯಾಗಿಟ್ಟುಕೊಂಡರೆ ಪರಿಶುದ್ಧರಾಗುವುದಿಲ್ಲ, ಒಳಗೂ ಹೊರಗೂ ಪರಿಶುದ್ಧವಾಗಿರುವುದೇ ನಿಜವಾದ ಶುದ್ಧಿಯು.[10]

ಅಂತಶ್ಶುದ್ಧಿಯು ಎಷ್ಟು ಶ್ರೇಷ್ಠವೋ ಅಷ್ಟು ಕಷ್ಟಸಾಧ್ಯವು. ಇಂದ್ರಿಯಗಳು ಸ್ವಾಭಾವಿಕವಾಗಿ ವಿಷಯಗಳ ಕಡೆಗೆ ಚಲಿಸುವುವು. ವಿಷಯೋಪಭೋಗವು ದೇಹಿಯನ್ನು ಆಕರ್ಷಿಸುತ್ತದೆ. ಕಾಮವು ಉಪಭೋಗದಿಂದ ಶಮನವಾಗುವುದಿಲ್ಲ. ಉಪಭೋಗದ ಪರಿಣಾಮವು ಪಾಪೀಯಸವು. ಇಂದ್ರಿಯಗಳನ್ನು ಮೊದಲು ನಿಗ್ರಹಿಸಬೇಕು.[11] ಮನಸ್ಸು ಚಂಚಲವಾದುದು, ಒಳಗೊಳಗೇ ಸಂಕಲ್ಪವನ್ನು ಮಾಡುತ್ತಿರುತ್ತದೆ. ಅದನ್ನು ನಿಗ್ರಹಿಸುವುದು ಇನ್ನೂ ಕಷ್ಟತರವು. ಅಭ್ಯಾಸ(ಯೋಗ)ದಿಂದಲೂ ವೈರಾಗ್ಯ[12] ದಿಂದಲೂ ಅದನ್ನು ಹತೋಟಿಗೆ ತರಬೇಕು. ವಿಷಯೇಂದ್ರಿಯಸಂಯೋಗದಿಂದಾಗುವ ಭೋಗವು ತಾತ್ಕಾಲಿಕವಾದುದು, ಬರುವವರೆಗೂ ಇಲ್ಲವೆಂಬ ದುಃಖ, ಮುಗಿದಮೇಲೆ ಹೋಯಿತಲ್ಲ ಎಂಬ ದುಃಖ, ದುಃಖದಿಂದ ಜನಿಸಿ ದುಃಖದಲ್ಲಿ ಪರಿಣಮಿಸುವ ಉಪಭೋಗದ ಸುಖದಲ್ಲಿ ಆಸಕ್ತನಾಗಬಾರದೆಂಬ ನಿಶ್ಚಯಜ್ಞಾನವು ಹುಟ್ಟಬೇಕು,[13] ಜ್ಞಾನದಿಂದ ಬುದ್ಧಿಯು ಶುದ್ಧವಾಗಬೇಕು. ಈ ಪ್ರಕಾರವಾಗಿ ಪರಂಪರಾಶ್ರಯವಾದ ಜ್ಞಾನವೈರಾಗ್ಯದಿಂದಲೂ ಅಭ್ಯಾಸಯೋಗದಿಂದಲೂ ಅಂತಃಕರಣವು ಶುದ್ಧವಾಗಬೇಕು.

ಇಷ್ಟೆಲ್ಲವೂ ಆದಿಯಲ್ಲಿಯೇ ಸಾಧ್ಯವಲ್ಲ, ಕ್ರಮಕ್ರಮವಾಗಿ ಸಾಧಿಸಬೇಕು. ಮೊದಮೊದಲು ಉದ್ರೇಕಗಳನ್ನು ಉಪಶಮನ ಕ್ರಿಯೆಗಳಿಂದ ನಿವಾರಿಸಬೇಕು. ಉದ್ರೇಕವು ಮಿತಿಮೀರಿ ಅಕಾರ್ಯವು ನಡೆದೇಹೋದರೆ ಪಶ್ಚಾತ್ತಾಪದಿಂದಲೂ ಪ್ರಾಯಶ್ಚಿತ್ತಕ್ರಿಯೆಗಳಿಂದಲೂ ಅಚಾತುರ್ಯವು ಮತ್ತೆ ನಡೆಯದಂತೆ ತಡೆಗಟ್ಟಬೇಕು.[14] ಉದ್ರೇಕಶಮನಕ್ಕೆ ಕೆಲವು ಸುಗಮವಾದ ಕ್ರಿಯೆಗಳು ಉಕ್ತವಾಗಿವೆ.

---

10 ಅಶೌಚಾದ್ಧಿ ಪರಂ ಬಾಹ್ಯಂ ತಸ್ಮಾದಾಭ್ಯಂತರಂ ವರಂ। ಉಭಾಭ್ಯಾಂ ಸ್ತು ಶುಚಿರ್ಯಸ್ತು ಸ ಶುಚಿರ್ನೇತರಶ್ಶುಚಿಃ ॥(ಉಭಾಭ್ಯಾಂ-ಬಾಹ್ಯಾಂತರಾಭ್ಯಾಂ) ॥ದಕ್ಷಃ॥

11 ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ ॥(ಏನಂ-ಕಾಮಂ)……
ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ। ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ ॥ಭ.ಗೀ.॥

12 ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ। ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ॥ಭ.ಗೀ.॥ ಇಹಾಮುತ್ರಭೋಗವಿರಾಗೋ ವೈರಾಗ್ಯಃ। (ವೈರಾಗ್ಯವೆಂದರೆ ಭೋಗದಲ್ಲಿ ಅನಿಚ್ಛೆಯು.)

13 ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ। ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ಭ.ಗೀ.॥

14 ಖ್ಯಾಪನೇನಾನುತಾಪೇನ ತಪಸಾಧ್ಯಯನೇನ ಚ। ಪಾಪಕೃನ್ಮುಚ್ಯತೇ ಪಾಪಾತ್ತಥಾ ದಾನೇನ ಚಾಪದಿ ॥ಮ.೧೧-೨೨೭॥....ಪ್ರಚ್ಛನ್ನಪಾಪಾ ಜಪ್ಯೇನ ದಾನೇನಾಕಾರ್ಯಕಾರಿಣಃ ॥ಮ-೪-೦೦೭॥

ಪುಂಡರೀಕಾಕ್ಷಸ್ಮರಣೆಯಿಂದ ಬಾಹ್ಯಾಽಭ್ಯಂತರಶೌಚವು ಲಭಿಸುವುದು.[15] ಇದು ಸರ್ವರಿಗೂ ಸದಾಕಾಲದಲ್ಲಿಯೂ ಸಾಧ್ಯವಾದುದು, ಅದಕ್ಕೇನೂ ಮುಟ್ಟುವುದಿಲ್ಲ. ಶುದ್ಧಾಚಮನವು ಮತ್ತೊಂದು, ಮಹಾವಿಷ್ಣುವಿನ ನಾಮದಿಂದ ಅಭಿಮಂತ್ರಿಸಿ ಜಲ ಪ್ರಾಶನ ಮಾಡುವುದರಿಂದಲೂ ಜಲದಿಂದ ಊರ್ಧ್ವಾಂಗದ ಛಿದ್ರಾದಿಗಳನ್ನು ಸ್ಪರ್ಶ ಮಾಡುವುದರಿಂದಲೂ ದೇಹವೂ ಇಂದ್ರಿಯವೂ ಪ್ರಕೃತಿಸ್ಥವಾಗುವುವು, ಅಂತಃ ಕರಣವೂ ಶುದ್ಧವಾಗುವುದು.[16] ಈ ಕಾರ್ಯದಲ್ಲಿ ಕಂಡಹಾಗೆಯೇ ಕಾಲವಿಳಂಬ ವಾಗುವುದಷ್ಟೆ—ಅದರಿಂದ ಪ್ರಾಪ್ತವಾದ ಉದ್ರೇಕವು ತಾನಾಗಿ ಶಾಂತವಾಗಲು ಅವಕಾಶವಾಗುತ್ತದೆ, ಇದೊಂದು ದೃಷ್ಟಫಲ; ಏಕೆಂದರೆ ಪ್ರಾಪ್ತವಾದೊಡನೆಯೇ ಕಾರ್ಯಗತವಾಗುವುದು ಉದ್ರೇಕದ ಸ್ವಭಾವ, ಅದನ್ನು ಕಾಲವಿಳಂಬದಿಂದ ತಡೆ ಯುವುದು ಉದ್ರೇಕಕ್ಕೆ ಉಪಶಮನವು.[17] ಹಾಗೆಯೇ ಮಹಾವಿಷ್ಣುವಿನ ಸ್ಮರಣೆ ಯಿಂದ ದೇವತೆಗಳೂ, ಅಷ್ಟೇಕೆ, ವಿಶ್ವವೇ ಸಂತುಷ್ಟವಾಗುವುದು.—ಇದು ಅದೃಷ್ಟ ಫಲವು.[18] ಅಪಕಾರಕ್ಕೆ ಪ್ರತಿಯಾಗಿ ಅಪಕಾರ ಮಾಡುವುದು ಲೋಕದ ಸ್ವಭಾವ. ಆದರೆ ಅಪಕಾರಕ್ಕೆ ಪ್ರತ್ಯಪಕಾರ, ಅದಕ್ಕೆ ಇನ್ನೊಂದು, ಇನ್ನೊಂದಕ್ಕೆ ಮತ್ತೊಂದು, ಹೀಗೆ ಕೊಂಡಿ ಕೊಂಡಿಯಾಗಿ ಪ್ರತೀಕಾರದ ಸರಪಳಿಯು ಬೆಳೆಯುತ್ತಲೇ ಹೋಗು ವುದು. ಇದೂ ಕಡೆಗೆಲ್ಲಾದರೂ ಕೊನೆಮುಟ್ಟಲೇಬೇಕಷ್ಟೆ. ಮೊದಲೇ ಪ್ರತೀಕಾರದ ಬುದ್ಧಿಯನ್ನು ಕ್ಷಾಂತಿಯಿಂದ ತಡೆದರೆ ಅನರ್ಥಪರಂಪರೆಗಳಿಗೆ ಅವಕಾಶವೂ ಆಗುವು ದಿಲ್ಲ, ದ್ವೇಷವೂ ಹೆಚ್ಚುವುದಿಲ್ಲ. ಅದರಿಂದಲೇ ತಿಳಿದವರು ಕ್ಷಾಂತಿಯಿಂದ ಶುದ್ಧ ರಾಗುತ್ತಾರೆ ಎನ್ನುವುದು.[19] ಪರಸ್ವವನ್ನು ಅಪಹರಿಸಲೂಬಾರದು, ಅಪೇಕ್ಷಿಸಲೂ ಬಾರದು—ಹಾಗಿರುವುದು ಅರ್ಥಶೌಚವು. ಶೌಚದಲ್ಲೆಲ್ಲ ಅರ್ಥಶೌಚವೇ ಶ್ರೇಷ್ಠ ವಾದದ್ದು.[20] ಅದರಿಂದ ದುರಾಸೆಯೂ ದುರ್ದಾಹವೂ ಅಣಗುವುದು. ಹೀಗೆ

---

15 ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ । ಯಸ್ಸ್ಮರೇತ್ಪುಣ್ಡರೀ ಕಾಕ್ಷಂ ಸ ಬಾಹ್ಯಾಭ್ಯನ್ತರಶ್ಶುಚಿಃ ॥

16 ಯದ್ಯಪ್ಯುಪಹತಃ ಪಾಪೈರ್ಯದಿ ವಾತ್ಯನ್ತದುಷ್ಕೃತೈಃ । ತಥಾಪಿ ಸಂಸ್ಮರೇದ್ವಿಷ್ಣುಂ ಸರ್ವಪಾಪೈಃ ಪ್ರಮುಚ್ಯತೇ ॥

17 **When you are angry count ten,** ಕೋಪ ಬಂದಾಗ ಹತ್ತೆಣಿಸು ಎಂಬ ಆಂಗ್ಲೇಯರ ನೀತಿಯಿದೆ. ಅದರ ತತ್ತ್ವವು ಕಾಲವಿಳಂಬವು. ಶುದ್ಧಾಚಮನದಲ್ಲಿ ವಿಳಂಬ ಮಾತ್ರವಲ್ಲದೆ, ಶೀತೋದಕಪ್ರಾಶನ, ಶೀತಜಲಸ್ಪರ್ಶ, ಜಗದ್ರಕ್ಷಕನ ಸ್ಮರಣೆ, ಇವು ವಿಶೇಷ; ಕಾಲವೂ ದೀರ್ಘವೇ.

18 ತ್ರಿಃಪ್ರಾಶ್ನೀಯಾದ್ಯದಂಭಸ್ತು ಪ್ರೀತಾಸ್ತೇನಾಸ್ಯ ದೇವತಾಃ ॥ವೃದ್ಧಶಂಖಃ॥ ಏವಂ ಚ ಬ್ರಾಹ್ಮಣೋ ನಿತ್ಯಂ ಉಪಸ್ಪರ್ಶನಮಾಚರೇತ್। ಬ್ರಹ್ಮಾದಿಸ್ತಂಬಪರ್ಯನ್ತಂ ಜಗತ್ಸಪರಿ ತರ್ಪಯೇತ್ ॥ವ್ಯಾಘ್ರಪಾದಾಃ॥ 19 ಕ್ಷಾಂತ್ಯಾ ಶುದ್ಧ್ಯಂತಿ ವಿದ್ವಾಂಸಃ ॥ಮ-೫-೧೦೭॥

20 ಸರ್ವೇಷಾಮೇವ ಶೌಚಾನಾಮರ್ಥಶೌಚಂ ಪರಂ ಸ್ಮೃತಂ । ಯೋಽರ್ಥೇ ಶುಚಿ ರ್ಹಿ ಸ ಶುಚಿರ್ನ ಮೃದ್ವಾರಿಶುಚಿಶ್ಶುಚಿಃ ॥ಮ-೫-೧೦೬॥

ಕ್ರಮ ಕ್ರಮವಾಗಿ ಅಂತಶ್ಶುದ್ಧಿಯನ್ನು ಸಾಧಿಸಬೇಕು. ಇದೊಂದು ಮಹತ್ತಾದುದು—ಸಂಸ್ಕಾರದಿಂದಲೂ ಸತ್ಸಂಗದಿಂದಲೂ ಕರ್ಮಯೋಗ ಜ್ಞಾನಯೋಗಗಳಿಂದಲೂ ಲಭಿಸುವುದು.

## ೪. ದೇಹಶುದ್ಧಿ

ಬಾಹ್ಯಶೌಚದಲ್ಲಿ ದೇಹಶುದ್ಧಿಗೆ ಅಗ್ರಸ್ಥಾನವು. ಕೆಲಸಕಾರ್ಯಗಳಿಂದಲೂ ಮಲಿನವಸ್ತು ಸಂಪರ್ಕದಿಂದಲೂ ದೇಹವು ಒಳಗೂ ಹೊರಗೂ ಕೊಳೆಯಾಗುತ್ತಲೇ ಇರುತ್ತದೆ. ಅದರ ಒಳಗೂ ಹೊರಗೂ ರಂಧ್ರಗಳಿವೆ. ನವಚ್ಛಿದ್ರಗಳೂ ಅನಂತ ರೋಮಕೂಪಗಳೂ ಹೊರಗಿನವು—ಇವು ಸದಾ ಸ್ರವಿಸಿ ಉತ್ತಮಾಂಗಗಳೂ ಅಧಮಾಂಗಗಳಂತೆಯೇ ಮಲಿನವಾಗುತ್ತವೆ.[1] ಒಳಗೆ ಅನ್ನನಾಳವೂ ಶ್ವಾಸಕೋಶಗಳೂ ಜಲಮಲಕೋಶಗಳೂ ಇವೆ. ಅವೂ ಮಲಿನವಾಗುತ್ತಲೇ ಇರುತ್ತವೆ. ಗುಗ್ಗಿ ಜಿಬುರು ಕಣ್ಣೀರು ಸಿಂಬಳ ಶ್ಲೇಷ್ಮ ಬೆವರು ಕನುಗು ಜಲ ಮಲ ರಕ್ತ ರೇತಸ್ಸು ಮಜ್ಜೆ ಈ ಹನ್ನೆರಡೂ ದೈಹಿಕಮಲಗಳು.[2] ಗುಗ್ಗಿ ಜಿಬುರು ಎಂಬಿವು ಜೊಲ್ಲು ಮುಂತಾದ್ದಕ್ಕೂ, ಬೆವರೆಂಬುದು ದೇಹಕ್ಕೆ ಮೆತ್ತುವ ಎಲ್ಲಾ ಕೊಳೆಗೂ, ರೇತಸ್ಸೆಂಬುದು ರಜಸ್ಸಿಗೂ, ರಕ್ತವು ಮಾಂಸಾದಿಗಳಿಗೂ, ಉಪಲಕ್ಷಣವು. ಆಹಾರದ ಗುಣ ಪರಿಮಾಣಗಳ ವ್ಯತ್ಯಾಸದಿಂದ ಅಜೀರ್ಣ ಆಯ್ಕಳಿಕೆ ಓಕರಿಕೆ ಹೊಟ್ಟೆ ತೊಳಸು ಹೊಟ್ಟೆಯುಬ್ಬರ ವಾಯುಸ್ಖಲನ ಇತ್ಯಾದಿಗಳು ಹುಟ್ಟುತ್ತವೆ. ಶ್ವಾಸಕೋಶವು ಮಲಿನವಾದರೆ ಕೆಮ್ಮು ಕ್ಯಾಕರಿಕೆ ಕಾಣಿಸಿಕೊಳ್ಳುತ್ತವೆ. ಇವೆಲ್ಲವೂ ಮಾಲಿನ್ಯವು ಶೇಖರವಾಗಿದೆಯೆಂದು ಸೂಚಿಸುತ್ತವೆ. ಸೂಚನೆಯಾದೊಡನೆಯೇ ಶೋಧನವಾಗಬೇಕು. ಮಾಲಿನ್ಯವು ಹೆಚ್ಚಿದರೆ ಜ್ವರಾದಿ ವ್ಯಾಧಿಗಳು ಸಂಭವಿಸುತ್ತವೆ. ಅವುಗಳ ಚಿಕಿತ್ಸೆಯು ಆಯುರ್ವೇದಕ್ಕೆ ಸಂಬಂಧಪಟ್ಟವು. ಒಳಗೆ ಶೇಖರವಾದ ಸಾಮಾನ್ಯ ಮಲಗಳು ದೇಹಧರ್ಮವನ್ನನುಸರಿಸಿ ವಿಸರ್ಜನೆಯ ಮೂಲಕ ಹೊರಬೀಳುತ್ತವೆ. ವಿಸರ್ಜನೆಯಿಂದಲೂ ಸ್ರಾವದಿಂದಲೂ ಮಾಲಿನ್ಯ ಸಂಪರ್ಕದಿಂದಲೂ ದೇಹವು ಹೊರಗಡೆ ಮಲಿನವಾಗುತ್ತದೆ. ಆ ಮಾಲಿನ್ಯವು ಶೌಚದಿಂದಲೂ ದಂತ

---

1 ಲಾಲಾಸ್ವೇದಸಮಾಕೀರ್ಣಶ್ಶಯನಾದುತ್ಥಿತಃ ಪುಮಾನ್ । ಅತ್ಯಂತಮಲಿನಃ ಕಾಯೋ ನವಚ್ಛಿದ್ರ ಸಮನ್ವಿತಃ॥ ಸ್ರವತ್ಯೇವ ದಿವಾ ರಾತ್ರಿಂ ಪ್ರಾತಸ್ಸ್ನಾನಂ ವಿಶೋಧನಂ। ಕ್ಲಿದ್ಯಂತಿ ಹಿ ಪ್ರಸುಪ್ತಸ್ಯ ಚೇಂದ್ರಿಯಾಣಿ ಸ್ರವಂತಿ ಚ ॥ ಅಂಗಾನಿ ಸಮತಾಂ ಗಚ್ಛಂತ್ಯುತ್ತಮಾನ್ಯಧಮೈಸ್ಸಹ ॥ದಕ್ಷಃ॥

2 ವಸಾಶುಕ್ರಮಸೃಙ್ಮಜ್ಜಾಮೂತ್ರವಿಡ್ಘ್ರಾಣಕರ್ಣವಿಟ್ । ಶ್ಲೇಷ್ಮಾಶ್ರುದೂಷಿಕಾಸ್ವೇದೋ ದ್ವಾದಶೈತೇ ನೃಣಾಂ ಮಲಾಃ ॥ಮ-೫-೧೩೫॥ ಶುಕ್ರಪದಂ ರಜಸೋಽಪ್ಯುಪಲಕ್ಷಣಂ। ಅಸೃಕ್ಪದಂ ಸ್ನಾಯುಮಾಂಸಾದೇಃ । ಕರ್ಣವಿಟ್ಕರ್ಣಮಲಂ—ತದಾಸ್ಯಮಲಸ್ಯಾಪಿ ಜಿಹ್ವಾನಾಸಾದೇರುಪಲಕ್ಷಣಂ । ಸ್ವೇದಪದೇನ ಗಾತ್ರಮಲಾನಾಂ ಗ್ರಹಣಂ ॥ಸರ್ವಜ್ಞನಾರಾಯಣಃ॥

ಧಾವನ ಗಂಡೂಷ ಮುಖಪ್ರಕ್ಷಾಲನ ಸ್ನಾನಾದಿಗಳಿಂದಲೂ ನಿವಾರಣೆಯಾಗುವುದು. ಸಾಧಾರಣವಾದ ಅಜೀರ್ಣಕ್ಕೆ ಹಿತೋಷ್ಣಜಲಪ್ರಾಶನವೂ ಹೆಚ್ಚಾದರೆ ಉಪವಾಸವೂ ಉಕ್ತವಾಗಿವೆ. ಆಯ್ಕಳಿಕೆ ಮುಂತಾದ ಉದ್ರೇಕಕ್ಕೆ ಶುದ್ಧಾಚಮನವು ವಿಧಿಸಲ್ಪಟ್ಟಿದೆ. ಅನ್ನನಾಳವೂ ಜಠರವೂ ಕರುಳೂ ಹೆಚ್ಚು ಮಲಿನವಾದರೆ ಹೆಚ್ಚಾಗಿ ನೀರು ಕುಡಿದು ಕಲಕಿ ವಿಸರ್ಜಿಸುವ ಪ್ರಕಾರವು ಯೋಗಶಾಸ್ತ್ರದಲ್ಲುಕ್ತವಾಗಿದೆ—ಇದನ್ನು ತಿಳಿದವರಿಂದ ಸರಿಯಾಗಿ ಕಲಿತು ಮಾಡಬೇಕು, ತಿಳಿಯದೇ ಮಾಡುವುದು ಅಪಾಯಕರ. ಮಲಬದ್ಧವಾದರೆ ವಿರೇಚಕದಿಂದ ಶುದ್ಧಿಯಾಗುತ್ತದೆ. ಹೀಗೆ ಪ್ರಯತ್ನಪೂರ್ವಕವಾಗಿ ದೇಹವನ್ನು ಶುದ್ಧವಾಗಿಟ್ಟುಕೊಳ್ಳಬೇಕು. ಶುದ್ಧಿಯ ಆಂತರ್ಯವು ನಿರ್ಮಲೀಕರಣವೆಂಬುದನ್ನು ಮಾತ್ರ ಮರೆಯದೆ, ಕಾಟಾಚಾರ ಕಪಟಾಚಾರಗಳಲ್ಲಿ ಪರಿಸಮಾಪ್ತಿ ಮಾಡಬಾರದು.

## ೫. ದ್ರವ್ಯಶುದ್ಧಿ

ಶುದ್ಧಿಪ್ರಕರಣದಲ್ಲಿ ಪ್ರಯೋಗಿಸುವ ಕೆಲವು ಪದಗಳ ಅರ್ಥವನ್ನು ಗಮನಿಸಬೇಕು. **ದ್ರವ್ಯ**ವೆಂದರೆ ಪದಾರ್ಥ, ಹಣವಲ್ಲ. **ಮಲ, ಅಮೇಧ್ಯ** ಎಂಬ ಪದಗಳು ಈ ಪ್ರಕರಣದಲ್ಲಿ ಎಲ್ಲಾ ವಿಧವಾದ ಕೊಳೆಗೂ ಅನ್ವಯಿಸುತ್ತವೆ:—ಹನ್ನೆರಡು ದೈಹಿಕ ಮಲಗಳು ಎಂಬುದರಲ್ಲಿಯೂ ಸುರಾಮದ್ಯಗಳು ಬಾಹ್ಯಮಲಗಳು ಎಂಬುದರಲ್ಲಿಯೂ ಮಲಿನಮಾಲಿನ್ಯನಿರ್ಮಲೀಕರಣ ಎಂಬುವುಗಳಲ್ಲಿಯೂ ಮಲವೆಂದರೆ ಕೊಳೆಯೆಂದರ್ಥ. (ಕೆಲವು ಕಡೆ ಮಲಶಬ್ದವನ್ನು ರೂಢಿಯಾದ ಅರ್ಥದಲ್ಲಿಯೂ ಪ್ರಯೋಗಿಸುವುದುಂಟು.) ಹಾಗೆಯೇ **ಅಮೇಧ್ಯ**ವೆಂದರೆ ಅಶುಚಿಯೆಂದೂ ಅಪವಿತ್ರವೆಂದೂ ಅರ್ಥ,[1] ರೂಢಾರ್ಥವಲ್ಲ. ದೈಹಿಕ ಅಥವಾ ಬಾಹ್ಯ ಮಲವು ಮೆತ್ತಿಕೊಂಡ ಪದಾರ್ಥವು **ಅತ್ಯಂತೋಪಹತ**[2]ವೆಂದೂ ಸೋಕಿ ಮೆತ್ತಿಕೊಳ್ಳದಿದ್ದರೆ **ನಿರ್ಲೇಪ**ವೆಂದೂ ಅನ್ನುತ್ತಾರೆ. ಹೀಗೆಯೇ ಇತರ ಪದಗಳನ್ನೂ ಪ್ರಕರಣಕ್ಕನುಗುಣವಾಗಿ ಅರ್ಥಮಾಡಿಕೊಳ್ಳಬೇಕು.

ನಾವು ಬಳಸುವ ಬಟ್ಟೆಬರೆಗಳೂ ಪಾತ್ರೆಪದಾರ್ಥಗಳೂ ಕೊಳೆಯಾಗುತ್ತಲೇ ಇರುತ್ತವೆ—ಇವನ್ನೂ ಶುದ್ಧಿಮಾಡುತ್ತಲೇ ಇರಬೇಕು. ಇದೊಂದು ನಿತ್ಯವೂ ಆವಶ್ಯವೂ ಆದ ಕೆಲಸವೇ ಆದರೂ ಪ್ರಾಯಶಃ ಪರಿಷ್ಕಾರವಾಗಿ ನಡೆಯುವುದಿಲ್ಲ. ಕೆಲವರು ಶುದ್ಧಿಮಾಡುವುದು ಆಚಾರವೆಂದೂ ಅದಕ್ಕಾಗಿ ಮಾಡಬೇಕೆಂದೂ ಶುದ್ಧಿಮಾಡಿಪ ಶಾಸ್ತ್ರವನ್ನು ಮಾಡುತ್ತಾರೆ. ಇನ್ನು ಕೆಲವರು ಪಾತ್ರೆಯು ಒಳಗೆ ಶುದ್ಧ

1 ಮೇಧ್ಯವೆಂದರೆ ಶುದ್ಧವಾದುದು ಪವಿತ್ರವಾದುದು—ಪೂತಂ ಪವಿತ್ರಂ ಮೇಧ್ಯಂ ಚ ॥ ಅಮರ॥ ಅಮೇಧ್ಯವೆಂದರೆ ಅಶುದ್ಧವಾದುದು, ಅಪವಿತ್ರವಾದುದು.

2 ಶರೀರೈರ್ಮಲೈಸ್ಸುರಾಭಿರ್ಮದ್ಯೈರ್ವಾ ಯದುಪಹತಂ ತದತ್ಯಂತೋಪಹತಂ ॥ ವಿ-೨೩-೧॥

ವಾಗಬೇಕೆಂಬುದನ್ನೇ ಮರೆತು ಹೊರಗಡೆ ಚೆನ್ನಾಗಿ ಉಜ್ಜಿ ತೊಳೆದು ಶುದ್ಧಿಯಾಯಿತೆಂದು ತಿಳಿಯುತ್ತಾರೆ. ಮತ್ತೆ ಕೆಲವರು ಪಾತ್ರೆಯನ್ನುಜ್ಜುವುದಕ್ಕೆ ಗ್ರಾಮಸಾರದಿಂದ ಮಲಿನವಾದ ಸಣ್ಣ ಮರಳನ್ನು ತಂದು ಆ ಅಶುದ್ಧಶೋಧಕದ್ರವ್ಯದಿಂದ ತಿಕ್ಕಿ ಶುದ್ಧಿಗೆ ಪ್ರತಿಯಾಗಿ ಮತ್ತಷ್ಟು ಅಶುದ್ಧ ಮಾಡುತ್ತಾರೆ; ಈ ಅನಾಚಾರವು ಮುಸುರೆ ತೊಳೆಯುವುದಕ್ಕೆ ಆಳುಗಳನ್ನಿಟ್ಟುಕೊಂಡಿರುವವರ ಮನೆಯಲ್ಲಿ ತಪ್ಪದೆ ನಡೆಯುತ್ತದೆ. ಬಟ್ಟೆಯನ್ನು ಮಡಿಮಾಡುತ್ತೇವೆಂದು ನೀರಿನಲ್ಲಿ ನೆನೆಸಿ ಹಿಂಡಿ ಹರಹುವವರೂ ಇದ್ದಾರೆ; ಅಥವಾ ಶಾನೆ ಮಾಡಿದರೆ ಒಂದೆರಡಾವೃತ್ತಿ ಕುಸಿಕಿ ಹಿಂಡುವವರೂ ಇದ್ದಾರೆ; ಕಲ್ಲಿಗೆ ಸೋಕಿಸದೆ ಮಡಿಯಾಗುವುದಿಲ್ಲವೆಂಬ ಮಾತಿಗೆ ಒಗೆಯಬೇಕೆಂಬ ಅರ್ಥವನ್ನೇ ಮರೆತು ನೆನೆಸಿದ ಬಟ್ಟೆಯನ್ನು ಕಲ್ಲಿಗೆ ಸೋಕಿಸಿ ಹರಹುವ "ಆಚಾರವಂತ"ರೂ ಇದ್ದಾರೆ. ಹೀಗೆ ಒಂದಲ್ಲ ಒಂದು ಪ್ರಕಾರವಾಗಿ ಅವಶ್ಯವಾಗಿಯೂ ಪರಿಷ್ಕಾರವಾಗಿಯೂ ನಡೆಯಬೇಕಾದ ದ್ರವ್ಯಶುದ್ಧಿಯ ವಿಷಯದಲ್ಲಿ ಕಾಟಾಚಾರ ಕಪಟಾಚಾರ ನಟನಾಚಾರ ಡಂಭಾಚಾರಗಳು ನಡೆಯುತ್ತವೆ. ಯಾವುದಕ್ಕೆ ಹುಳಿ ಹಾಕಬೇಕು, ಯಾವುದಕ್ಕೆ ಬೂದಿ, ಯಾವುದಕ್ಕೆ ಸುಣ್ಣ, ಎಂಬಿತ್ಯಾದಿ ಶೋಧಕ ದ್ರವ್ಯ ಪ್ರಯೋಗದ ವಿವೇಚನೆಯಂತೂ ಇಲ್ಲವೇ ಇಲ್ಲ. ಅದರಿಂದ ಈ ವಿಷಯದಲ್ಲಿ ಋಷಿವಚನಗಳನ್ನು ಉದಹರಿಸಿ ವಿಮರ್ಶಿಸಬೇಕಾಗಿದೆ.

ಚಿನ್ನದ ರನ್ನದ ಕಲ್ಲಿನ ಪದಾರ್ಥಗಳು ಅತ್ಯಂತೋಪಹತವಾದರೆ ಬೂದಿ ನೀರಿನಿಂದಲೂ ಮಣ್ಣುನೀರಿನಿಂದಲೂ ಶುದ್ಧವಾಗುವುವು. ಬೂದಿಯ ಅಥವಾ ಮಣ್ಣಿನ ಪ್ರಯೋಜನವು ಒಂದೇ ಆದುದರಿಂದ ಯಾವುದಾದರೊಂದನ್ನು ಪ್ರಯೋಗಿಸಬೇಕು, ಯಾವುದರಿಂದ ಉಜ್ಜಿದರೂ ನೀರನ್ನು ಮಾತ್ರ ಉಪಯೋಗಿಸಲೇಬೇಕು.[3] ಲೋಹಮಯವಾದ ಪದಾರ್ಥಗಳು ಅತ್ಯಂತೋಪಹತವಾದರೆ ,ಬೆಂಕಿಯಲ್ಲಿ ಸುಡುವುದರಿಂದಲೂ[4] ರತ್ನದ ಕಲ್ಲಿನ ಶಂಖದ ಮುತ್ತಿನ (ಮುತ್ತಿನ ಚಿಪ್ಪಿನ) ಪದಾರ್ಥಗಳು ಹಾಗಾದರೆ ಏಳು ದಿವಸ ಮಣ್ಣಿನಲ್ಲಿ ಹೂತಿಡುವುದರಿಂದಲೂ[5] ಕೊಂಬಿನ ದಂತದ ಮೂಳೆಯ ಮರದ ಪದಾರ್ಥಗಳನ್ನು ಲೇಪವಾದಷ್ಟನ್ನು ಚೇವಿಬಿಡುವುದ

---

3 ತೈಜಸಾನಾಂ ಮಣೀನಾಂ ಚ ಸರ್ವಸ್ಯಾಶ್ಮಮಯಸ್ಯ ಚ । ಭಸ್ಮನಾದ್ಭಿರ್ಮೃದಾ ಚೈವ ಶುದ್ಧಿರುಕ್ತಾ ಮನೀಷಿಭಿಃ ॥ಮ-೪-೧೧೧॥ ನಿರ್ಲೇಪಸ್ಯ ಜಲೇನೈವಾನಂತರಂ ಶುದ್ಧೇರ್ವಕ್ಷ್ಯಮಾಣತ್ವಾತ್ ಇದಂ ಉಚ್ಛಿಷ್ಟಘೃತಾದಿಲಿಪ್ತವಿಷಯಂ । ತತ್ರಮೃದ್ಭಸ್ಮನೋರ್ಗಂಧಕ್ಷಯೈಕಕಾರ್ಯತ್ವಾದ್ವಿಕಲ್ಪಃ ಆಪಸ್ತು ಉಭಯತ್ರ ಸಮುಚ್ಚೀಯತೇ ॥ಕುಲ್ಲೂಕಃ॥

4 ಅತ್ಯಂತೋಪಹತಂ ಸರ್ವಂ ಲೋಹಭಾಂಡಂ ಅಗ್ನೌ ಪ್ರಕ್ಷಿಪ್ತಂ ಶುದ್ಧ್ಯೇತ್ ॥ವಿ-೨೩-೨॥

5 ಮಣಿಮಯಮಶ್ಮಮಯಮಬ್ಜಮಯಂ ಚ ಸಪ್ತರಾತ್ರಂ ಮಹೀನಿಖನೇನ ॥ವಿ-೨೩-೫॥ ಯಾವ ಮಲವೇ ಆದರೂ ಏಳು ದಿವಸ ಮಣ್ಣಿನಲ್ಲಿದ್ದರೆ ಮಣ್ಣೇ ಆಗಿಹೋಗುವುದು, ಅಥವಾ ಪರಿವರ್ತಿತವಾಗುವುದು.

ರಿಂದಲೂ[6] ಶುದ್ಧಿಮಾಡಬೇಕು. ಜೀವವುದಕ್ಕಾಗದಿದ್ದರೂ ಜೀವಿದರೂ ಶುದ್ಧವಾಗದಿದ್ದರೂ ಅವನ್ನು ತ್ಯಜಿಸಿಯೇಬಿಡಬೇಕು. ಮೃಣ್ಮಯಪದಾರ್ಥಗಳು (ಮಡಿಕೆ ಕುಡಿಕೆ ಮುಂತಾದವು) ಅತ್ಯಂತೋಪಹತವಾದರೆ ಯಾವುದರಿಂದಲೂ ಶುದ್ಧವಾಗುವುದಿಲ್ಲ, ಅವನ್ನು ತ್ಯಜಿಸಿಯೇಬಿಡಬೇಕು.[7] ಬಟ್ಟೆಯು ಒಗೆದರೂ ಶುದ್ಧವಾಗದಷ್ಟು ಮಲಿನವಾದರೆ ಅಷ್ಟು ಭಾಗವನ್ನು ಹರಿದುಹಾಕಬೇಕು.[8] ಈ ನಿಯಮಗಳು ಅತ್ಯಂತೋಪಹತಕ್ಕೆ ಉಕ್ತವಾದವು.

ನಿರ್ಲೇಪವಾದರೆ ಮಣ್ಣಿನ ವಸ್ತುವನ್ನು ಮತ್ತೆ ಬೆಂಕಿಯಲ್ಲಿ ಸುಡಬೇಕು.[9] ರತ್ನ ಚಿನ್ನ ಬೆಳ್ಳಿ ಕಲ್ಲು ಶಂಖ ಮುತ್ತು ಮುತ್ತಿನ ಚಿಪ್ಪು ಮುಂತಾದವುಗಳನ್ನು ನೀರಿನಿಂದಲೂ ಜಿಡ್ಡಾದರೆ ಬಿಸಿನೀರಿನಿಂದಲೂ ತೊಳೆಯಬೇಕು.[10] ತಾಮ್ರ ಹಿತ್ತಾಳೆ ಕಂಚು ಕಬ್ಬಿಣ ತಗರ ಸೀಸ ಜಸ್ತ ಇವುಗಳನ್ನು ಭಸ್ಮ ಹುಳಿಯ ನೀರು ನೀರು ಇವುಗಳಿಂದ ಶುದ್ಧಿಮಾಡಬೇಕು.[11] ಶಂಖ ಹಗ್ಗ ಗೆಡ್ಡೆಗೆಣಸು ಹಣ್ಣು ಬಟ್ಟೆ ಬಿದಿರು (ಮರ ಗೂಡೆ ಮುಂತಾದ ಬಿದಿರಿನ ಪಾತ್ರೆ) ಅಜಿನ (ಕೃಷ್ಣಾಜಿನ ಮುಂತಾದವು) ಇವನ್ನು ನೀರಿನಿಂದ ತೊಳೆದು ಶುದ್ಧಿಮಾಡಬೇಕು.[12] ಯಥಾಯೋಗ್ಯವಾಗಿ ಎಂದಿರುವುದನ್ನು ಹೀಗೆ ವಿವರಿಸಿದೆ—ಹಿತ್ತಾಳೆ ತಾಮ್ರ ತಗರದವನ್ನು ಹುಳಿ ಬೂದಿಯಿಂದಲೂ,[13] ಇವನ್ನೂ ಸೀಸದ್ದನ್ನೂ ಹುಳಿಯಿಂದಲೂ,[14] ಕಂಚು ಕಬ್ಬಿಣದವನ್ನು ಬೂದಿಯಿಂದಲೂ,[15] ಶುದ್ಧಿಮಾಡೆಂದಿದ್ದಾರೆ. ತುಪ್ಪ ಎಣ್ಣೆ ಮುಂತಾದ ಎಲ್ಲಾ ದ್ರವ

---

6 ಶೃಂಗದಂತಾಸ್ಥಿಮಯಂ ತಕ್ಷಣೇನ ॥೪॥ ತಕ್ಷಣೇನ ದಾರವಾಣಾಂ ॥೨೭॥ ವಿ-೨೩॥

7 ಮದ್ಯೈರ್ಮೂತ್ರೈಃ ಪುರೀಷೈರ್ವಾ ಷ್ಠೀವನೈಃ ಪೂಯಶೋಣಿತೈಃ। ಸಂಸ್ಪೃಷ್ಟಂ ನೈವ ಶುದ್ಧ್ಯೇತ ಪುನಃಪಾಕೇನ ಮೃನ್ಮಯಂ ॥ಮ-v-೧೨೩॥ (ತಸ್ಮಾತ್ ತ್ಯಾಜ್ಯಮೇವ)

8 ಅತ್ಯಂತೋಪಹತಸ್ಯ ವಸ್ತ್ರಸ್ಯ ಯತ್ಪ್ರಕ್ಷಾಲಿತಂ ಸದ್ವಿರಜ್ಯತೇ ತಚ್ಛಿಂದ್ಯಾತ್ ॥ ವಿ-೨೩-೬॥

9 (ಅತ್ಯಂತೋಪಹತಂ ಯದಿ ನ ಸ್ಯಾತ್)-ಪುನಃಪಾಕೇನ ಮೃನ್ಮಯಂ ॥ಮ-v-೧೨೨॥

10 ನಿರ್ಲೇಪಂ ಕಾಂಚನಂ ಭಾಂಡಮದ್ಭಿರೇವ ವಿಶುದ್ಧ್ಯತಿ। ಅಬ್ಜಮಶ್ಮಮಯಂ ಚೈವ ರಾಜತಂ ಚಾನುಪಸ್ಕೃತಂ ॥ಮ-v-೧೧೨॥ ಸಸ್ನೇಹಪಾತ್ರಾಣ್ಯುಷ್ಣೇನ ವಾರಿಣಾ ॥ ಯಾ-i-೧೮೪॥

11 ತಾಮ್ರಾಯಸ್ಕಾಂತರೈತ್ಯಾನಾಂ ತ್ರಪುಣ ಸ್ಸೀಸಕಸ್ಯ ಚ। ಶೌಚಂ ಯಥಾರ್ಹಂ ಕರ್ತವ್ಯಂ ಕ್ಷಾರಾಮ್ಲೋದಕವಾರಿಭಿಃ ॥ಮ-v-೧೧೪॥ ಕ್ಷಾರೋ ಭಸ್ಮಃ ॥ ಭೂತಿರ್ಭಸಿತ ಭಸ್ಮನಿ। ಕ್ಷಾರೋರಕ್ಷಾ ಚ ॥ಇತ್ಯಮರಃ॥

12 (ಸೌವರ್ಣರಾಜತಾಬ್ಜಾನಾಮೂರ್ಧ್ವಪಾತ್ರಗ್ರಹಾಶ್ಮನಾಂ) ಶಂಖರಜ್ಜುಮೂಲಫಲವಾಸೋವಿದಲಚರ್ಮಣಾಂ ॥೧೮೩॥ ಪಾತ್ರಾಣಾಂ ಚಮಸಾನಾಂ ಚ ವಾರಿಣಾ ಶುದ್ಧಿರಿಷ್ಯತೇ ॥೧೮೪॥ ಯಾ-i ॥

13 ತ್ರಪುಸೀಸಕತಾಮ್ರಾಣಾಂ ಕ್ಷಾರಾಮ್ಲೋದಕವಾರಿಭಿಃ ॥ಯಾ-i-೧೯೦॥

14 ತಾಮ್ರರೀತಿತ್ರಪುಸೀಸಮಯಾನಾಮಾಮ್ಲೋದಕೇನ ॥ವಿ-೨೩-೨೫॥

15 ಭಸ್ಮಾದ್ಭಿಃ ಕಾಂಸ್ಯಲೋಹಾನಾಂ ॥ಯಾ-i-೧೯೦॥

ದ್ರವ್ಯಗಳೂ ಬಟ್ಟೆಯಿಂದ ಶೋಧಿಸಿದರೆ ಶುದ್ಧವಾಗುವುವು.[16] ಶಯನ (ಹಾಸಿಗೆ ಮಂಚ ಮುಂತಾದವು) ಯಾನ (ಮ್ಯಾನಬಂಡಿ ಮುಂತಾದವು) ಆಸನ (ಮಣೆ, ದರ್ಭಾಸನ ಮುಂತಾದವು) ಜಲವನ್ನು ಪ್ರೋಕ್ಷಿಸುವುದರಿಂದ ಶುದ್ಧವಾಗುವುವು.[17] ಧಾನ್ಯ ಅಜಿನ ಬಿದಿರು (ವದಾರ್ಥ) ಸೊಪ್ಪು ಗೆಡ್ಡೆಗೆಣಸು ಹಣ್ಣು ಹೂವು ಹಗ್ಗ ನೂಲು ಹತ್ತಿ ಹತ್ತಿಯ ಬಟ್ಟೆ ಹುಲ್ಲು ಸೌದೆ ಹೊಟ್ಟು ಮುತ್ತುಗದೆಲೆ ಇವು ಸ್ವಲ್ಪವಾಗಿದ್ದರೆ ತೊಳೆಯುವುದರಿಂದಲೂ, ಹೇರಳವಾಗಿದ್ದರೆ ಜಲವನ್ನು ಪ್ರೋಕ್ಷಿಸುವುದರಿಂದಲೂ, (ಅಥವಾ ಸಾಧ್ಯವಾದಷ್ಟು ತೊಳೆಯುವುದರಿಂದಲೂ,) ಶುದ್ಧವಾಗುವುವು.[18] (ಹೆಚ್ಚು ಕಡಿಮೆ ಎಂಬುದು ದೇಶ ಕಾಲ ವಸ್ತು ವ್ಯಕ್ತಿ ಅಂತಸ್ತು ಇತ್ಯಾದಿಗಳಿಂದ ವ್ಯವಸ್ಥೆಯಾಗತಕ್ಕದ್ದು) ರೇಷ್ಮೆಯ ಬಟ್ಟೆಯೂ ಕಂಬಳಿ ಶಾಲು ಮುಂತಾದ ತುಪ್ಪುಟದ ಬಟ್ಟೆಯೂ ಉಪ್ಪುಮಣ್ಣಿನಿಂದ(ಚೌಳಿನಿಂದ)ಲೂ ಗೋವಿನ ಗಂಜಳದಿಂದಲೂ ನೀರಿನಿಂದಲೂ ಶುದ್ಧವಾಗುವುವು. ನಾರುಮಡಿಯು ಬಿಲ್ವಪತ್ರೆಕಾಯಿನಿಂದಲೂ ಕಿತ್ತಾನಾರಿನದು ಬಿಳಿಯ ಸಾಸಿವೆಯಿಂದಲೂ ಉಜ್ಜಿ ನೀರಿನಿಂದ ತೊಳೆಯುವುದರಿಂದ ಶುದ್ಧವಾಗುವುವು.[19] ಇವು ನಿರ್ಲೇಪಕ್ಕೆ ಹೇಳಿದ ವಚನಗಳು.

ಸಿದ್ಧವಾದ ಅನ್ನಕ್ಕೆ ಅನೇಕ ದೋಷಗಳು ಸಂಭವಿಸುತ್ತಲೇ ಇರುತ್ತವೆ. ಹಕ್ಕಿಯು ತಿಂದರೂ, ಗೋವು ಮೂಸಿನೋಡಿದರೂ, ಮನುಷ್ಯರು ಬಾಯಿಯಿಂದ ಊದಿದರೂ, ಬಟ್ಟೆಯಿಂದ ಬೀಸಿದರೂ, ಕಾಲಿನ ಗಾಳಿ ಸೋಕಿದರೂ, ಕೀಡೆ ಕೂದಲುಗಳಿದ್ದರೂ, ದೂಷಿತವಾಗುವುದೆಂದು ಸಂಗ್ರಹವಾಕ್ಯವಿದೆ.[20] ಇದರ ಅರ್ಥವು ಅಷ್ಟು ಸುಲಭವಲ್ಲ. ಮೇಧಾತಿಥಿ ಮುಂತಾದ ವ್ಯಾಖ್ಯಾತರು ಇದನ್ನು ವಿವರಿಸಿದ್ದಾರೆ. ಮೂಲವಚನದಲ್ಲಿ ಪಕ್ಷಿಯೆಂದು ಸಾಮಾನ್ಯಪದವನ್ನೇ ಉಪಯೋಗಿಸಿದ್ದರೂ ಯಾವ ಹಕ್ಕಿ ತಿಂದರೂ ದೋಷವೆಂದರ್ಥವಲ್ಲ, ಹಕ್ಕಿಗಳು ಕ್ರವ್ಯಾದಗಳು (ಮಾಂಸಾ

---

16 ದ್ರವಾಣಾಂ ಚೈವ ಸರ್ವೇಷಾಂ ಶುದ್ಧಿರುತ್ಪವನೇನ ತು॥ ಮ-v-೧೧೫॥ ಉತ್ಪವನಂ ಚಾತ್ರ ವಸ್ತ್ರಾಂತರಿತೇ ಪಾತ್ರೇ ಪ್ರಕ್ಷೇಪತಃ ॥ಮಿತಾಕ್ಷರಾ-ಯಾ-i-೧೯೦॥

17 ಪ್ರೋಕ್ಷಣೇನ ಸಂಹತಾನಾಂ ॥೨೮॥ ಶಯನಯಾನಾಸನಾಂ ಚ ॥೨೯॥ ವಿ-೨೩॥

18 ಬಹೂನಾಂ ಚ ॥೧೩॥ ಧಾನ್ಯಾಜಿನರಜ್ಜುರಾಂಕವವೈದಲಸೂತ್ರಕಾರ್ಪಾಸವಾಸಸಾನಾಂ ಶ್ಚ ॥೧೪॥ ಶಾಕಮೂಲಫಲಪುಷ್ಪಾಣಾಂ ಚ ॥೧೫॥ ತೃಣಕಾಷ್ಠಶುಷ್ಕಪಲಾಶಾನಾಂ ಶ್ಚ ॥೧೬॥ ಏತೇಷಾಂ ಪ್ರಕ್ಷಾಲನೇನ ॥೧೭॥ ವಿ-೨೩॥ ಅದ್ಭಿಸ್ತು ಪ್ರೋಕ್ಷಣಂ ಶೌಚಂ ಬಹೂನಾಂ ಧಾನ್ಯವಾಸಸಾಂ ॥೧೧೮॥ ಚೈಲವಚ್ಚರ್ಮಣಾಂ ಶುದ್ಧಿರ್ವೈದಲಾನಾಂ ತಥೈವ ಚ । ಶಾಕಮೂಲಫಲಾನಾಂ ಚ ಧಾನ್ಯವಚ್ಛುದ್ಧಿರಿಷ್ಯತೇ ॥೧೧೯॥ ಪ್ರೋಕ್ಷಣಾತ್ತೃಣಕಾಷ್ಠಂ ಚ ॥೧೨೨॥ ಮ-v॥ ಪ್ರಕ್ಷಾಲನೇನ ತ್ವಲ್ಪಾನಾಂ ॥ಮ-v-೧೧೮॥

19 ಕೌಶೇಯಾವಿಕಯೋರೂಷೈಃ... । ಶ್ರೀಫಲೈರಂಶುಪಟ್ಟಾನಾಂ ಕ್ಷೌಮಾಣಾಂ ಗೌರಸರ್ಷಪೈಃ ॥ಮ-v-೧೨೦॥

20 ಪಕ್ಷಿಜಗ್ಧಂ ಗವಾಘ್ರಾತಮವಧೂತಮವಕ್ಷುತಂ । ದೂಷಿತಂ ಕೇಶಕೀಟೈಶ್ಚ ಮೃತ್ಪ್ರಕ್ಷೇಪೇಣ ವಿಶುದ್ಧ್ಯತಿ ॥ಮ-v-೧೨೫॥

ಹಾರಿಗಳು) ಅಕ್ರವ್ಯಾದಗಳು (ಮಾಂಸಾಹಾರಮಾಡದವು) ಎಂದೆರಡು ಪ್ರಕಾರದವು. ಕಾಗೆ ಹದ್ದು ರಣಹದ್ದು ಮುಂತಾದವು ಕ್ರವ್ಯಾದಗಳು, ಗಿಣಿ ಹಂಸ ಮುಂತಾದವು ಅಕ್ರವ್ಯಾದಗಳು. ಕ್ರವ್ಯಾದಗಳು ತಿಂದರೆ ಅಭಕ್ಷ್ಯವು. ಶುಕಹಂಸಾದಿಗಳು ತಿಂದರೆ ಶುದ್ಧಿಮಾಡಿ ತಿನ್ನಬಹುದು.[21] ಮೂಲವಚನದಲ್ಲಿ "ಗವಾಘ್ರಾತಂ" ಗೋವು ಮೂಸಿ ನೋಡಿದ್ದು ಎಂದಿದೆ ಮತ್ತು ಅದನ್ನು ಶುದ್ಧಿಮಾಡಿದಮೇಲೆ ತಿನ್ನಬಹುದು ಎಂದೂ ಸೂಚಿಸಿದೆ. ಗೋವಿನಿಂದ "ಉಪಾಘ್ರಾಣಿತ"ವಾದುದು ಅಭಕ್ಷ್ಯವೆಂದು ಮತ್ತೊಂದು ವಚನವಿದೆ.[22] ಅಭಕ್ಷ್ಯ ಪ್ರಕರಣದಲ್ಲಿ ಉಪಾಘ್ರಾಣಿತವೆಂದೂ ಶುದ್ಧಿ ಪ್ರಕರಣದಲ್ಲಿ ಆಘ್ರಾಣಿತವೆಂದೂ ಹೇಳಿರುವುದರಿಂದ ಉಪಾಘ್ರಾಣಿತವೆಂದರೆ ಗೋವು ಪಶುಸ್ವಭಾವ ದಂತೆ ಮೂತಿಯನ್ನು ಸೋಕಿಸೋಕದದಹಾಗೆ ಮಾಡಿ ತಿನ್ನುವುದಕ್ಕಾಗಿ ಮೂಸಿದರೆ ಅಭಕ್ಷ್ಯವು, ಆಘ್ರಾತವೆಂದರೆ ಗೋವಿನ ಉಸಿರು ಮಾತ್ರ ಸೋಕಿದರೆ ಶುದ್ಧಿಮಾಡಿ ಭಕ್ಷಿಸಬಹುದು, ಎಂದರ್ಥ. "ಅವಧೂತಂ" ಎಂದರೆ ದಾಟುವುದು ಮುಂತಾದ್ದ ರಿಂದ ಕಾಲಿನ ಗಾಳಿಯು ಅನಿಚ್ಛೆಯಿಂದ ತಗಲಿದರೆ ಅನ್ನವನ್ನು ಶುದ್ಧಿಮಾಡಿ ತಿನ್ನ ಬಹುದು. ಹಾಗಲ್ಲದೆ ಬೇರೆ ವಚನದಲ್ಲಿ ಹೇಳುವ ಪ್ರಕಾರ ಬೇಕೆಂದು ಕಾಲನ್ನು ಅಥವಾ ಕಾಲಿನ ಗಾಳಿಯನ್ನು ಅನ್ನಕ್ಕೆ ತಗಲಿಸಿದರೆ ಅದು ಅಭಕ್ಷ್ಯವಾಗುವುದು.[23] "ಕೇಶದೂಷಿತ" ಎಂದರೆ ಕೂದಲು ಅನ್ನಕ್ಕೆ ಬಿದ್ದು ಅನ್ನವು ಅಶುಚಿಯಾಗುವುದು. ಅದನ್ನು ಶುದ್ಧಿಮಾಡಿ ತಿನ್ನಬಹುದು. "ಕೀಟ"ವೆಂದರೆ ಕ್ಷುದ್ರಜೀವಗಳು, ಅವು ಕೊಳೆಯಲ್ಲಿಯೂ ಕೊಳೆತ ಪದಾರ್ಥಗಳಲ್ಲಿಯೂ ಜನಿಸುವುವು. ಅವು ಬದುಕಿದ್ದು ಅನ್ನಕ್ಕೆ ಬಿದ್ದರೆ ಅಥವಾ ಸೋಕಿದರೆ ಅನ್ನವು ಅಶುದ್ಧವಾಗುವುದಿಲ್ಲ. ಅವು ಸತ್ತು ಅನ್ನಕ್ಕೆ ಬಿದ್ದರೆ ಶುದ್ಧಿಮಾಡಬೇಕು. ಅಮೇಧ್ಯದಲ್ಲಿ ಜನಿಸಿ ಜೀವಿಸುವ ಕ್ರಿಮಿಗಳು ಬದುಕಿದ್ದು ಅನ್ನಕ್ಕೆ ತಗಲಿದರೂ ಶುದ್ಧಿಮಾಡಲೇಬೇಕು.[24] "ಕೇಶಕೀಟಾವಪನ್ನ" ವಾದ ಅನ್ನವು ಅಭೋಜ್ಯವೆಂದು ಹೇಳುವ ಗೌತಮ ವಚನವು[25] ಕೇಶಕೀಟಾದಿಗಳ

---

21 ಪತತ್ರಿಣಾವಲೀಢಂ ಚ ಶುನಾ ಸಂಸ್ಪೃಷ್ಟಮೇವ ಚ ॥ (ಪರಿವರ್ಜ್ಯಂ) ಮ-iv-೨೦೮॥ ಪತತ್ರೀ ಪಕ್ಷೀ, ಸ ಚ ಕ್ರವ್ಯಾದಃ ಗೃಧ್ರಕಾಕಾದಿಸ್ಸಮಾಚಾರಾತ್ ನ ತು ಹಂಸಾದಿಃ ॥ಮೇಧಾತಿಥಿಃ॥ ಈ ಪ್ರಕರಣದಲ್ಲಿ ಅನ್ನವೆಂದರೆ ಎಲ್ಲಾ ಅಟ್ಟ ಅಹಾರವು ಎಂದರ್ಥ.

22 ಗವಾ ಚಾನ್ನಮುಪಘ್ರಾತಂ . .(ಪರಿವರ್ಜಯೇತ್)॥ ಮ-iv-೨೦೯॥

23 ಪದಾ ಸ್ಪೃಷ್ಟಂ ಚ ಕಾಮತಃ . (ಪರಿವರ್ಜಯೇತ್)॥ ಮ-iv-೨೦೭॥

24 ಕೇಶಾಃ ಮನುಷ್ಯಾಣಾಂ ಚ್ಯುತಾಃ । ಕೀಟಾಃ ಕ್ಷುದ್ರಜಂತವಃ ॥ ಕೃಮಯಸ್ತೇ ಕೇಚಿತ್ ಗೃಹೇ ಸ್ವೇದಾನ್ನಾದ್ಯಜಾಃ । ತೇ ಜೀವಂತೋ ಮಕ್ಷಿಕಾವತ್ ನೋಪಘ್ನಂತಿ । ಮೃತಾನಾಂ ತೇಷಾಮನ್ನಸ್ಪರ್ಶೇ ಶುದ್ಧಿರಿಯಂ । ಯೇತ್ವಮೇಧ್ಯಸಂಸರ್ಗಜಾಸ್ತೇ ವಿಡ್ಭೋಜಿನಶ್ಚ ತೇಷಾಂ ಜೀವತಾಮಪಿ (ಶುದ್ಧಿರಿಯಂ) ॥

25 ನಿತ್ಯಮಭೋಜ್ಯಂ ಕೇಶಕೀಟಾವಪನ್ನಂ ॥ಗೌತಮಃ॥

ಸಹಿತವಾಗಿ ಅಟ್ಟ ಅನ್ನದ ವಿಷಯವು.[26] ಆಹಾರವಸ್ತುವು (ಅಡಿಗೆಗೆ ಮೊದಲು) ಮಲಿನವಾದರೆ, ಅಷ್ಟಂಶವನ್ನು ಪರಿಹರಿಸಿ ಉಳಿದುದನ್ನು ಕುಟ್ಟಿ ತೊಳೆದು ಶುದ್ಧಿ ಮಾಡಿಕೊಳ್ಳುವುದು. ಅಟ್ಟುದು ಅಧಿಕವಾಗಿದ್ದರೆ ದೂಷಿತಾಂಶವನ್ನು ಪರಿಹರಿಸಿ ಉಳಿದುದನ್ನು ಶುದ್ಧಿಮಾಡಿಕೊಳ್ಳಬೇಕು.[27]

## ೬. ಜಲಶುದ್ಧಿ

ನೀರು ಪ್ರಾಣಿಗಳಿಗೆ ಅತ್ಯವಶ್ಯವಾದ ವಸ್ತುವು, ಪ್ರಾಣಿಗಳ ಪ್ರಾಣವೇ ಅದು. ಅದೆಲ್ಲೆಲ್ಲಿಯೂ ಸಿಗುತ್ತದೆ. ಸದಾ ಸರ್ವಪ್ರಕಾರದಿಂದಲೂ ಬಳಸುವ ವಸ್ತುವಾದುದರಿಂದ ಎಲ್ಲಿ ಎಂಥಾದ್ದು ಸಿಕ್ಕಿದರೆ ಅಂಥಾದ್ದರಿಂದಲೇ ನಿರ್ವಾಹವಾಗಬೇಕು, ಅಶುದ್ಧವೆಂದುಬಿಡುವುದಕ್ಕಿಲ್ಲ. ಧಾನ್ಯಾದಿಗಳಂತೆ ಶೇಖರಿಸಿಕೊಳ್ಳುವುದೂ ಅಲ್ಲ. ಆದುದರಿಂದ ಶುದ್ಧವಾದುದು ಸಿಕ್ಕಿದರೆ ಪ್ರಕೃತಿರೂಪದಲ್ಲಿಯೂ, ಅಶುದ್ಧವಾಗಿದ್ದರೆ ಶುದ್ಧಿ ಮಾಡಿಕೊಂಡೂ, ಬಳಸಬೇಕು. ಮಿಕ್ಕ ಬಳಕೆಗಳಿಗಿಂತಲೂ ಕುಡಿಯುವ ಅಡಿಗೆಗೆ ಉಪಯೋಗಿಸುವ ನೀರಿನ ವಿಷಯದಲ್ಲಿ ವಿಶೇಷ ಶೋಧನಕ್ರಮವನ್ನು ಇಟ್ಟುಕೊಳ್ಳಬೇಕು. ಅವಶ್ಯವಾಗಿ ಕಂಡರೆ ಕಾಯಿಸಿಯಾಗಲೀ ಔಷಧಗಳನ್ನು ಮಿಶ್ರಮಾಡಿಯಾಗಲೀ ಹಿತಕರವಾಗಿ ಮಾಡಿಕೊಂಡು ಉಪಯೋಗಿಸಬೇಕು.[1] ಸಿಕ್ಕಿ ಸಿಕ್ಕಿದಕಡೆ ಇರುವುದರಿಂದ ಸರ್ವಪ್ರಕಾರದಿಂದಲೂ ನೀರು ಅಶುದ್ಧವಾಗುತ್ತಲೇ ಇರುವುದು. ಅನೇಕ ವಿಧವಾದ ಸಾಂಕ್ರಾಮಿಕ ಜಾಡ್ಯಗಳೂ ನೀರಿನಿಂದಲೇ ಅಂಟುವುದು. ಸಾಧಾರಣವಾಗಿ ಯಾವ ನೀರು ಯಾವ ಪ್ರಕಾರವಾಗಿ ಕೆಟ್ಟಿದೆ ಎಂದು ತಿಳಿಯುವುದಕ್ಕೆ ಸಾಧ್ಯವಲ್ಲ. ಅದರಿಂದ ನೀರಿನ ವಿಷಯದಲ್ಲಿ ಎಷ್ಟು ಜಾಗರೂಕತೆಯಿಂದಿದ್ದರೂ ಕಡಿಮೆಯೇ.

ನೆಲದ ಮೇಲೆ ವಾಸಮಾಡುವ ಜೀವಿಗಳಿಗೆ ಮಳೆಯೇ ನೀರಿಗೆ ಮೂಲಾಧಾರ. ಸಮುದ್ರದ ನೀರು ಬಿಸಿಲಿನಿಂದ ಕಾದು ಆವಿಯಾಗಿ ಮೇಲಕ್ಕೆದ್ದು ಮೋಡವಾಗಿ ಮಳೆಯ ರೂಪದಲ್ಲಿ ಸುರಿಯುತ್ತದೆ. ಆವಿಯಾದ ನೀರು ಪರಿಶುದ್ಧವಾದುದು.

---

26 ಯತ್ತು ಗೌತಮೇನೋಕ್ತಂ ನಿತ್ಯಮಭೋಜ್ಯಂ ಕೇಶಕೀಟಾವಪನ್ನಮಿತಿ ತತ್ಕೇಶಕೀಟಾದಿಭಿಸ್ಸಹಯತ್ಪಕ್ವಂ ತದ್ವಿಷಯಂ ॥ ಮಿತಾಕ್ಷರಾ-ಯಾ-i-೧೮೯॥

27 ಅಸಿದ್ಧಾನ್ನಸ್ಯ ಯನ್ಮಾತ್ರಮಭಿಹತಂ ತನ್ಮಾತ್ರಂ ಪರಿತ್ಯಜ್ಯ ಶೇಷಸ್ಯ ಕಂಡನಪ್ರಕ್ಷಾಳನೇ ಕುರ್ಯಾತ್॥೨೪॥ ದ್ರೋಣಾಧಿಕಸ್ಯ ಸಿದ್ಧಮನ್ನಮುಪಹತಂ ನ ದುಷ್ಯತಿ ॥೨೫॥ ತಸ್ಯೋಪಹತಮಾತ್ರಮಪಾಸ್ಯ ಗಾಯತ್ರ್ಯಾಭಿಮಂತ್ರಿತಂ ಸುವರ್ಣಾಂಭಃ ಪ್ರಕ್ಷಿಪೇತ್॥೨೬॥ ವಿ-೨೩॥

1 ಪಾನೀಯಂ ಪ್ರಾಣಿನಾಂ ಪ್ರಾಣಾ ವಿಶ್ವಮೇವ ಚ ತನ್ಮಯಂ । ಅತೋಽತ್ಯಂತನಿಷೇಧೇಪಿ ನ ಕ್ವಚಿದ್ವಾರಿ ವಾರ್ಯತೇ ॥ ...ನ ಹಿ ತೋಯಾದ್ವಿನಾ ವೃತ್ತಿಸ್ಸ್ವಸ್ಥಸ್ಯ ವ್ಯಾಧಿತಸ್ಯ ಚ । ಕೇವಲಂ ಸೌಷಧಂ ಪಕ್ವಮಾಮಮುಷ್ಣಂ ಹಿತಂ ಚ ತತ್ ॥ ಸಮೀಕ್ಷ್ಯ ಮಾತ್ರಯಾ ಯುಕ್ತಮಮೃತಂ ವಿಷಮನ್ಯಥಾ ॥ಅ.ಸಂ-ದ್ರವದ್ರವ್ಯವಿಜ್ಞಾನೀಯ-ತೋಯವರ್ಗ॥

ಅದನ್ನು ಆಯುರ್ವೇದದಲ್ಲಿ ಗಂಗಾಜಲವೆನ್ನುತ್ತಾರೆ.[2] ಮಳೆಯು ಸುರಿಯುವಾಗ ವಾಯುಮಂಡಲದಲ್ಲಿ ಸೇರಿದ ಧೂಳು ಮುಂತಾದ ಅಲ್ಪಸ್ವಲ್ಪ ಕೆಟ್ಟ ಪದಾರ್ಥಗಳು, ಅದೂ ಮೊದಮೊದಲು ಮಳೆ ಹುಯ್ಯುವಾಗ,[3] ಹುಯ್ಯುವ ಅತ್ಯಲ್ಪಕಾಲದಲ್ಲಿ, ಹನಿಗಳಿಗೆ ಸೇರಬಹುದೇ ವಿನಾ, ಸಾಧಾರಣವಾಗಿ ಮಳೆಯ ನೀರು ಪರಿಶುದ್ಧವಾದುದೇ. ಅದನ್ನು, ಜೀವನವೆಂದೂ, ತೃಪ್ತಿಕರವೆಂದೂ, ಆಪ್ಯಾಯಮಾನವೆಂದೂ, ಆಹ್ಲಾದಕಾರಕವೆಂದೂ, ಬುದ್ಧಿಗೆ ವಿಕಾಸವನ್ನು ಕೊಡುವುದೆಂದೂ, ಲಘು ಸಿಹಿ ಅಮೃತವೆಂದೂ, ಆಯುರ್ವೇದದಲ್ಲಿ ಪ್ರಶಂಸಿಸಿದ್ದಾರೆ.[4] ಮಳೆಯ ನೀರನ್ನೇ ಸಂಗ್ರಹಿಸಿಟ್ಟುಕೊಳ್ಳುವುದು ಸಾಧ್ಯವಲ್ಲ. ಅದೆಲ್ಲಾದರೂ ನೆಲದಮೇಲೆ ಶೇಖರವಾಗಿ ಅಲ್ಲಿಂದಲೇ ನಮಗೆ ಲಭ್ಯವಾಗುತ್ತಿರಬೇಕು. ಶೇಖರವಾದುದು ಸ್ಥಳಾನುಗುಣವಾಗಿಯೂ ಕಾಲಾನುಗುಣವಾಗಿಯೂ ಹಿತವೂ ಅಹಿತವೂ ಆಗುವುದು.[5] ಆ ನೀರು ನಮಗೆ ಸಿಗುವುದಕ್ಕೆ ಭಾವಿ ಕೊಳ ಕೆರೆ ನದಿ ಸರೋವರ ಭೂಮಿಯಿಂದುಕ್ಕುವುದು(ಬುಗ್ಗೆ), ಬೆಟ್ಟದಿಂದ ಸ್ರವಿಸುವುದು(ಪ್ರಸ್ರವಣ), ಬೆಟ್ಟವು ತಾನಾಗಿ ಶೀಳಿ ಸಂದಿಯಿಂದ ಹರಿಯುವುದು (ಚೌಂಡ್ಯ), ಎಂಬ ಎಂಟು ಆಸರೆಗಳು.[6] ಈ ಭೇದಗಳಿಗನುಗುಣವಾಗಿ ನೀರಿನ ರುಚಿಯೂ ಫಲವೂ ಸಹ ಭಿನ್ನ ಭಿನ್ನವಾಗಿರುವುವು, ಅದನ್ನರಿತು ನೀರನ್ನು ಉಪಯೋಗಿಸಬೇಕು.

ಶೇಖರವಾದ ಜಲವು ಅನೇಕ ಕಾರಣಗಳಿಂದ ಕೆಡುವುದು. ಅವೆಲ್ಲವನ್ನೂ ವಿವರಿಸುವುದು ಅನವಶ್ಯ. ಸಾಮಾನ್ಯವಾಗಿ ಕ್ರಿಮಿಗಳಿಂದಲೂ ವಿಷಜಂತುಗಳಿಂದಲೂ ಜಲಮಲಾದಿಗಳಿಂದಲೂ ಕಸಕಡ್ಡಿಗಳು ಕೊಳೆಯುವುದರಿಂದಲೂ ಕೆಸರು ಶೇಖರವಾಗುವುದರಿಂದಲೂ ಪಾಚಿ ಮುಂತಾದ ಜಲಜಗಳು ಬೆಳೆಯುವುದರಿಂದಲೂ ನೀರು ಕೆಡುವುದು.[7] ದುರ್ವಾಸನೆಯಿಂದಲೂ ವರ್ಣವ್ಯತ್ಯಾಸದಿಂದಲೂ

---

2 ಸೂರ್ಯೋದ್ಧೃತಪ್ರಮುಕ್ತತ್ವಾಲ್ಲಘುವಾತಕಫಾಹರಂ । ಗಂಗಾಂಬು ನಭಸೋ ಭ್ರಷ್ಟಂ ...॥ಅ.ಸಂ-ತೋಯವರ್ಗ॥

3 ಅಭಿವೃಷ್ಟಂ ...। ಅನಾರ್ತವಂ ಚ ಯದ್ದಿವ್ಯಮಾರ್ತವಂ ಪ್ರಥಮಂ ಚಯತ್॥ ... (ತದ್ವರ್ಜಯೇತ್)॥ಅ.ಸಂ-ತೋಯವರ್ಗ॥

4 ಜೀವನಂ ತರ್ಪಣಂ ಹೃದ್ಯಂ ಹ್ಲಾದಿ ಬುದ್ಧಿಪ್ರಬೋಧನಂ। ತನ್ವವ್ಯಕ್ತರಸಂ ಮೃಷ್ಟಂ ಶೀತಂ ಲಘ್ವಮೃತೋಪಮಂ ॥ಅ.ಸಂ-ತೋಯವರ್ಗ॥

5 (ಗಂಗಾಂಬು ನಭಸೋಭ್ರಷ್ಟಂ) ...ಹಿತಾಹಿತತ್ವೇ ತದ್ಭೂಯೋಃ ದೇಶಕಾಲಾವಪೇಕ್ಷತೇ ॥ಅ.ಸಂ-ತೋಯವರ್ಗ॥

6 ಕೌಪಸಾರಸತಾಡಾಗಚೌಂಡ್ಯಪ್ರಸ್ರವಣಾದ್ಭಿದಂ। ವಾಪೀ ನದೀ ತೋಯಮಿತಿ ತತ್ಪುನಸ್ಸ್ಮೃತಮಷ್ಟಧಾ ॥ಅ.ಸಂ-ತೋಯವರ್ಗ॥

7 ಕೀಟಾಹಿಮೂತ್ರವಿಟ್ಕೋಥ ತೃಣಜಾಲೋತ್ಕಲಾವಿಲಂ। ಪಂಕಪಂಕಜಶೈವಾಲಹತಪರ್ಣಾದಸಂಸ್ಕೃತಂ॥ ಸೂರ್ಯೇಂದುಪವನಾದೃಷ್ಟಂ ದುಷ್ಟಂ ಚ ಕ್ಷುದ್ರಜಂತುಭಿಃ। ... ಲೂತಾದಿತಂತುವಿಣ್ಮೂತ್ರವಿಷಸಂಶ್ಲೇಷದೂಷಿತಂ॥ಅ.ಸಂ-ತೋಯವರ್ಗ॥

ನೊರೆ ಗುಳ್ಳೆಗಳೇಳುವುದರಿಂದಲೂ ನೀರಿನ ದೋಷವು ಗೋಚರವಾಗುವುದು.[8] ಕೆಟ್ಟ ನೀರನ್ನು ವರ್ಜ್ಯಮಾಡಬೇಕು, ಬೇರೆ ಒಳ್ಳೆಯ ನೀರು ಸಿಗದಿದ್ದರೆ ಅದನ್ನೇ ಶುದ್ಧಿ ಮಾಡಿಕೊಳ್ಳಬೇಕು.[9]

ಪ್ರಕೃತಿನಿಯಮದಿಂದಲೇ ನೀರು ಶುದ್ಧವಾಗುವುದೂ ಉಂಟು. ಬಿಸಿಲಿನಿಂದಲೂ ಬೆಳದಿಂಗಳಿಂದಲೂ ಗಾಳಿಯಿಂದಲೂ ನೀರು ಶುದ್ಧವಾಗುವುದು.[10] ಬಾವಿಯ, ಆಳವಾದ ಹಳ್ಳದ, ನೀರು ಸ್ರವಿಸುವುದರಿಂದ ಶುದ್ಧವಾಗುವುದು.[11] ದುರ್ಗಂಧದ, ದುರ್ವರ್ಣದ, ರುಚಿಕೆಟ್ಟ, ನೀರು ಶುದ್ಧವಾದ ನೆಲಕ್ಕೆ ಹರಿದುಬಂದು ಅಲ್ಲಿ ಕೆಲವು ಕಾಲದವರೆಗೆ ನಿಂತರೆ ತಾನಾಗಿ ಶುದ್ಧವಾಗುವುದು.[12] ಹಾಗೆ ನಿಂತ ನೀರು ತಿಳಿಯಾಗಿ ಆಕಾಶಕ್ಕೆ ಸಮಾನವಾದ ವರ್ಣವನ್ನು ತಾಳಿದರೆ ಅದು ಶುದ್ಧವಾಯಿತೆಂದು ಗೊತ್ತು.[13] ಕಲ್ಲಿನ ಮೇಲೆ ಪ್ರವಹಿಸುವ ನೀರೂ ಶುದ್ಧವಾಗುವುದು.[14] ನೆಲದ ಮೇಲೆ ಹರಿಯುವ ನೀರು ವೇಗದಿಂದ ಶುದ್ಧವಾಗುವುದು, ಅಂದರೆ ಕೊಳೆಯ ನೀರು ಹರಿದುಹೋಗಿ ಹಿಂದೆ ಬರುವ ನೀರಿನಲ್ಲಿ ಕೊಳೆಯು ಕಾಣದಿದ್ದರೆ ಶುದ್ಧವಾಯಿತೆಂದರ್ಥ.[15] ನೊರೆಯೂ ಗುಳ್ಳೆಯೂ ಕಂಡರೆ ನೀರು ಶುದ್ಧವಾಗಿಲ್ಲವೆಂದು ತಿಳಿಯಬೇಕು[16] ಏಕೆಂದರೆ ಅವು ನೀರಿನಲ್ಲಿ ಮಿಶ್ರವಾದ ಮಲದ ರೂಪಾಂತರಗಳು—ಮಲವಿಲ್ಲದೆ ನೊರೆಯೂ ಗುಳ್ಳೆಯೂ ಏಳುವುದಿಲ್ಲ. ಇದೆಲ್ಲವೂ ಅಲ್ಪಜಲಕ್ಕೆ ಅನ್ವಯಿಸುವುದು. ಜೀವನದಿಗಳಿಗೂ ಸರೋವರಗಳಿಗೂ ಮುಂತಾದ ಅಕ್ಷೋಭ್ಯ ಜಲಾಶಯಗಳಿಗಲ್ಲ; ಅಗಾಧವಾದ ಜಲಸ್ತೋಮವೂ ಬೃಹತ್ತಾದ ಪ್ರವಾಹವೂ ಬಿದ್ದ ಅಷ್ಟಿಷ್ಟು

---

8 (ಅಭಿವೃಷ್ಟಂ) ವಿವರ್ಣಂ ಚ ಕಲುಷಂ ಸ್ಥೂಲಫೇನಿಲಂ। ವಿರಸಂ ಗಂಧವತ್...॥ ಅ.ಸಂ-ತೋಯವರ್ಗ॥ 9 ತದ್ವರ್ಜಯೇದಭಾವೇ ವಾ ತೋಯಸ್ಯಾನ್ಯಸ್ಯ ಶಸ್ತಯೇ ॥ ಅ.ಸಂ-ತೋಯವರ್ಗ॥ (ತದಿತಿದುಷ್ಟಂ) 10 ಗಂಗಾಂಬು (ನಭಸೋಭ್ರಷ್ಟಂ) ಸ್ಪೃಷ್ಟಂ ತ್ವರ್ಕೇಂದುಮಾರುತೈಃ ॥ಅ. ಸಂ.-ತೋಯವರ್ಗ॥ 11 ಖಾತಧೌತಶಿಲಾಪೃಷ್ಠವಸ್ತ್ರಾದಿಭ್ಯಸ್ಸ್ರುತಂ ಜಲಂ। (ಪಿಬೇತ್) ॥ಅ.ಸಂ-ತೋಯವರ್ಗ॥

12 ಅಪಶ್ಶುದ್ಧಾ ಭೂಮಿಗತಾ ವೈತೃಷ್ಣ್ಯಂ ಯಾಸು ಗೋರ್ಭವೇತ್। ಅವ್ಯಾಪ್ತಶ್ಚೇದಮೇಧ್ಯೇನ ಗಂಧವರ್ಣರಸಾನ್ವಿತಾಃ ॥ಮ-೫-೧೨೮॥ (ವೈತೃಷ್ಣ್ಯಂ ಯಾಸು ಗೋರ್ಭವೇದಿತಿ ಅಲ್ಪೋದಕನಿರ್ದೇಶಃ) ದಶರಾತ್ರೇಣ ಶುದ್ಧ್ಯಂತಿ ಭೂಮಿಷ್ಠಂ ಚ ನವೋದಕಂ ॥ ಯಾಪೋ॥ (ದಶೇತಿವಿಶುದ್ಧದೇಶನಿರ್ದೇಶಃ ; ನವೋದಕಮಿತಿ-ದುಷ್ಟಜಲೋಪಲಕ್ಷಣಂ)

13 ತದಭಾವೇ ಚ ಭೂಮಿಷ್ಠಮಾಂತರಿಕ್ಷಾನುಕಾರಿಯತ್॥(ತದ್ಗ್ರಾಹ್ಯಂ)॥ ಅ.ಸಂ-ತೋಯವರ್ಗ॥ 14 ಶಿಲಾಪೃಷ್ಠ (ವಸ್ತ್ರಾದಿಭ್ಯಶ್ಚ) ಸ್ರುತಂ ಜಲಂ (ಗ್ರಾಹ್ಯಂ) ॥ಅ.ಸಂ-ತೋಯವರ್ಗ॥ 15 ನದೀ ವೇಗೇನ ಶುದ್ಧ್ಯತಿ ॥ಮ-೫-೧೦೮॥ ನದೀ ವೇಗೇನಶುದ್ಧ್ಯೇತ ಯಾವ ಲೇಪೋ ನ ದೃಶ್ಯತೇ ॥ಪರಾ-೪-೨॥

16 ಅದ್ಭಿಸ್ತು ಪ್ರಕೃತಿಸ್ಥಾಭಿರ್ಹೀನಾಭಿಃ ಫೇನಬುದ್ಬುದೈಃ ॥ಯಾ-೧-೨೦॥ ಈ ವಚನವು ಆಚಮನಕ್ಕಾಗಿ ಹೇಳಿದ್ದರೂ ಎಲ್ಲಾ ವಿಧದ ಪಾನಸೇವನೆಗೂ ಉಪಲಕ್ಷಣವು.

ಕೊಳೆಯಿಂದ ಕೆಡುವ ಸಂಭವವೂ ಇಲ್ಲ, ಹಾಗೂ ಬಿದ್ದುದನ್ನು ಅಂಥಾ ಜಲದಲ್ಲಿರುವ ಮಲವನ್ನೇ ತಿಂದು ಜೀವಿಸುವ ಜಲಜಂತುಗಳು ತಿಂದುಬಿಡುತ್ತವೆ.[17]

ಬಾವಿಯ ನೀರು, ಸಣ್ಣ ಕೊಳಕಟ್ಟೆಯ ನೀರು, ದೋಣೆಯ ನೀರು, ಮನೆಯಲ್ಲಿ ತುಂಬಿ ಇಟ್ಟ ನೀರು, ಮುಂತಾದ ಅಲ್ಪೋದಕಗಳೇ ಮಲಿನವಾಗುವುವು. ನೀರಿಗೆ ಬಿದ್ದ ಸಣ್ಣ ಸಣ್ಣ ಕಸಗಳೂ ಕ್ಷುದ್ರಜಂತುಗಳೂ, ದಪ್ಪವಾದ, ಅಥವಾ ಮೂರುನಾಲ್ಕು ಮಡಿಕೆ ಮಾಡಿದ, ಬಟ್ಟೆಯಿಂದ ಶೋಧಿಸಿದರೆ ನಿವಾರಣೆಯಾಗುವುವು.[18] ಯಾವುದಾದರೂ ಪ್ರಾಣಿಯು ನೀರಿಗೆ ಬಿದ್ದು ಸತ್ತರೂ, ಪಾದರಕ್ಷೆ ಶ್ಲೇಷ್ಮ ಮಲಮೂತ್ರಗಳು ಬಿದ್ದರೂ, ನೂರಾರು ಗಡಿಗೆಯಷ್ಟು ನೀರನ್ನೆತ್ತಿಹಾಕಿ ಪಂಚಗವ್ಯದಿಂದ ಶುದ್ಧಿ ಮಾಡಿಕೊಳ್ಳಬೇಕು.[19] ಐದುಗುರಿನ ಪ್ರಾಣಿಯು ನೀರಿನಲ್ಲಿ ಬಿದ್ದು ಕೊಳೆತರೆ, ನೀರೆಲ್ಲವೂ ಅತ್ಯಂತೋಪಹತವಾಗುವುದು, ಆ ನೀರೆಲ್ಲವನ್ನೂ ಎತ್ತಿಹಾಕಿ, ಇಟ್ಟಿಗೆ ಕಟ್ಟಿದ್ದರೆ ಬೆಂಕಿಯಿಂದ ಸುಟ್ಟು, ಹೊಸ ನೀರು ಬಂದುದನ್ನು ಪಂಚಗವ್ಯದಿಂದ ಶುದ್ಧಿಮಾಡಬೇಕು. ಮನುಷ್ಯರ ಶವವು ಬಿದ್ದು ಕೊಳೆತರೂ ಹಾಗೆಯೇ ಮಾಡಬೇಕು.[20] ಈ ಪ್ರಕಾರದ ಶೋಧನವು ನೆಲದಮೇಲೆ ನಿಂತ ಅಲ್ಪ ಜಲಗಳಿಗೆ ಉಕ್ತವಾದವು.[21] ಆಯುರ್ವೇದದಲ್ಲಿ ಕೆಲವು ಶೋಧನಪ್ರಕಾರಗಳು ಉಕ್ತವಾಗಿವೆ:—ಕ್ಷುದ್ರಜಂತುಗಳು ನೀರಿನಲ್ಲಿ ಸತ್ತರೆ ಅದನ್ನು ವಸ್ತ್ರದಿಂದ ಶೋಧಿಸಿಕೊಂಡು ಕಾಯಿಸುವುದರಿಂದಲೂ ಕಾದ ಕಬ್ಬಿಣವನ್ನು ಅದಕ್ಕೆ ಹಾಕುವುದರಿಂದಲೂ ಅಥವಾ ಬಿಸಿಲಿನಲ್ಲಿಡುವುದರಿಂದಲೂ ದೋಷವನ್ನು ನಿವಾರಿಸಬೇಕು.[22] ಅಥವಾ ಪರ್ಣೀ ಮೂಲ ಕರಕ ವಜ್ರ ಗೋಮೇಧಿಕ ಇವುಗಳನ್ನು ನೀರಿಗೆ ಹಾಕಿ ಶೋಧಿಸಿಕೊಳ್ಳಬೇಕು.[23] ಪಾದ್ರೀ ಕಣಿಗಲೆ ಮುಂತಾದ ಹೂವುಗಳನ್ನು ನೀರಿಗೆ ಹಾಕಿದರೆ ದುರ್ಗಂಧವು ಹೋಗುವುದು.[24]

---

17 ಅಕ್ಷುದ್ರಾಣಾಮಪಾಂ ನಾಸ್ತಿ ಪ್ರಭೂತಾನಾಂ ಚ ದೂಷಣಂ ॥ವಿಷ್ಣುಃ॥

18 ಸ್ತೋಕಾನಾಮುದ್ಧೃತಾನಾಂ ಚ ಕಶ್ಮಲೇ ದೂಷಣಂ ಭವೇತ್ ॥ವಿಷ್ಣುಃ॥

19 ವಸ್ತ್ರಪೂತಂ ಜಲಂ ಪಿಬೇತ್ ॥ಮ-vi-೪೬॥ ಘನವಸ್ತ್ರಪರಿಸ್ರಾವ್ಯೈಃ ಕ್ಷುದ್ರಜಂತ್ವಭಿರಕ್ಷಣಂ ॥ಅ.ಸಂ-ತೋಯವರ್ಗ॥

20 ವಾಪೀಕೂಪತಾಟಾಕಾನಾಂ ದೂಷಿತಾನಾಂ ವಿಶುದ್ಧಯೇ । ಅಪಾಂ ಘಟಶತೋದ್ಧಾರಃ ಪಂಚಗವ್ಯೇನ ಶೋಧನಂ ॥ಸಂವರ್ತಃ॥

21 ಜಲಾಶಯೇಷ್ವಥಾಲ್ಪೇಷು ಸ್ಥಾವರೇಷು ಮಹೀತಲೇ। ಕೂಪವತ್ಕಥಿತಾಶುದ್ಧಿರ್ಮಹತ್ಸುತು ನ ದೂಷಣಂ ॥ವಿಷ್ಣುಃ॥

22 (ಘನವಸ್ತ್ರಪರಿಸ್ರಾವ್ಯೈಃ ಕ್ಷುದ್ರಜಂತ್ವಭಿರಕ್ಷಣಂ ।) ವ್ಯಾಪನ್ನಸ್ಯಾಸ್ಯ ತಪನಂ ಅಗ್ನ್ಯರ್ಕಾಯಸ ಪಿಂಡಕೈಃ ॥ಅ.ಸಂ-ತೋಯವರ್ಗ॥

23 ಪರ್ಣೀಮೂಲಬಿಸಗ್ರಂಥಿಮುಕ್ತಾಕತಕಶೈವಲೈಃ । ವಜ್ರಗೋಮೇಧಕಾಭ್ಯಾಂ ವಾ ಕಾರಯೇತ್ತತ್ಪ್ರಸಾದನಂ ॥ಅ.ಸಂ-ತೋಯವರ್ಗ॥

24 ಪಾಟಲಾಕರವೀರಾದಿಕುಸುಮೈರ್ಗಂಧನಾಶನಂ ॥ಅ.ಸಂ-ತೋಯವರ್ಗ॥

ಜಲಶುದ್ಧಿಯು ವ್ಯಕ್ತಿಮಾತ್ರಕ್ಕೇ ಅಲ್ಲ, ಸಾಮೂಹಿಕವಾದ ಆವಶ್ಯಕತೆಯು. ಸಾಮೂಹಿಕ ಜೀವನದಲ್ಲಿ ಸಾರ್ವಜನಿಕ ಹಿತಸಾಧನೆಯೇ ಧ್ಯೇಯವು. ಅದರಿಂದ ಸರ್ವರೂ ಉಪಯೋಗಿಸುವ ನೀರನ್ನು ಸರ್ವಪ್ರಕಾರದಿಂದಲೂ ನಿರ್ಮಲವಾಗಿ ಇಡ ಬೇಕು. ನೀರಿನೊಳಗೂ ನೀರಿನ ಸಮೀಪದಲ್ಲಿಯೂ ನದಿಯತೀರದಲ್ಲಿಯೂ ಜಲಮಲ ವಿಸರ್ಜನೆ ಮಾಡಬಾರದು.[52] ಜಲಮಲವೆಂದಿರುವುದು ಎಲ್ಲಾ ವಿಧವಾದ ಮಲಕ್ಕೂ ಉಪಲಕ್ಷಣವು. ಜಲಸ್ತೋಮದಲ್ಲಿ ಶೌಚವೂ ನಿಷಿದ್ಧವು. ಬಟ್ಟೆಯನ್ನೊಗೆಯು ವುದೂ ಪಾತ್ರೆ ಮುಂತಾದವುಗಳನ್ನು ತೊಳೆಯುವುದೂ ಪ್ರಾಣಿಗಳನ್ನು ಮೀಯಿಸಿ ತೊಳೆಯುವುದೂ ಜಲಸ್ತೋಮದಲ್ಲಿ ನಡೆಯಬಾರದು. ಅಲ್ಪಜಲದಲ್ಲಿ ನಾವೂ ಸ್ನಾನಮಾಡಬಾರದು; ಸ್ನಾನಕ್ಕೂ ಎತ್ತಿ ಹೊರಗೆ ತಂದ ನೀರನ್ನೇ ಉಪಯೋಗಿಸ ಬೇಕು.[26] ಈ ವಿಧವಾದ ತತ್ತ್ವಗಳನ್ನು ಪಾಲಿಸಿ ಸರ್ವರ ಹಿತವನ್ನೂ ಸಾಧಿಸಬೇಕು.

## ೭. ಗೃಹಶುದ್ಧಿ

ಮನೆಯನ್ನು ನಿರ್ಮಲವಾಗಿಟ್ಟುಕೊಳ್ಳಬೇಕೆಂಬುದರಲ್ಲಿ ಸರ್ವರಿಗೂ ಆಸಕ್ತಿ ಯಿದ್ದು, ಉದ್ಯಮವನ್ನೂ ಮಾಡುತ್ತಾರೆ. ಪರಿಷ್ಕಾರದಲ್ಲಿ ಮಾತ್ರ ಪರ್ಯಾಪ್ತಿಯಿಲ್ಲ. ಮೌಢ್ಯ ಆಲಸ್ಯ ಪ್ರಮಾದ ನಿರ್ಗತಿಕತ್ವ ಸಂಕುಚಿತಭಾವ ಇತ್ಯಾದಿಗಳಿಂದ ಪಾರಿಶುದ್ಧ್ಯವೂ ಶುದ್ಧಿವೈಶಾಲ್ಯವೂ ಇಲ್ಲ. ಇವೆಲ್ಲಕ್ಕೂ ದಾರಿದ್ರ್ಯವೇ ಮೂಲಕಾರಣ. ಮಿಕ್ಕವೆಲ್ಲವೂ ಅದನ್ನು ಅನುಸರಿಸಿಯೇ ಬರುವುವು. ದರಿದ್ರರ ಮನೋರಥಗಳು ಒಳಗೇ ಹುಟ್ಟಿ ಒಳಗೇ ವಿಲಯವಾಗಿಹೋಗುತ್ತವೆ.[1] ಸಿಕ್ಕಿದುದನ್ನು ತಿಂದು, ಉಟ್ಟು ಬಿಚ್ಚಿದ ಕೊಳಕು ಹರಕನ್ನೇ ಉಟ್ಟು, ಸಣ್ಣ ಗುಡಿಸಲಿನಲ್ಲೋ ಮೀರಿದರೆ ಸಣ್ಣ ಮನೆಯಲ್ಲಿಯೋ ಸೇರಿಕೊಂಡು, ಕಥೆಯನ್ನು ಕಳೆಯುವ ದೀನ ಮಾನವನು ಚೊಕ್ಕಟಶುಭ್ರವಾಗಿರೆಂದರೆ ಏನು ಮಾಡಿಯಾನು? ಅಂಥಾ ಜೀರ್ಣಪರ್ಣಕುಟಿ ಯನ್ನೂ ಚೊಕ್ಕಟವಾಗಿಯೂ ವ್ಯವಸ್ಥಿತವಾಗಿಯೂ ಇಟ್ಟುಕೊಳ್ಳಬೇಕಾದರೆ ಋಷಿ ಮುನಿಗಳಿಗಿದ್ದ ಉಚ್ಚ ಸಂಸ್ಕೃತಿಯಿರಬೇಕು. ಈ ಪರಿಸ್ಥಿತಿಯಲ್ಲಿ ಗೃಹನೈರ್ಮಲ್ಯವು ಅತ್ಯಂತ ಹೀನಸ್ಥಿತಿಗಿಳಿದಿದೆ. ಸ್ವಾವಲಂಬನ ಸಾಮರ್ಥ್ಯವಿರಲಿ, ಆದರ ಹಂಬಲವೂ

---

52 ನೋದಕೇ (ವಿಸರ್ಜಯೇತ್) ॥೨೦॥ ನೋದ್ಯಾನೋದಕಸಮೀಪಯೋಃ ॥೨೧॥ ವಿ-೬೦॥ ನ ನದೀತೀರಮಾಸಾದ್ಯ ॥ಮ-iv-೪೭॥ ನದೀತೀರವೆಂದರೆ ನದಿಯ ತುಂಬು ಪ್ರವಾಹವು ಉಭಯ ದಡದ ಮೇಲೂ ಪ್ರವಹಿಸಿ ಎಲ್ಲಿಯವರೆಗೆ ಹರಡುವುದೋ ಅಲ್ಲಿಯ ವರೆಗೂ ಎಂದು ವ್ಯವಸ್ಥೆ.

26 ಕೂಪೇಷೂದ್ಧೃತತೋಯೇನ ಸ್ನಾನಂ ಕುರ್ವೀತ ವಾ ಭುವಿ ॥ವಿಷ್ಣುಪುರಾಣ॥ ಅಪುತ್ಸ್ವಲ್ಪೇಷು ನ ಸ್ನಾಯಾತ್ ॥ವ್ಯಾಸ॥

1 ಉತ್ಥಾಯಂತೇ ವಿಲೀಯಂತೇ ದರಿದ್ರಾಣಾಂ ಮನೋರಥಾಃ । ಬಾಲವೈಧವ್ಯ ದಗ್ಧಾನಾಂ ವನಿತಾನಾಂ ಕುಚಾ ಇವ ॥ನೀತಿ॥

ನಹೆ ಇಲ್ಲ. ವಸತಿನಿರ್ಮಾಣಕ್ಕೂ ನಿರ್ಮಲೀಕರಣಕ್ಕೂ ಸರ್ಕಾರದ ಔದಾರ್ಯವು ಅನಿವಾರ್ಯವೆಂದಮೇಲೆ ಹೇಳುವುದೇನು ?

ಮನೆಯಲ್ಲಿ ಗೊದ್ದ ಗೆಜ್ಜಲು ಮುಂತಾದ ಕ್ಷುದ್ರಜೀವಗಳೂ ಇಲಿ ಹೆಗ್ಗಣ ಮುಂತಾದ ಕ್ಷುದ್ರಜಂತುಗಳೂ ನೊಣ ಸೊಳ್ಳೆ ತಗಣೆ ಮೊದಲಾದ ಕ್ರಿಮಿಗಳೂ ಜಾಡ ಹಲ್ಲಿ ಚೇಳು ಮುಂತಾದ ವಿಷಕ್ರಿಮಿಗಳೂ ಇನ್ನೂ ಬಿವರಿನಲ್ಲಿಯೂ ಕೊಳೆಯಲ್ಲಿಯೂ ಕೊಳೆತುದರಲ್ಲಿಯೂ ಜನಿಸುವ ಕ್ರಿಮಿಗಳೂ ಎಲ್ಲವೂ ಸೇರಿಕೊಂಡಿರುತ್ತವೆ. ಅವುಗಳಲ್ಲೇ ಒಂದನ್ನೊಂದು ತಿಂದುಹಾಕುವ ಜಾಡ ಕ್ರಿಮಿ ಹಲ್ಲಿ ಕೀಟ ಬೆಕ್ಕು ಇಲಿ ಮುಂತಾದವೂ ಇರುತ್ತವೆ, ಆದರೂ ಈ ಕ್ಷುದ್ರಜೀವಗಳು ಅತ್ಯಲ್ಪ ಕಾಲದಲ್ಲಿ ಅಸಂಖ್ಯಾತವಾಗಿ ಜನಿಸುವುದರಿಂದ ಹಾವಳಿಯು ತಪ್ಪಿದ್ದಲ್ಲ. ಇದರ ಮೇಲೆ ಕಸಕಡ್ಡಿಗಳು ಸತತವಾಗಿ ಬೀಳುತ್ತಿರುತ್ತವೆ. ಧೂಳಿಧೂಮಗಳು ಆವರಿಸುತ್ತಿರುತ್ತವೆ. ಜಾಡರಹುಳುಗಳು ಬಲೆಗಳನ್ನು ಕಟ್ಟುತ್ತಿರುತ್ತವೆ. ನಮ್ಮ ದೇಹದಿಂದಲೂ ಅನೇಕ ಪ್ರಕಾರವಾದ ಮಲಗಳು ಬೀಳುತ್ತಿರುತ್ತವೆ. ಇವೆಲ್ಲವೂ ನಿತ್ಯವೂ ಪ್ರಯತ್ನಪೂರ್ವಕವಾಗಿ ನಿವಾರಣೆಯಾಗಬೇಕು. ಸ್ಮೃತಿಕಾರರು ಗೃಹಶುದ್ಧಿಗೆ ಗುಡಿಸುವುದೂ ಸಾರಿಸುವುದೂ ನಡೆಯುತ್ತಿರಬೇಕೆಂದು ಸಂಗ್ರಹವಾಗಿ ಹೇಳಿದ್ದಾರೆ,[2] ಅವಶ್ಯವಾದಹಾಗೆಲ್ಲ ಅವು ನಡೆಯುತ್ತಲೇ ಇರಬೇಕೆಂದಭಿಪ್ರಾಯ. ಗುಡಿಸುವುದೆಂದರೆ ನೆಲವನ್ನು ಗುಡಿಸುವುದೆಂದಷ್ಟೇ ಅಲ್ಲ, ನೆಲ ಗೋಡೆ ಗೂಡು ಕಿಟಕಿ ಬಾಗಿಲು ಛಾವಣಿ ಒಳಗೆ ಹೊರಗೆ ಸುತ್ತಮುತ್ತ ಎಲ್ಲಾ ಕಡೆಯೂ ಗುಡಿಸಿ ಉಗುರು ಕೂದಲು ಕಸ ಕಡ್ಡಿ ಧೂಳು ಧೂಮ ಬಲೆ ಇಲ್ಲಣ ಬೂದಿ ಇದ್ದಲು ಕ್ರಿಮಿ ಕೀಟ ಎಲ್ಲವನ್ನೂ ಗುಡಿಸಿ ತೆಗೆದುಹಾಕಬೇಕೆಂದು ಅರ್ಥ. ಹಾಗೆಯೇ ಸಾರಿಸುವುದೆಂದರೆ ನೆಲವನ್ನೂ ಒಲೆಯನ್ನೂ ಗೋಮಯದಿಂದ ಲೇಪಿಸುವುದು ಮಾತ್ರವಲ್ಲ, ತೊಳೆಯುವುದನ್ನು ತೊಳೆಯಲೂಬೇಕು, ವರ್ಷಕ್ಕೊಂದಾವರ್ತಿಯಾದರೂ ಬಿರುಕುಗಳನ್ನು ಮುಚ್ಚಿ ಗೋಡೆಗಳಿಗೆ ಸುಣ್ಣವನ್ನು ತೊಡೆಯಲೂಬೇಕು, ರಂಗೋಲೆಯನ್ನಿಟ್ಟು ಕಾರಳಿತೆಗೆದು ಅಲಂಕರಿಸಲೂಬೇಕು ಎಂದಭಿಪ್ರಾಯ. ಹೀಗೆ ಸರ್ವಪ್ರಯತ್ನದಿಂದಲೂ ಮನೆಯನ್ನೋ ಗುಡಿಸಲನ್ನೋ ಯಾವುದನ್ನೋ ದೇವರು ಕೊಟ್ಟಿದ್ದನ್ನು ಪರಿಶುದ್ಧವಾಗಿಟ್ಟುಕೊಳ್ಳಬೇಕು.

ಮನೆಯನ್ನು ಶುದ್ಧಿ ಮಾಡಿದರೆ ನಿವಾಸವು ಶುದ್ಧವಾಯಿತೆಂದು ಭಾವಿಸಬಾರದು. ನಿವಾಸದ ಸುತ್ತಮುತ್ತಣ ಪ್ರದೇಶವೆಲ್ಲವೂ ನಿರ್ಮಲವಾಗಿರಬೇಕು, ಇಲ್ಲದಿದ್ದರೆ ಅದರಿಂದುಂಟಾಗುವ ಅಪಾಯವು ಮನೆಗೂ ಬಂದೇ ಬರುತ್ತದೆ. ಆದರಿಂದ ಗುಡಿಸಿ ತೆಗೆದ ಕಸಕಡ್ಡಿಗಳನ್ನು ಮನೆಯ ಮುಂದೆ ಸುರಿಯಬಾರದು, ಬಚ್ಚಲಿನಿಂದ ಹರಿಯುವ ನೀರು ಗೋಡೆಯ ಪಕ್ಕದಲ್ಲಿ ಅಥವಾ ಸಮೀಪದಲ್ಲಿ ನಿಂತು ಕೊಳೆತು ನಾರಬಾರದು, ಮನೆಯ ಸಮೀಪದಲ್ಲಿಯೇ ಜಲಮಲಗಳ ವಿಸರ್ಜನೆಯು

2 ಮಾರ್ಜನೋಪಾಂಜನೈರ್ವೇಶ್ಮ ॥ ಮ-೪.೧೨೨॥

ನಡೆಯಬಾರದು, ದನ ದನದ ಕೊಟ್ಟಿಗೆ ಇವುಗಳನ್ನೂ ಚೊಕ್ಕಟವಾಗಿ ಇಟ್ಟುಕೊಳ್ಳಬೇಕು, ಮನೆಯ ಸಮೀಪದಲ್ಲಿ ತಿಪ್ಪೆಯನ್ನು ಸುರಿದು ಅದು ಕೊಳೆತು ಗಾಳಿಯನ್ನು ಕೆಡಿಸುವಂತೆ ಮಾಡಬಾರದು, ತಿಪ್ಪೆಯನ್ನು ದೂರ ಹಾಕಬೇಕು, ಆದಮಟ್ಟಿಗೂ ನೆಲದಲ್ಲಿ ಹಳ್ಳವನ್ನು ಮಾಡಿ ಅದಕ್ಕೆ ಸುರಿದು ಅದು ನಾರದಹಾಗೆ ಆಗಾಗ ಮಲಶೋಧಕವೂ ಎಲ್ಲೆಲ್ಲೂ ಇರುವ ಮಣ್ಣನ್ನು ಅದರ ಮೇಲೆ ಮುಚ್ಚುತ್ತಾ ಹೋಗಬೇಕು. ಹಾಗೆ ಮಾಡುವುದರಿಂದ ಗಾಳಿಯೂ ಕೆಡುವುದಿಲ್ಲ, ದುರ್ಗಂಧವೂ ಇರುವುದಿಲ್ಲ. ಹೆಚ್ಚು ವಿವರಗಳನ್ನು ಸ್ವಬುದ್ಧಿಯಿಂದಲೂ ಸದಾಚಾರದಿಂದಲೂ ಆರೋಗ್ಯಶಾಸ್ತ್ರದಿಂದಲೂ ಕಲಿಯುವುದು.

ಕೆಲವು ಪ್ರಬಲವಾದ ಕಾರಣಗಳಿಂದ ನೆಲವು ವಿಶೇಷವಾಗಿ ಅಶುದ್ಧವಾಗುವುದು.—ಹಾಗೆ ಅಶುದ್ಧವಾದ ಸ್ಥಳವು ಅಮೇಧ್ಯ, ದುಷ್ಟ, ಮಲಿನವೆಂದು ಮೂರು ವಿಧವಾದುದು. **ಅಮೇಧ್ಯ**ವೆಂದರೆ ಹೆತ್ತ, ಸತ್ತ, ಸತ್ತವರನ್ನು ದಹನಮಾಡಿದ ಅಥವಾ ಮಣ್ಣುಮಾಡಿದ, ಮತ್ತು ಮಲಾದಿಗಳು ಶೇಖರವಾದ ಸ್ಥಳವು. **ದುಷ್ಟ**ವೆಂದರೆ ನಾಯಿ ಹಂದಿ ಕತ್ತೆ ಒಂಟೆ ಮುಂತಾದವು ಬಹಳ ಹೊತ್ತಿದ್ದ ಸ್ಥಳವು. **ಮಲಿನ**ವೆಂದರೆ ಇದ್ದಲು ಹೊಟ್ಟು ಕೂದಲು ಮೂಳೆ ಮುಂತಾದವು ಬಹಳ ಹೊತ್ತು ಶೇಖರವಾದ ಸ್ಥಳವು.[3] ಇವು ಸಾರಿಸಿ ಗುಡಿಸುವುದರಿಂದ ಶುದ್ಧವಾಗುವುದಿಲ್ಲ. ಇವಕ್ಕೆ ವಿಶೇಷವಾದ ಶುದ್ಧಿಪ್ರಕಾರವು ವಿಧಾಯಕವಾಗಿದೆ. ಗುಡಿಸಿ ಸಾರಿಸಿ ಸಗಣಿಯ ನೀರು ಗಂಜಲ(ಗೋವಿನ)ಗಳನ್ನು ಚುಮ್ಮಿಕಿಸಿ ಸ್ವಲ್ಪ ಮಣ್ಣನ್ನು ಅಗೆದು ಎತ್ತಿಹಾಕಿ ಒಂದು ಅಹೋರಾತ್ರಿ ಪರ್ಯಂತವಾಗಿ ಆ ಸ್ಥಳದಲ್ಲಿ ಗೋವುಗಳನ್ನು ತಡೆಯುವುದರಿಂದ ಶುದ್ಧವಾಗುವುದೆಂದು **ಮನು**ವೂ,[4] ಆ ಐದರ ಜತೆಗೆ ದಾಹ(ಸುಡುವುದು)ವನ್ನೂ ಸೇರಿಸಿ ಆರನ್ನು **ವಿಷ್ಣು**ವೂ, ಆ ಆರರ ಜತೆಗೆ ಎಷ್ಟು ಕಾಲ ಬಿಟ್ಟರೆ ಲೇಪಾದಿಗಳು ನಾಶವಾಗುವುವೋ ಅಷ್ಟು ಕಾಲ ಬಿಡುವುದನ್ನೂ ಸೇರಿಸಿ ಏಳನ್ನು **ಯಾಜ್ಞವಲ್ಕ್ಯ**ರೂ, ವಿಧಿಸಿದ್ದಾರೆ. ಅಮೇಧ್ಯ ದುಷ್ಟ ಮಲಿನಗಳು ಮೊದಮೊದಲಿನವು ಪ್ರಬಲವೂ ಆಮೇಲಾಮೇಲಿನವು ಬಲಹೀನವೂ ಆದುದರಿಂದ ತಾರತಮ್ಯದ

---

3 ಯತ್ರ ಪ್ರಸೂಯತೇ ನಾರೀ ಮ್ರಿಯತೇ ದಹ್ಯತೇಽಪಿ ವಾ । . .ಯತ್ರ ವಿಷ್ಠಾದಿ ಸಂಗತಿಃ ॥ ಏವಂ ಕಶ್ಮಲಭೂಯಿಷ್ಠಾ ಭೂರಮೇಧ್ಯಾ ಪ್ರಕೀರ್ತಿತಾ ॥ ಶ್ವಸೂಕರಖರೋಷ್ಟ್ರಾದಿಸಂಸ್ಪೃಷ್ಟಾ ದುಷ್ಟತಾಂ ವ್ರಜೇತ್ । ಅಂಗಾರತುಷಕೇಶಾಸ್ಥಿಭಸ್ಮಾದ್ಯೈರ್ಮಲಿನಾ ಭವೇತ್ ॥ದಕ್ಷಃ॥

4 ಸಂಮಾರ್ಜನೋಪಾಂಜನೇನ ಸೇಕೇನೋಲ್ಲೇಖನೇನ ಚ॥ ಗವಾಂ ಚ ಪರಿವಾಸೇನ ಭೂಮಿಶ್ಶುದ್ಧ್ಯತಿ ಪಂಚಭಿಃ ॥ಮ-v.೧೨೪॥ ಸಂಮಾರ್ಜನೇನಾಂಜನೇನ ಸೇಕೇನೋಲ್ಲೇಖನೇನ ಚ । ದಾಹೇನ ಚ ಭುವಶ್ಶುದ್ಧಿರ್ವಾಸೇನಾಪ್ಯಥವಾ ಗವಾಂ ॥ವಿ-೨೩-೫೭॥ ಭೂಶುದ್ಧಿರ್ಮಾರ್ಜನಾದ್ದಾಹಾತ್ಕಾಲಾದ್ಗೋಕ್ರಮಣಾತ್ತಥಾ । ಸೇಕಾದುಲ್ಲೇಖನಾಲ್ಲೇಪಾದ್ಗೃಹಂ ಮಾರ್ಜನಲೇಪನಾತ್ ॥ಯಾ-i.೧೮೮॥

ಅನುಸಾರವಾಗಿ ಶೋಧನವನ್ನು ಮಾಡಬೇಕು. ವಿವರವನ್ನು ಕುಲ್ಲೂಕರೂ ವಿಜ್ಞಾನೇಶ್ವರರೂ ವ್ಯಾಖ್ಯಾನದಲ್ಲಿ ತೋರಿಸಿದ್ದಾರೆ.

## ೮. ಗ್ರಾಮ (ಸಾರ್ವಜನಿಕ) ನೈರ್ಮಲ್ಯ

ದೇಹರಕ್ಷಣೆಗೆ ದೇಹಧರ್ಮವೂ, ಕುಟುಂಬದ ಶ್ರೇಯಸ್ಸಿಗೆ ಕುಲಧರ್ಮವೂ, ಹೇಗೋ ಹಾಗೆಯೇ ಗ್ರಾಮದ ನಿರ್ಮಲ ಜೀವನಕ್ಕೆ ಗ್ರಾಮಧರ್ಮವೂ ಅವಶ್ಯ. ಅದಕ್ಕೇನೂ ಹಣಕಾಸು ಮುಟ್ಟುವುದಿಲ್ಲ. ಅದಕ್ಕೆ ಬೇಕಾದುದು ವಿಶಾಲವಾದ ಮನೋಧರ್ಮ, ಶುದ್ಧ ಜೀವನದಲ್ಲಿ ಆಸಕ್ತಿ, ಪರಿಶ್ರಮದಲ್ಲಿ ಉತ್ಸಾಹ. ಗ್ರಾಮನಿವಾಸಿಗಳು ಪ್ರತಿಯೊಬ್ಬರೂ ಪ್ರತಿನಿತ್ಯವೂ ತಮ್ಮ ತಮ್ಮ ಮನೆಯ ಮುಂದೆ ಹಿಂದೆ ಪಕ್ಕಗಳು ಎಲ್ಲವನ್ನೂ ನಿರ್ಮಲವಾಗಿಟ್ಟುಕೊಂಡು ಮಾರ್ಗ, ಮೈದಾನ, ವನೋದ್ಯಾನ, ಗುಡಿಗೋಪುರ, ಜಲಜಲಾಶಯಗಳನ್ನು ಕೆಡಿಸದೆ ಇದ್ದರೆ ಗ್ರಾಮನೈರ್ಮಲ್ಯವು ತಾನಾಗಿ ಸಿದ್ಧಿಸುತ್ತದೆ. ಪ್ರತಿಯೊಬ್ಬರೂ ಎದ್ದಕೂಡಲೆ ತಮ್ಮ ತಮ್ಮ ಮನೆಗಳ ಮುಂದಣ ಬೀದಿಯನ್ನು ಗುಡಿಸಿ ಸಗಣಿಯ ನೀರು ಹಾಕಿ ರಂಗೋಲೆಯನ್ನಿಟ್ಟು ಶುದ್ಧವಾಗಿಯೂ ಅಂದವಾಗಿಯೂ ಮಾಡುವ ಆಚಾರವು ಇನ್ನೂ ಪ್ರಚಾರದಲ್ಲಿದೆ. ಬಾಲವೃದ್ಧರೂ ಆತುರನಾರಿಯರೂ ವಿನಾ ಮಿಕ್ಕವರು ಶೌಚಕ್ಕೆ ಊರಿನ ಹೊರಗೆ ಹೋಗುತ್ತಾರೆ. ಜಲಜಲಾಶಯಗಳನ್ನು ಶೌಚಾದಿಗಳಿಂದ ಮಲಿನ ಮಾಡುವುದಿಲ್ಲ. ಪಾನಜಲದಲ್ಲಿ ಸ್ನಾನಮಾಡುವುದಿಲ್ಲ, ಬಟ್ಟೆಯೊಗೆಯುವುದಿಲ್ಲ, ಪಾತ್ರೆಗಳನ್ನೂ ಪಶುಗಳನ್ನೂ ತೊಳೆಯುವುದಿಲ್ಲ, ದಾರಿಯಲ್ಲಿ ಬೇಕೆಂದು ಉಗುಳುವುದಿಲ್ಲ, ಮುಳ್ಳು ಬಕ್ಕರೆ ಗಾಜಿನ ಚೂರುಗಳನ್ನು ಹಾಕುವುದಿಲ್ಲ, ಯಾರಾದರೂ ಹಾಕಿದ್ದರೆ ತೆಗೆದುಹಾಕುತ್ತಾರೆ. ಸಾರ್ವಜನಿಕ ಸ್ಥಳಗಳನ್ನು ಮಲಿನಮಾಡುವುದಿಲ್ಲ, ಕೈಯಲ್ಲಾದ ಮಟ್ಟಿಕ್ಕೂ ಅದನ್ನು ಶುದ್ಧವಾಗಿಟ್ಟಿರುತ್ತಾರೆ. ಇತ್ಯಾದಿ ಜನೋಪಯೋಗಸೇವೆಗಳನ್ನು ಮೊನ್ನೆ ಮೊನ್ನೆಯವರೆಗೂ ಎಲ್ಲರೂ ಮಾಡುತ್ತಿದ್ದರು. ಈಗಲೂ ಎಷ್ಟೋ ಪುಣ್ಯಾತ್ಮರು ಮಾಡುತ್ತಿದ್ದಾರೆ. ಈಗೇನಾಗಿದೆಯೆಂದರೆ ಈ ಸದಾಚಾರಗಳು ಪರಿಷ್ಕಾರವಾಗಿ ನಡೆಯದೆ ನಡೆಯುವಷ್ಟು ಯಂತ್ರವತ್ತಾಗಿ ನಡೆಯುತ್ತಿದೆ. ಈ ಒಳ್ಳೆಯ ಪದ್ಧತಿಗಳನ್ನು ಬಿಡದೆ ಅವುಗಳ ಅರ್ಥವನ್ನೂ ತತ್ತ್ವವನ್ನೂ ಗ್ರಹಿಸಿ ಶ್ರದ್ಧೆಯಿಂದಲೂ ಉತ್ಸಾಹದಿಂದಲೂ ಮಾಡಿದರೆ ಅದಕ್ಕಿಂತಲೂ ಶ್ರೇಷ್ಠವಾದ ಗ್ರಾಮನೈರ್ಮಲ್ಯದ ಪ್ರಕಾರ ವಿನ್ನೊಂದಿಲ್ಲ. ಅದಕ್ಕಾಗಿ ಬೇರೊಂದು ಸಂಸ್ಥೆಯೂ ಸಹಕಾರಯೋಜನವೂ ಪ್ರಕೃತವೇ ಇಲ್ಲ. ಇದ್ದರೂ ಅದೊಂದು ದೊಡ್ಡ ದುಡ್ಡಿನ ಸಂಸಾರವಾಗಬೇಕಾದುದಿಲ್ಲ. ನಮ್ಮ ಮನೆಯಲ್ಲಿ ತಿಗಣೆ ಸೊಳ್ಳೆ ಹೆಚ್ಚಿದೆ, ಮನೆಯ ಮುಂದೆ ಕಸ ಬಿದ್ದಿದೆ, ನಮ್ಮ ಮಾರ್ಗಗಳು ಸರಿಯಾಗಿಲ್ಲ, ಸಾರ್ವಜನಿಕ ಸ್ಥಳಗಳು ಅರೂಪವಾಗಿವೆ, ಎಂಬ ದೂರು ಕೇಳಿಸುವುದೇ ಇಲ್ಲ. ನಿರ್ಮಲೀಕರಣವೇನೂ ಅಸಭ್ಯವರ್ತನವಲ್ಲ. ಸರ್ವರೂ ತಮ್ಮ ದೈಹಿಕ ಶೌಚವನ್ನು ಮಾಡಿಕೊಳ್ಳುವ ಹಾಗೆಯೇ ಸಾರ್ವಜನಿಕ ಶೌಚವೂ

ತಮ್ಮನ್ನೇ ಸೇರಿದ್ದು ಎಂಬ ವಿಶಾಲ ಭಾವನೆಯು ಮೂಡಬೇಕು, ಅದಕ್ಕಾಗಿ ಶ್ರಮಿಸಲೂಬೇಕು, ಶ್ರಮಿಸದಿದ್ದರೆ ಅದಕ್ಕೆ ಬಾಧೆಯನ್ನಾದರೂ ಮಾಡದಿರಬೇಕು. ಗ್ರಾಮಗಳಲ್ಲಿ ಇದು ಸುಗಮವಾದುದು. ನಗರಗಳಲ್ಲಿ ಕಷ್ಟಸಾಧ್ಯ—ಅಸಾಧ್ಯವಾದ ಜನಸಂದಣಿಯಿಂದಲೂ, ನಾನಾ ಪ್ರಕಾರದ ನಿವಾಸಿಗಳೂ ಪ್ರವಾಸಿಗಳೂ ಇರುತ್ತಲೂ ಬರುತ್ತಲೂ ಹೋಗುತ್ತಲೂ ಇರುವುದರಿಂದಲೂ, ಅನೇಕ ಪ್ರಕಾರದ ಉದ್ಯಮೋದ್ಯೋಗಗಳ ಪ್ರಯುಕ್ತವಾಗಿ ಕಶ್ಮಲವು ಅತಿಶೀಘ್ರದಲ್ಲಿಯೂ ಅತಿಪ್ರಮಾಣದಲ್ಲಿಯೂ ಶೇಖರವಾಗುವುದರಿಂದಲೂ, ನಗರದ ಹೊರಪ್ರದೇಶಕ್ಕೂ ಒಳಪ್ರದೇಶಕ್ಕೂ ಮಧ್ಯದಲ್ಲಿರುವ ಅಂತರದ ವೈಶಾಲ್ಯವು ದುರತಿಕ್ರಮವಾಗಿರುವುದರಿಂದಲೂ, ಗ್ರಾಮಗಳಲ್ಲಿ ನಿರ್ವಹಿಸುವಂತೆ ನಗರದಲ್ಲಿ ನಿರ್ವಹಿಸುವುದು ಸಾಧ್ಯವಲ್ಲ, ಆದರೂ ಸಾಧ್ಯವಾದಷ್ಟಾದರೂ ಮಾಡಬೇಕು. ಸಾರ್ವಜನಿಕ ಹಿತರಕ್ಷಣೆಗಾಗಿಯೇ ಋಷಿಗಳು ನಿರ್ಮಲಜೀವನದ ವಿಷಯವಾಗಿ ಉದಾತ್ತವಾದ ನಿಯಮಗಳನ್ನು ಮಾಡಿದ್ದಾರೆ. ಅವನ್ನು ಶೌಚ ಪ್ರಕರಣದಲ್ಲಿಯೂ ಶುದ್ಧೀಕರಣ ಪ್ರಕರಣದಲ್ಲಿಯೂ ವಿವರಿಸಿದೆ. ಈ ಋಷಿವಾಕ್ಯಗಳಲ್ಲಿ ಎದ್ದು ಕಾಣುವ ಮತ್ತೊಂದು ವೈಶಿಷ್ಟ್ಯವೇನೆಂದರೆ ಮಾನವ ಹಿತಸಾಧನೆಯು ಮಾತ್ರವೇ ಅವರ ಧ್ಯೇಯವಲ್ಲ, ಯಾವ ಜಂತುವಾಗಲೀ, ಅದೆಷ್ಟೇ ಕ್ಷುದ್ರವಾದುದಾಗಲೀ, ಅದಕ್ಕೂ ಸಹ ಅಹಿತವಾಗಬಾರದೆಂಬುದು. ಅಂಥಾ ವಚನಗಳನ್ನು ಭೂತದಯಾದಿ ಪ್ರಕರಣಗಳಲ್ಲಿ ಉದಹರಿಸಿದೆ. ಈ ಪ್ರಕಾರವಾಗಿ ಸರ್ವರೂ ಸ್ವಪರ ಹಿತಗಳನ್ನು ಸಮಾನವೆಂದು ಭಾವಿಸಿ ಸಾಧಿಸಿದರೆ ಇದೇ ಸ್ವರ್ಗ ಇದೇ ವೈಕುಂಠ ಇದೇ ಕೈಲಾಸ, ಅಲ್ಲಿರುವ ದೇವರನ್ನು ಇಲ್ಲಿಯೇ ಕಾಣಬಹುದು. ಸ್ವಾವಲಂಬನ ಸಾಮರ್ಥ್ಯವನ್ನು ಪಡೆದು ದೈನ್ಯವಿಲ್ಲದೆ ಬಾಳಲೂಬಹುದು.

## ೯. ಆಶೌಚ

ಜಾತಾಶೌಚ (ಪುರುಡು) ಮೃತಾಶೌಚ(ಸೂತಕ)[1] ವೆಂದು ಆಶೌಚವು ಎರಡು ವಿಧವು. ಸ್ತ್ರೀಯರಿಗೆ ಮಾತ್ರ ರಜೋದರ್ಶನ ಪ್ರಯುಕ್ತವಾಗಿ ಮತ್ತೊಂದು ಆಶೌಚ, ಅದು ಮೂರು ರಾತ್ರಿ ಇರುವುದು. ಆಶೌಚದಲ್ಲಿ ಯಾವ ಹವ್ಯಕವ್ಯಗಳನ್ನು ಮಾಡುವುದಕ್ಕೂ, ಮಾಡಿಸುವುದಕ್ಕೂ ಭಾಗವಹಿಸುವುದಕ್ಕೂ ಅರ್ಹತೆಯಿಲ್ಲ. ಆಶೌಚವು ನಿವೃತ್ತಿಯಾದಮೇಲೆ ನಿಂತಿದ್ದ ಶ್ರಾದ್ಧಾದಿಗಳನ್ನು ಸ್ನಾನದ ದಿವಸ ಮಾಡಬೇಕು.

**ಮೃತಾಶೌಚವು** ವರ್ಣಾನುಕ್ರಮವಾಗಿಯೂ, ಮೃತನ ಅವಸ್ಥಾನುಗುಣವಾಗಿಯೂ, ಸಂಬಂಧಾನುಗುಣವಾಗಿಯೂ, ವ್ಯವಸ್ಥೆಯಾಗಿದೆ. ಆಶೌಚದ ಕಾಲಮಾನವು ದಿನದಿಂದಲ್ಲ, ರಾತ್ರಿಯಿಂದಲೇ, ನಡೆಯುವುದು. ಹೆತ್ತು ದಿವಸದ,

---

1 ಸೂತಕವೆಂದರೆ ಜಾತಾಶೌಚವು, ರೂಢಿಯಲ್ಲಿ ಮೃತಾಶೌಚಕ್ಕೇ ಆ ಹೆಸರು—ಇಲ್ಲಿ ರೂಢಾರ್ಥವನ್ನೇ ಅನುಸರಿಸಿದೆ.

ಮೂರು ದಿನದ, ಆಶೌಚವೆಂದು ರೂಢಿಯಾಗಿ ಮಾತನಾಡಿದರೂ ದಶರಾತ್ರಿ, ತ್ರಿರಾತ್ರಿ, ಇತ್ಯಾದಿಯಾಗಿಯೇ ಶಾಸ್ತ್ರದಲ್ಲಿ ಪ್ರಯೋಗವಿರುವುದು. ರಾತ್ರಿಯನ್ನು ಮೂರುಭಾಗ ಮಾಡಿ ಮೊದಲ ಎರಡು ಭಾಗಗಳು ಅತೀತವಾಗುವುದರೊಳಗೆ ಆಶೌಚವು ಪ್ರಾಪ್ತವಾದರೆ ರಾತ್ರಿಶೇಷವೇ ಒಂದೆಂದು ಗಣನೆ, ಮೂರನೇ ಭಾಗದಲ್ಲಾದರೆ ಪರರಾತ್ರಿಯಿಂದ ಗಣನೆ. [1]ಜ್ಞಾತಿಸಂಬಂಧದಿಂದ ಪ್ರಾಪ್ತವಾಗುವ ಆಶೌಚವು ವರ್ಣಾನುಕ್ರಮವಾಗಿ ಹತ್ತು ಹನ್ನೆರಡು ಹದಿನೈದು ತಿಂಗಳು ಎಂದುಕ್ತವಾಗಿದೆ.[2] ಇದು ಸಗೋತ್ರ ಸಪಿಂಡರ ವಿಷಯ.[3] ಸಾಪಿಂಡ್ಯವು ಮೂಲಪುರುಷನಿಂದ ಏಳು ತಲೆಯವರೆಗೂ ಇರುವುದು.[4] ಏಳು ತಲೆ ಕಳೆದ ಮೇಲೆ ಸಗೋತ್ರರಿಗೆ ಸಮಾನೋದಕರೆಂದು ಸಂಕೇತ. ಸಮಾನೋದಕತ್ವವು ಹದಿನಾಲ್ಕು ತಲೆಯವರೆಗೆ ಎಂದು ಒಂದು ಮತ,[5] ಮೃತನು ತಮ್ಮ ವಂಶದವನೆಂದು ತಿಳಿದಿರುವವರೆಗೂ ಸಮಾನೋದಕತ್ವವೆಂದೊಂದು ಮತ.[6] ಸಮಾನೋದಕರಿಗೂ ಮತ್ತು ಅಸಗೋತ್ರ ಬಾಂಧವರಾದ ಮಗಳು ಸೋದರಿ ಸೋದರತ್ತೆ ದೌಹಿತ್ರ ಭಾವ ಭಾವನ್ಮೈದ ಸೋದರಮಾವ ಮಾವ ಅತ್ತೆ ಇವರಿಗೂ ತ್ರಿರಾತ್ರಾಶೌಚ.[7] **ಮೃತನ ಅವಸ್ಥಾನುಗುಣ**ವಾಗಿ ನಾಮಕರಣಕ್ಕೆ ಅಥವಾ ಹಲ್ಲು ಹುಟ್ಟುವುದಕ್ಕೆ ಮೊದಲು ಮೃತಪಟ್ಟರೆ ಸ್ನಾನ ಮಾತ್ರ; ಹಲ್ಲು ಹುಟ್ಟಿದ ಮೇಲೆ ಚೌಲದ ವಯಸ್ಸು ಬರುವುದರೊಳಗಾದರೆ ಒಂದು ರಾತ್ರಿ, ಚೌಲದ ವಯಸ್ಸಾಗಿ ಉಪನಯನದೊಳಗಾದರೆ ಮೂರು ರಾತ್ರಿ ಉಪನಯನವಾದಮೇಲಾದರೆ ಹತ್ತು ರಾತ್ರಿ, ಆಶೌಚವು.[8] **ಅತಿಕ್ರಾಂತಾಶೌಚವು** ದಶರಾತ್ರಿ ತ್ರಿರಾತ್ರಿಗಳ ಮಧ್ಯೆ ಮರಣವಾರ್ತೆ ತಿಳಿದರೆ ಕಳೆದದ್ದು ಜಾತ ಉಳಿದ ರಾತ್ರಿಗಳ ಪರ್ಯಂತ ಮಾತ್ರವೇ ಇರುವುದು.[9] ದಶರಾತ್ರಿಗಳು ಕಳೆದ ಮೇಲೆ ತಿಳಿದರೆ

---

2 ಶುದ್ಧ್ಯೇದ್ವಿಪ್ರೋ ದಶಾಹೇನ ದ್ವಾದಶಾಹೇನ ಭೂಮಿಪಃ । ವೈಶ್ಯಃ ಪಂಚದಶಾಹೇನ ಶೂದ್ರೋ ಮಾಸೇನ ಶುದ್ಧ್ಯತಿ ॥ಮ-v-೮೩॥ ಇಲ್ಲಿ ಅಹಶ್ಶಬ್ದಕ್ಕೆ ಅಹೋರಾತ್ರಿ, ಅಂದರೆ ರಾತ್ರಿಯೆಂದೇ ಅರ್ಥ.

3 ದಶಾಹಂಶಾವಮಾಶೌಚಂ ಸಪಿಂಡೇಷು ವಿಧೀಯತೇ ॥ಮ-v-೫೯॥ ಸಪಿಂಡೇಷು-ಸಗೋತ್ರೇಷು॥ 4 ಸಪಿಂಡತಾ ತು ಪುರುಷೇ ಸಪ್ತಮೇ ವಿನಿವರ್ತತೇ ॥ಮ-v-೬೦॥

5 ಸಮಾನೋದಕಭಾವಸ್ತು ನಿವರ್ತೇತಾಚತುರ್ದಶಾತ್ ॥ವೃದ್ಧಮನುಃ॥

6 ಸಮಾನೋದಕಭಾವಸ್ತು ಜನ್ಮನಾಮ್ನೋರವೇದನೇ ॥(ವಿನಿವರ್ತತೇ)॥ಮ-v-೬೦॥

7 ಅಸಪಿಂಡಂ ದ್ವಿಜಂ ಪ್ರೇತಂ ವಿಪ್ರೋ ನಿರ್ಹೃತ್ಯ ಬಂಧುವತ್ । ವಿಶುದ್ಧ್ಯತಿ ತ್ರಿರಾತ್ರೇಣ ಮಾತುರಾಪ್ತಾಂಶ್ಚ ಬಾಂಧವಾನ್ ॥ಮ-v-೧೦೧॥

8 ಆದಂತಜನ್ಮನಸ್ಸದ್ಯ ಆಚೂಡಾನ್ನೈಶಿಕೀ ಸ್ಮೃತಾ । ತ್ರಿರಾತ್ರಮಾವ್ರತಾದೇಶಾದ್ದಶರಾತ್ರಮತಃ ಪರಂ ॥ಯಾ-iii-೨೩॥

9 ವಿಗತಂ ತು ವಿದೇಶಸ್ಥಂ ಶೃಣುಯಾದ್ಯೋಹ್ಯನಿರ್ದಶಂ। ಯಚ್ಛೇಷಂ ದಶರಾತ್ರಸ್ಯ ತಾವದೇವಾಶುಚಿರ್ಭವೇತ್ ॥ಮ-v-೭೫॥ ಅನಿರ್ದಶಂ ಅನಿರ್ಗತದಶಾಹಾಶೌಚಕಾಲಂ ॥ ಕುಲ್ಲೂಕಃ॥

ಮೂರು ರಾತ್ರಿ ಆಶೌಚ, ವರ್ಷ ಕಳೆದ ಮೇಲೆ ತಿಳಿದರೆ ಸ್ನಾನ ಮಾತ್ರ.[10]

**ಜಾತಾಶೌಚವು** (ಪುರುಡು) ಸಗೋತ್ರ ಸಪಿಂಡರಿಗೆ ಮಾತ್ರವೇ. ಕಾಲ ಪರಿಮಾಣವೂ ಮೃತಾಶೌಚದಂತೆಯೇ ದಶರಾತ್ರಿಯೂ, ದಶರಾತ್ರಿಯ ಮಧ್ಯೆ ತಿಳಿದರೆ ಶೇಷರಾತ್ರಿಗಳೂ, ಇರುವುದು.[11] ಅತಿಕ್ರಾಂತಾಶೌಚವಿಲ್ಲ. ಅದೂ ಸಕಾಲದಲ್ಲಿ ಜನನವಾದರೆ ಮಾತ್ರವೇ. ಗರ್ಭಸ್ರಾವಕ್ಕೆ ಜ್ಞಾತಿಗಳಿಗೆ ಪುರುಡಿಲ್ಲ, ತಾಯಿಗೆ ಮಾತ್ರ ಗರ್ಭಮಾಸಗಳ (ಅಂದರೆ ಮೂರು ತಿಂಗಳಿಂದ ಏಳರವರೆಗೆ ಅದೂ ಸೇರಿ) ಲೆಕ್ಕದ ಪ್ರಕಾರ ಮಾಸಕ್ಕೊಂದು ರಾತ್ರಿ ಆಶೌಚ [12]

**ಅಂತರಾಶೌಚವೆಂದರೆ** ಒಂದಾಶೌಚದ ಮಧ್ಯದಲ್ಲಿ ಮತ್ತೊಂದಾಶೌಚವು ಬರುವುದು. ಹಾಗೆ ಬಂದರೆ ಆಶೌಚದ ಸಮಾನತ್ವ ನ್ಯೂನಾಧಿಕತ್ವ ಗುರುಲಘುತ್ವ ಗಳ ದೃಷ್ಟಿಯಿಂದ ಆಶೌಚವಿರುವುದನ್ನು ವ್ಯವಸ್ಥೆ ಮಾಡಿಕೊಳ್ಳಬೇಕು. ಒಂದು ದಶರಾತ್ರ್ಯಾಶೌಚದ ಮಧ್ಯೆ ಮತ್ತೊಂದು ಜನನ ಮರಣ ಪ್ರಯುಕ್ತವಾದ ಆಶೌಚವು ಪ್ರಾಪ್ತವಾದರೆ ಪೂರ್ವಾಶೌಚದ ಶೇಷಕಾಲ ಮಾತ್ರದಿಂದಲೇ ಶುದ್ಧಿಯು, ಪರಾಶೌಚವಿಲ್ಲ, ಎಂದು ಸ್ಮೃತಿವಾಕ್ಯವಿದೆ,[13] ಅದು ಸಂಕ್ಷೇಪೋಕ್ತಿ. ಅದನ್ನು ಮೇಲೆ ಹೇಳಿದ ವಿಷಯಗಳ ದೃಷ್ಟಿಯಿಂದ ಅರ್ಥ ಮಾಡಬೇಕು. ಮೃತಾಶೌಚವು ಮೃತಾಶೌಚಕ್ಕೂ ಜಾತಾಶೌಚವು ಜಾತಾಶೌಚಕ್ಕೂ ಸಮಾನವಾದವು, ಮೃತಾ ಶೌಚವು ಜಾತಾಶೌಚಕ್ಕಿಂತಲೂ, ದಶಾಹಾಶೌಚವು ತ್ರಿರಾತ್ರಕ್ಕಿಂತಲೂ, ತ್ರಿರಾತ್ರವು ಪಕ್ಷಿಣಿಗಿಂತಲೂ ಗುರುವಾದುದು. ಹಾಗೆಯೇ ಜ್ಞಾತಿಸಂಬಂಧವಾದ ಮೃತಾಶೌಚ ಕ್ಕಿಂತಲೂ ಮಾತಾಪಿತ್ರಾಶೌಚವೂ, ಮಾತ್ರಾಶೌಚಕ್ಕಿಂತಲೂ ಪಿತ್ರಾಶೌಚವೂ, ಗುರುವು. ಈ ಭೇದದ ನಿರ್ಣಯದಿಂದಲೇ ಯಾವುದು ಲುಪ್ತವಾಗುವುದು, ಯಾವು ದನ್ನು ಆಚರಿಸಬೇಕು, ಎಂಬುದರ ವ್ಯವಸ್ಥೆ. ಉದಾಹರಣೆಗಾಗಿ, ಮೃತಾಶೌಚದ ಮಧ್ಯೆ ಜಾತಾಶೌಚವು ಬಂದರೆ ಜಾತಾಶೌಚವು ಲುಪ್ತವಾಗುವುದು. ಹಾಗೆಯೇ ಜಾತಾಶೌಚದ ಮಧ್ಯದಲ್ಲಿ ಮೃತಾಶೌಚವು ಪ್ರಾಪ್ತವಾದರೆ ಜಾತಾಶೌಚವು ಅಲ್ಲಿಗೇ ಮುಗಿದುಹೋಗಿ, ಮೃತಾಶೌಚವನ್ನು ಪೂರ್ಣವಾಗಿ ಅನುಸರಿಸಬೇಕು. ಮೃತಾ ಶೌಚದ ಮಧ್ಯದಲ್ಲಿ ಮತ್ತೊಂದು ಮೃತಾಶೌಚವೂ, ಜಾತಾಶೌಚದ ಮಧ್ಯದಲ್ಲಿ ಮತ್ತೊಂದು ಜಾತಾಶೌಚವೂ ಬಂದರೆ ಪೂರ್ವಾಶೌಚವೇ ಆಚರಣೀಯವು, ಪರಾ

---

10 ಅತಿಕ್ರಾಂತೇ ದಶಾಹೇ ಚ ತ್ರಿರಾತ್ರಮಶುಚಿರ್ಭವೇತ್ । ಸಂವತ್ಸರೇವ್ಯತೀತೇತು ಸ್ಪೃಷ್ಟ್ವೈವಾಪೋ ವಿಶುದ್ಧ್ಯತಿ ॥ಮ-೫-೭೬॥

11 ಯಥೇದಂ ಶಾವ ಮಾಶೌಚಂ ಸಪಿಂಡೇಷು ವಿಧೀಯತೇ । ಜನನೇಪ್ಯೇವಮೇತ ತ್ಸ್ಯಾತ್....॥ಮ-೫-೬೧॥

12 ರಾತ್ರಿಭಿರ್ಮಾಸತುಲ್ಯಾಭಿರ್ಗರ್ಭಸ್ರಾವೇವಿಶುದ್ಧ್ಯತಿ ॥(ಮಾತಾ ಇತಿ)॥ಮ-೫-೬೬॥

13 ಅಂತರ್ದಶಾಹೇ ಸ್ಯಾತಾಂ ಚೇತ್ಪುನರ್ಮರಣಜನ್ಮನೀ । ತಾವತ್ಸ್ಯಾದಶುಚಿರ್ವಿಪ್ರೋ ಯಾವತ್ತತ್ಸ್ಯಾದನಿರ್ದಶಂ ॥ಮ-೫-೭೯॥

ಶೌಚಕ್ಕೆ ಲೋಪವು. ಮತ್ತು ದೀರ್ಘಕಾಲದ ಆಶೌಚದ ಮಧ್ಯೆ ಹ್ರಸ್ವಾಶೌಚವು ಬಂದರೂ ಹ್ರಸ್ವದ ಮಧ್ಯೆ ದೀರ್ಘವಾದುದು ಬಂದರೂ ಹ್ರಸ್ವಾಶೌಚವು ಲುಪ್ತವಾಗಿ ದೀರ್ಘವಾದುದನ್ನೇ ಆಚರಿಸಬೇಕು ಜ್ಞಾತಿಸಂಬಂಧದ ಆಶೌಚದ ಮಧ್ಯದಲ್ಲಿ ಮಾತಾಪಿತ್ರಾಶೌಚಗಳು ಬಂದರೂ, ಮಾತ್ರಾಶೌಚದ ಮಧ್ಯೆ ಪಿತ್ರಾಶೌಚವು ಬಂದರೂ ಪೂರ್ವಾಶೌಚಗಳು ಲುಪ್ತವಾಗಿ ಪರಾಶೌಚವನ್ನೇ ಕ್ರಮವಾಗಿ ಆಚರಿಸಬೇಕು.[14] ಮಿಕ್ಕ ಸಂದಿಗ್ಧತೆಗಳನ್ನು ಶಾಸ್ತ್ರಾವಲೋಕನದಿಂದ ಅರಿಯಬೇಕು.

**ಆಶೌಚದ ಕಾಲದಲ್ಲಿ** ಕೃತ್ರಿಮ ಲವಣವೂ ಮಾಂಸಭೋಜನವೂ ನಿತ್ಯನೈಮಿತ್ತಿಕ ಕರ್ಮಗಳೂ ನಿಷೇಧ; ಭೂಶಾಯಿಯಾಗಿ ಬ್ರಹ್ಮಚರ್ಯದಲ್ಲಿರಬೇಕು. ಮೊದಲು ಮೂರು ದಿವಸ ನದ್ಯಾದಿಗಳಲ್ಲಿ ಅವಗಾಹನಸ್ನಾನವನ್ನು ಮಾಡಬೇಕು.[15] ಆಶೌಚದವರನ್ನು ಇತರರು ಮುಟ್ಟಬಾರದು, ಅವರ ಅನ್ನವನ್ನೂ ಉಣಬಾರದು, ಇತ್ಯಾದಿ ಸದಾಚಾರಗಳನ್ನೂ ಪಾಲಿಸಬೇಕು.

## ೧೦. ಪ್ರಾಯಶ್ಚಿತ್ತ (ಪಾಪಶೋಧನ)

ಪ್ರಾಯಶ್ಚಿತ್ತವು ನಮ್ಮಲ್ಲೊಂದು ವೈಶಿಷ್ಟ್ಯವು; ಮಾಡಿದ ಪಾಪಕ್ಕೆ ತಮಗೆ ತಾವೇ ಶಿಕ್ಷೆಯನ್ನು ಮಾಡಿಕೊಳ್ಳುವುದು ಪ್ರಾಯಶ್ಚಿತ್ತವು. ಇದೂ ಅಂತಃಕರಣ ಶುದ್ಧಿಗೆ ಸಂಬಂಧಪಟ್ಟ ವಿಷಯ. ಅಂತಶ್ಶುದ್ಧಿ ಪ್ರಕರಣದಲ್ಲಿ ಹೇಳಿರುವುದು ಅಂತಃಕರಣವು ದೂಷಿತವಾಗದಂತೆ ನೋಡಿಕೊಳ್ಳುವ ವಿಧಾನವು. ಅಕೃತ್ಯವು ನಡೆದು ಅಂತಃಕರಣವು ಕಲುಷವಾದರೆ ಶೋಧಿಸಿ ಶುದ್ಧಮಾಡಿಕೊಳ್ಳುವ ಪ್ರಕಾರವು ಪ್ರಾಯಶ್ಚಿತ್ತವು.[1] ಪ್ರಾಯಶ್ಚಿತ್ತಕ್ಕೆ ಆಸ್ತಿಕತ್ವವು ಮೂಲವು, ಪಶ್ಚಾತ್ತಾಪವು ಹೇತುವು.

---

14 ಅಂತರಾಜನ್ಮಮರಣೇ ಶೇಷಾಹೋಭಿರ್ವಿಶುದ್ಧ್ಯತಿ ॥ಯಾ-iii-೨೦॥ ಜನನಾಶೌಚಮಧ್ಯೇ ಯದಪರಂ ಜನನಂ ಸ್ಯಾತ್ತತ್ರ ಪೂರ್ವಾಶೌಚವ್ಯಪಗಮೇ ಶುದ್ಧಿಃ। ಮರಣಾಶೌಚಮಧ್ಯೇಽಪ್ಯೇವಮೇವೇತಿ ವಿಷ್ಣುಃ। ಅಪಿಶಬ್ದಾತ್ ಜನನಾಶೌಚೇಽಪಿ ಮರಣಾಶೌಚಕಾಲೇನೈವ ಶುದ್ಧಿರಿತ್ಯರ್ಥಃ। ಯಥಾ ಜನನನಿಮಿತ್ತದಶಾಹಾಶೌಚಮಧ್ಯೇ ಮರಣಮಾಪತತಿ ತದಾ ಮರಣಮಾರಭ್ಯ ದಶಾಹಂ ಕಾರ್ಯಮಿತಿ ॥ಮಿತಾಕ್ಷರಾ-ಯಾ-iii-೨೦॥ ಶಾವಾಶೌಚೇ ಸಮುತ್ಪನ್ನೇ ಸೂತಕಂ ತು ಯದಾ ಭವೇತ್। ಶಾವೇನ ಶುದ್ಧ್ಯತೇ ಸೂತಿರ್ನಸೂತಿಶ್ಶಾವಶೋಧನೀ ॥ಷಟ್ತ್ರಿಂಶನ್ಮತೇ॥ (ಸೂತಕಂ ಸೂತಿರಿತಿ-ಜಾತಾಶೌಚಂ, ಶಾವಾಶೌಚಮಿತಿ-ಮೃತಾಶೌಚಂ.) ಅಲ್ಪಾಶೌಚಸ್ಯ ಮಧ್ಯೇ ತು ದೀರ್ಘಾಶೌಚಂ ಭವೇದ್ಯದಿ। ನ ತು ಪೂರ್ವೇಣ ಶುದ್ಧಿಸ್ಸ್ಯಾತ್ ಸ್ವಕಾಲೇನೈವ ಶುದ್ಧ್ಯತಿ ॥ಉಶನಾ॥

15 ಅಕ್ಷಾರಲವಣಾಸ್ಸ್ಯುರ್ನಿಮಜ್ಜೇಯುಶ್ಚ ತೇ ತ್ರ್ಯಹಂ। ಮಾಂಸಾಶನಂ ಚ ನಾಶ್ನೀಯುಶ್ಶಯೀರಂಶ್ಚ ಪೃಥಕ್ ಕ್ಷಿತೌ ॥ಮ-v-೭೩॥ ಕ್ಷಾರಲವಣಂ-ಕೃತ್ರಿಮಲವಣಮಿತಿ ॥ ಕುಲ್ಲೂಕಃ॥

1 ಕಾಮತಸ್ತು ಕೃತಂ ಮೋಹಾತ್ ಪ್ರಾಯಶ್ಚಿತ್ತೈಃ ಪೃಥಗ್ವಿಧೈಃ। (ಶುದ್ಧ್ಯತಿ)॥ಮ-ix-೪೬॥ ಪ್ರಾಯೋ ನಾಮ ತಪಃ ಪ್ರೋಕ್ತಂ ಚಿತ್ತಂ ನಿಶ್ಚಯ ಉಚ್ಯತೇ। ತಪೋನಿಶ್ಚಯ

ಪಾಪದ ಫಲವು ತಪ್ಪುವುದಿಲ್ಲ, ಅನುಭವಿಸಿಯೇ ಮುಗಿಯಬೇಕು.[2] ಕೆಲವು ಪಾಪಗಳಿಗೆ ಸದ್ಯಃ ಫಲವಾಗುವುದು, ಉಳಿದವು ಸಂಚಿತವಾಗಿ ಮುಂದೆ ಫಲಿಸುವುವು, ಹಾಗೂ ಉಳಿವ ಸಂಚಯವು ಪ್ರಾರಬ್ಧವಾಗಿ ಪರಿಣಮಿಸಿ ಲೋಕಾಂತರದಲ್ಲಾಗಲೀ, ಇನ್ನೂ ಉಳಿದರೆ ಜನ್ಮಾಂತರದಲ್ಲಾದರೂ, ದುಷ್ಟಫಲವನ್ನು ಕೊಟ್ಟೇ ಕೊಡುವುದು. ಲೋಕಾಂತರವೂ ಉಂಟು, ಜನ್ಮಾಂತರವೂ ಉಂಟು. ಲೋಕಾಂತರವೆಂದರೆ ತಾಮಿಸ್ರಾದಿ ನರಕಗಳು.[3] ಮರಣಾನಂತರದಲ್ಲಿ ಅಲ್ಲಿಗೆ ಒಯ್ಯಲ್ಪಟ್ಟು ಅಲ್ಲಿ ಪಾಪಾನುಗುಣವಾದ ಯಾತನೆಗಳಿಗೆ ಗುರಿಯಾಗಬೇಕಾಗುವುದು.[4] ಪಾಪದ ಪ್ರಯುಕ್ತವಾಗಿ ಜನ್ಮಾಂತರದಲ್ಲಿ ಕುರೂಪಿಯೂ ವಿಕಲಾಂಗಿಯೂ ಹೀನಾಂಗಿಯೂ ಪಾಪರೋಗಿಯೂ ಜಡನೂ ಮೂಗನೂ ಕುರುಡನೂ ಕಿವುಡನೂ ಆಗಿ ಜನಿಸಿ ದುಃಖಿಯೂ ಲೋಕವಿಗರ್ಹಿತನೂ ಆಗಬೇಕು.[5] ಅಥವಾ ಕಾಗೆ ಗೂಬೆ ಹದ್ದು ಕ್ರಿಮಿ ಕೀಟ ತೃಣ ಲತೆ ಮುಂತಾದ ಅಧಮಯೋನಿಯಲ್ಲಿ ಜನ್ಮವನ್ನೆತ್ತಿ ಅಧಃಪತನದ ದುಃಖದಿಂದ ಪರಿತಪಿಸಬೇಕು.[6] ಇತ್ಯಾದಿ ಪ್ರಕಾರದ ನಂಬಿಕೆಯೇ ಆಸ್ತಿಕ್ಯವು. ಆಸ್ತಿಕ್ಯದಿಂದಲೇ ಪಶ್ಚಾತ್ತಾಪವು. ಈ ಎರಡರಿಂದಲೇ ಆದಷ್ಟು ಆದಷ್ಟು ಪಾಪವನ್ನು ಕಳೆದುಕೊಳ್ಳಬೇಕೆಂಬ ಬುದ್ಧಿಯೂ ಪ್ರಾಯಶ್ಚಿತ್ತದಲ್ಲಿ ಪ್ರವೃತ್ತಿಯೂ. ಪಾಪವಿಲ್ಲ, ಪರಲೋಕವಿಲ್ಲ, ಜನ್ಮಾಂತರವಿಲ್ಲ, ಎನ್ನುವವರಿಗೆ ಪ್ರಾಯಶ್ಚಿತ್ತದ ಪ್ರಸಕ್ತಿಯೂ ಇಲ್ಲ.

ಪಾಪವು ಮಾನಸಿಕ ವಾಚಿಕ ಕಾಯಿಕವೆಂದು ಮೂರು ಪ್ರಕಾರವಾದುದು. ಪರಧನವನ್ನು ಅಪಹರಿಸಬೇಕೆಂಬ ತೃಷ್ಣೆಯೂ, ಪರರಿಗೆ ದ್ರೋಹ ಮಾಡಬೇಕೆಂದು

---

ಸಂಯುಕ್ತಂ ಪ್ರಾಯಶ್ಚಿತ್ತಮಿತಿ ಸ್ಮೃತಂ ॥ಮನುಃ॥ ವಿಹಿತಸ್ಯಾನನುಷ್ಠಾನಾನ್ನಿಂದಿತಸ್ಯ ಚ ಸೇವನಾತ್ । ಅನಿಗ್ರಹಾಚ್ಚೇಂದ್ರಿಯಾಣಾಂ ನರಃ ಪತನಮೃಚ್ಛತಿ ॥೨೧೯॥ ತಸ್ಮಾತ್ತೇನ ಹಿ ಕರ್ತವ್ಯಂ ಪ್ರಾಯಶ್ಚಿತ್ತಂ ವಿಶುದ್ಧಯೇ । ಏವಮಸ್ಯಾಂತರಾತ್ಮಾ ಚ ಲೋಕಶ್ಚೈವ ಪ್ರಸೀದತಿ ॥೨೨೦॥ ಯಾ-iii ॥

2 ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ॥ಇತಿಸ್ಮರಣಾತ್॥

3 ಯಾಜ್ಞವಲ್ಕ್ಯರು ತಾಮಿಸ್ರದಿಂದ ತಪನದವರೆಗೂ ಇಪ್ಪತ್ತೊಂದು ನರಕಗಳನ್ನು ಹೇಳಿದ್ದಾರೆ ॥ಯಾ-iii-೨೨೨-೨೪॥

4 ಪ್ರಾಯಶ್ಚಿತ್ತಮಕುರ್ವಾಣಾಃ ಪಾಪೇಷು ನಿರತಾ ನರಾಃ । ಅಪಶ್ಚಾತ್ತಾಪಿನಃ ಕಷ್ಟಾನ್ನರಕಾನ್ ಯಾಂತಿ ದಾರುಣಾನ್ ॥ಯಾ-iii-೨೨೧॥

5 ಇಹ ದುಶ್ಚರಿತೈಃ ಕೇಚಿತ್ಕೇಚಿತ್ಪೂರ್ವಕೃತೈಸ್ತಥಾ । ಪ್ರಾಪ್ನುವಂತಿ ದುರಾತ್ಮಾನೋ ನರಾ ರೂಪವಿಪರ್ಯಯಂ ॥೪೮॥ ...ಏವಂ ಕರ್ಮವಿಶೇಷೇಣ ಜಾಯಂತೇ ಸದ್ವಿಗರ್ಹಿತಾಃ। ಜಡಮೂಕಾಂಧಬಧಿರಾ ವಿಕೃತಾಕೃತಯಸ್ತಥಾ ॥೫೨॥ ಮ.xi ॥

6 ಕೃಮಿಕೀಟಪತಂಗತ್ವಂ ಸ್ವರ್ಣಹಾರೀ ಸಮಾಪ್ನುಯಾತ್ । ತೃಣಗುಲ್ಮಲತಾತ್ವಂ ಚ ಕ್ರಮಶೋ ಗುರುತಲ್ಪಗಃ ॥೨೦೮॥ ಮಧು ದಂಶಃ ಪಲಂ ಗೃಧ್ರಃ ಗಾಂ ಗೋಧಾಗ್ನಿಂ ಬಕಸ್ತಥಾ ॥೨೧೨॥ ಯಥಾಕರ್ಮ ಫಲಂ ಪ್ರಾಪ್ಯ ತಿರ್ಯಕ್ತ್ವಂ ಕಾಲಪರ್ಯಯಾತ್ । ಜಾಯಂತೇ ಲಕ್ಷಣಭ್ರಷ್ಟಾ ದರಿದ್ರಾಃ ಪುರುಷಾಧಮಾಃ ॥೨೧೩॥ ಯಾ-iii ॥

ಚಿಂತಿಸುವುದೂ ನಾಸ್ತಿಕತ್ವವೂ ಈ ಮೂರು ಮಾನಸಿಕವು. ಪಾರುಷ್ಯ (ಕಾಠಿಣ್ಯ) ಅನೃತ, ಪೈಶೂನ್ಯ,[7] ಅಸಂಬದ್ಧಪ್ರಲಾಪ, ಈ ನಾಲ್ಕು ವಾಚಿಕವು. ಪರಸ್ವಾಪಹಾರ, ಪರಹಿಂಸೆ, ಪರದಾರಗಮನ, ಈ ಮೂರು ಕಾಯಿಕವು.[8] ಹೀಗೆ ವಿಂಗಡಿಸಿದರೂ ಈ ಮೂರೂ ಅನ್ಯೋನ್ಯಾಶ್ರಯವಾದುವು. ಮಾನಸಿಕವೂ ವಾಚಿಕವೂ ತೀವ್ರವಾದರೆ ಕಾಯಿಕವಾಗಿ ಪರಿಣಮಿಸುವುದು. ಆದ ಕಾರಣ ಮಾನಸಿಕ ವಾಚಿಕಗಳನ್ನು ತಡೆಗಟ್ಟಿ ಕಾಯಿಕದಿಂದ ನಿವೃತ್ತರಾಗಬೇಕು. ಪಾಪಾಚರಣಕ್ಕೆ ರಾಜದಂಡ ಲೋಕನಿಂದೆ ಅಪಾಯಾಶಂಕೆ ಎಂಬೀ ಮೂರು ಸಾಧಾರಣವಾದ ಪ್ರತಿಬಂಧಕಗಳು. ಈಗಿನ ಪರಿಸ್ಥಿತಿಯಲ್ಲಿ ಮಾನಸಿಕಕ್ಕೆ ರಾಜದಂಡವಿಲ್ಲ, ಮಾತಿನಲ್ಲೇ ಪರಿಸಮಾಪ್ತಿಯಾದರೆ ವಾಚಿಕಕ್ಕೂ ಇಲ್ಲ, ಮಾತಿನಿಂದ ಶಾಂತಿಗೆ ಭಂಗವಾಗುವ ಸಂದರ್ಭದಲ್ಲಿ ಮಾತ್ರ ವಾಚಿಕಕ್ಕೆ ದಂಡವು. ಕಾಯಿಕದಲ್ಲಿ ಪರಹಿಂಸೆಗೂ ಪರಸ್ವಾಪಹಾರಕ್ಕೂ ದಂಡವುಂಟು, ಪರದಾರಗಮನಕ್ಕೆ ಪತಿಯು ಆಕ್ಷೇಪಿಸಿದರೆ ಮಾತ್ರ ದಂಡವು. ದಂಡನೀತಿಗೊಳಪಟ್ಟ ಅಕಾರ್ಯವು ಸಾಕ್ಷ್ಯದಿಂದ ಸಿದ್ಧವಾದರೇ ದಂಡ್ಯವು, ಇಲ್ಲದಿದ್ದರಿಲ್ಲ. ಅಕಾರ್ಯಗಳು ಎಷ್ಟೋ ಗೋಪ್ಯವಾಗಿಯೇ ನಡೆಯುವುವು, ಅಂಥಾವು ಸಾಕ್ಷ್ಯನೀತಿಗೆ ಸಿಗುವುದಿಲ್ಲ. ಎಷ್ಟೋ ಅಕಾರ್ಯಗಳು ಕೂಟಸಾಕ್ಷಿಯಿಂದ ಮುಚ್ಚಿಹೋಗುವುವು. ಹೀಗೆ ದಂಡಭೀತಿಯು ಪ್ರಬಲವಾದರೂ ವ್ಯಾಪಕವಲ್ಲ. ಲೋಕನಿಂದೆಯು ಪ್ರಬಲವೂ ಅಲ್ಲ, ಅದನ್ನು ತಪ್ಪಿಸಿಕೊಳ್ಳಲೂಬಹುದು. ಲೋಕರೀತಿಯಲ್ಲಿ ವಿಚಾರದ ಪ್ರಸಕ್ತಿಯಿಲ್ಲ, ಪ್ರವಾದಕ್ಕೇ ಮನ್ನಣೆ. ಪ್ರವಾದವನ್ನೇ ನಂಬುವ ಜನಕ್ಕೆ ಪ್ರತಿಪ್ರವಾದವನ್ನೆಬ್ಬಿಸಿಬಿಟ್ಟರೆ ಅವರ ಆಕ್ಷೇಪವು ಮುಗಿಯುವುದು. ಇಷ್ಟರ ಮೇಲೂ ನಿಂದೆಯು ನಿಂತಿತು ಎಂದರೆ ಈ ಬೀದಿಯಲ್ಲಿ ಅಪಮಾನವಾದರೆ ಆ ಬೀದಿಯಲ್ಲಿ ಹೊಸ ಆಳು ಎಂದರೂ ಆಯಿತು, ಅಥವಾ ಇಳಿದು ಮುಳುಗಿದವನಿಗೆ ಚಳಿಯೇನು ಗಾಳಿಯೇನು ಎಂದರೂ ಆಯಿತು. ಹೀಗೆ ನಿಂದೆಯ ಭೀತಿಯು ವ್ಯಾಪಕತ್ವದಲ್ಲಿಯೂ ತೀವ್ರತ್ವದಲ್ಲಿಯೂ ಭದ್ರತ್ವದಲ್ಲಿಯೂ ಅಲ್ಪವು, ಫಲಕಾರಿಯಲ್ಲ. ಅಪಾಯಭೀತಿಯೇನೋ ಇದ್ದುದರಲ್ಲಿ ತೀವ್ರವೇ. ಆದರೂ ಅಕಾರ್ಯಕಾರಿಗಳು ಕುಶಲತೆಯಿಂದ ಅದನ್ನು ನಿವಾರಿಸಲೂಬಹುದು, ಅದಾಗದಿದ್ದರೆ ತೀವ್ರವಾದ ಅನಾಹೂತವನ್ನೇ ಆದರೂ ಮಾಡಿ ತಪ್ಪಿಸಿಕೊಳ್ಳಬಹುದು. ಅಕಾರ್ಯವನ್ನು ಮಾಡುವವರು ಅದಕ್ಕೆ ಸಿದ್ಧವಾಗಿಯೇ ಇರುತ್ತಾರೆ. ಹೀಗೆ ಈ ಮೂರು ಭೀತಿಗಳೂ ಅಷ್ಟಾಗಿ

---

7 ಪೈಶೂನ್ಯವೆಂದರೆ ಪರೋಕ್ಷದಲ್ಲಿ ಪರದೂಷಣೆ ಮಾಡುವುದೆಂದು ಕುಲ್ಲೂಕರು ಅರ್ಥ ಮಾಡಿದ್ದಾರೆ. ಅದರಲ್ಲಿ ಚಾಡಿಯೂ ಅಂತರ್ಗತವೇ.

8 ಪರದ್ರವ್ಯೇಷ್ವಭಿಧ್ಯಾನಂ ಮನಸಾನಿಷ್ಟಚಿಂತನಂ । ವಿತಥಾಭಿನಿವೇಶಶ್ಚ ತ್ರಿವಿಧಂ ಕರ್ಮಮಾನಸಂ ॥೫॥ ಪಾರುಷ್ಯಮನೃತಂ ಚೈವ ಪೈಶೂನ್ಯಂ ಚಾಪಿ ಸರ್ವಶಃ । ಅಸಂಬದ್ಧಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಂ ॥೬॥ ಅದತ್ತಾನಾಮುಪಾದಾನಂ ಹಿಂಸಾ ಚೈವ ವಿಧಾನತಃ । ಪರದಾರೋಪಸೇವಾ ಚ ಶಾರೀರಂ ತ್ರಿವಿಧಂ ಸ್ಮೃತಂ ॥೭॥ ಮ-xii ॥

ಫಲಕಾಂಕ್ಷಿಯಲ್ಲ. ಸ್ಥಿರವಾದ ಪಾಪಭೀತಿಯೇ ಪ್ರಬಲವೂ ವ್ಯಾಪಕವೂ ಆದ ಪ್ರತಿಬಂಧಕವು. ಅಕಾರ್ಯವು ಅಕಾರ್ಯವಾದುದರಿಂದಲೇ ಅಕಾರ್ಯ; ಜನರು ಅಕಾರ್ಯವೆನ್ನುತ್ತಾರಲ್ಲ, ಸಿಕ್ಕಿಕೊಂಡರೆ ದಂಡಕ್ಕೊಳಗಾಗಬೇಕಾಗುವುದಲ್ಲ, ಎಂಬ ದೃಷ್ಟಿಯಿಂದ ಅಕಾರ್ಯವಲ್ಲ. ಇದೇ ಸ್ಥಿರಬುದ್ಧಿ. ಒಂದು ವೇಳೆ ಅಚಾತುರ್ಯದಿಂದ ಅಕಾರ್ಯವು ನಡೆದೇಹೋದರೂ ಪಶ್ಚಾತ್ತಾಪಪಟ್ಟು ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಶುದ್ಧನಾಗಬೇಕು ಎಂಬುದೂ ಒಳ್ಳೆಯ ಬುದ್ಧಿಯೇ. ಈರೀತಿಯ ಜೀವನವನ್ನು ನೈತಿಕವೆನ್ನುತ್ತಾರೆ, ಸಾತ್ವಿಕವೆಂಬುದು ಸರಿಯಾದ ಮಾತು. ಇದರಲ್ಲಿ ಆತ್ಮಕ್ಕೆ ಆತ್ಮವೇ ಸಾಕ್ಷಿ; ಆತ್ಮಕ್ಕೆ ಆತ್ಮವೇ ಶೋಧಕ ; ಈ ದೃಷ್ಟಿಯಲ್ಲಿ ಅಕಾರ್ಯವು ನಡೆಯುವುದೇ ಇಲ್ಲ, ನಡೆದರೂ ಅದಕ್ಕೆ ನಿಷ್ಕೃತಿಯಾಗುತ್ತದೆ, ಪುನರಾವೃತ್ತಿಯ ಸಂಭವವೂ ಇರುವುದಿಲ್ಲ. ತನ್ನನ್ನು ತಾನೇ ಕೊಲ್ಲಬಾರದು,[9] ತನಗೆ ತಾನೇ ಹಿತನಾದವನು,[10] ತನ್ನನ್ನು ತಾನೇ ಮೇಲಕ್ಕೆತ್ತಬೇಕು,[11] ಎಂಬ ಭಗವದ್ವಚನದ ಪರಿಪಾಲನೆಯೇ ಇದು.

ಈ ಪ್ರಕಾರದ ಸಾತ್ವಿಕ ಧ್ಯೇಯವೇ ಪ್ರಾಯಶ್ಚಿತ್ತದ ಆಂತರ್ಯ, ಮಾಡಿದ ಪಾಪವನ್ನು ಮುಚ್ಚಿಕೊಳ್ಳಬಾರದು, ತಾನೇ ಅದನ್ನು ಬಹಿರಂಗಪಡಿಸಿ ತಾತ್ಕಾಲಿಕವಾದ ಲೋಕನಿಂದಾದಿಗಳನ್ನು ಅನುಭವಿಸಿ, ಜತೆಗೆ ತಾನೂ ಪಶ್ಚಾತ್ತಾಪತಪ್ತನಾಗಿ ತಪಸ್ಸಿನಿಂದಲೂ ವೇದಶಾಸ್ತ್ರಾವಲೋಕನದಿಂದಲೂ ಅಂತಃಕರಣವನ್ನು ಸರಿಪಡಿಸಿಕೊಂಡು, ತಪಸ್ಸನ್ನು ಮಾಡಲಾಗದಿದ್ದರೆ ದಾನವನ್ನಾದರೂ ಮಾಡಿ (ಅಂದರೆ ತಾನಾಗಿ ಧನವನ್ನು ದಂಡರೂಪದಲ್ಲಿ ಕೊಟ್ಟು) ಶುದ್ಧನಾಗಬೇಕು[12] ಮಾಡಿದ ಪಾಪವನ್ನು ಹೇಗೆ ಹೇಗೆ ಬಹಿರಂಗಪಡಿಸುತ್ತಾ ಹೋಗುವನೋ ಹಾಗೆ ಹಾಗೆ, ಸರ್ಪವು ಪರೆಯನ್ನು ಬಿಡುವಂತೆ ಪಾಪದಿಂದ ಮುಕ್ತನಾಗುತ್ತಾ ಹೋಗುವನು.[13] ಹೇಗೆ ಹೇಗೆ ತನ್ನ ಅಂತರಾತ್ಮವೇ ತನ್ನ ದುಷ್ಕೃತ್ಯವನ್ನು ನಿಂದಿಸುತ್ತಾ ಹೋಗುವುದೋ ಹಾಗೆ ಹಾಗೆ ಅಧರ್ಮದಿಂದ ವಿಮುಕ್ತನಾಗುತ್ತಾ ಹೋಗುವನು.[14] ಪಾಪವನ್ನು ಮಾಡಿದವನು ಪಶ್ಚಾತ್ತಾಪಪಡುವುದರಿಂದ ಪಾಪದಿಂದಲೂ ನಿಷ್ಕೃತಿಯನ್ನು

9 ನಾತ್ಮಾನಮವಸಾದಯೇತ್ ॥ ಭ. ಗೀ. ॥

10 ಆತ್ಮೈವಹ್ಯಾತ್ಮನೋ ಬಂಧುರಾತ್ಮೈವರಿಪುರಾತ್ಮನಃ ॥ ಭ. ಗಿ ॥

11 ಉದ್ಧರೇದಾತ್ಮನಾತ್ಮಾನಂ ॥ ಭ. ಗಿ. ॥

12 ಖ್ಯಾಪನೇನಾನುತಾಪೇನ ತಪಸಾಧ್ಯಯನೇನ ಚ । ಪಾಪಕೃನ್ಮುಚ್ಯತೇ ಪಾಪಾತ್ತಥಾ ದಾನೇನ ಚಾಪದಿ ॥ ಮ-xi-೨೨೭॥

13 ಯಥಾ ಯಥಾ ನರೋಽಧರ್ಮಂ ಸ್ವಯಂ ಕೃತ್ವಾನುಭಾಷತೇ । ತಥಾತಥಾತ್ವಚೇನಾಹಿಸ್ತೇನಾಧರ್ಮೇಣ ಮುಚ್ಯತೇ ॥ ಮ-xi-೨೨೮॥ ಇತಿ ಖ್ಯಾಪನವಿಧೇರನುವಾದಃ ॥ ಕುಲ್ಲೂಕಃ ॥

14 ಯಥಾ ಯಥಾ ಮನಸ್ತಸ್ಯ ದುಷ್ಕೃತಂ ಕರ್ಮ ಗರ್ಹತಿ । ತಥಾ ತಥಾ ಶರೀರಂ ತತ್ತೇನಾಧರ್ಮೇಣ ಮುಚ್ಯತೇ ॥ ಮ-xi-೨೨೯॥ ಅಯಮನುತಾಪಾನುವಾದಃ ॥ ಕುಲ್ಲೂಕಃ ॥

ಹೊಂದುವನು, ಪುನಃ ಇಂಥಾ ಅಕಾರ್ಯವನ್ನು ಮಾಡೆನೆಂದು ಪಾಪಬುದ್ಧಿಯಿಂದಲೂ ನಿವೃತ್ತಿಯನ್ನು ಹೊಂದುವನು, ಹೀಗೆ ಎರಡು ಪ್ರಕಾರದಿಂದ ಶುದ್ಧನಾಗುವನು.[15] ಪಶ್ಚಾತ್ತಾಪಪಡದೆಯೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆಯೂ ಇರುವವನಿಗೆ ದಾರುಣವಾದ ನರಕಾದಿ ಯಾತನೆಗಳು ತಪ್ಪಿದ್ದಲ್ಲ.[16] ಜ್ಞಾನವಾಗಿಯೋ ಅಜ್ಞಾನದಿಂದಲೋ ವಿಗರ್ಹಿತ ಕಾರ್ಯವನ್ನು ಮಾಡಿ ಅದರಿಂದ ನಿಷ್ಕೃತಿಯನ್ನು ಅಪೇಕ್ಷಿಸುವವನು ಅಂಥಾದ್ದನ್ನು ತಿರುಗಿ ಮಾಡಬಾರದು.[17]



15 ಕೃತ್ವಾ ಪಾಪಂ ಹಿ ಸಂತಪ್ಯ ತಸ್ಮಾತ್ಪಾಪಾತ್ಪ್ರಮುಚ್ಯತೇ । ನೈವಂ ಕುರ್ಯಾಂ ಪುನರಿತಿ ನಿವೃತ್ತ್ಯಾ ಪೂಯತೇ ಹಿ ಸಃ ॥ಮ-xi-೨೩೦॥

16 ಪ್ರಾಯಶ್ಚಿತ್ತಮಕುರ್ವಾಣಾಃ ಪಾಪೇಷು ನಿರತಾ ನರಾಃ । ಅಪಶ್ಚಾತ್ತಾಪಿನಃ ಕಷ್ಟಾನ್ನರಕಾನ್ ಯಾಂತಿ ದಾರುಣಾನ್ ॥ಯಾ-iii-೨೨೧॥

17 ಅಜ್ಞಾನಾದ್ಯದಿವಾ ಜ್ಞಾನಾತ್ಕೃತ್ವಾ ಕರ್ಮ ವಿಗರ್ಹಿತಂ । ತಸ್ಮಾದ್ವಿಮುಕ್ತಿಮನ್ವಿಚ್ಛನ್ ದ್ವಿತೀಯಂ ನ ಸಮಾಚರೇತ್ ॥ಮ-xi.೨೩೨॥

# ೭ನೆಯ ಪ್ರಕರಣ—ಷೋಡಶ ಸಂಸ್ಕಾರಗಳು

## ೧. ಸಂಸ್ಕಾರಗಳು (ಹದಿನಾರು)

ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರ್ಮ, ಉಪನಯನ, ಮಹಾನಾಮ್ನೀವ್ರತ, ಮಹಾವ್ರತ, ಉಪನಿಷದ್ವ್ರತ, ಗೋದಾನವ್ರತ, ಸಮಾವರ್ತನ, ವಿವಾಹ, ಅಂತ್ಯೇಷ್ಟಿ, ಎಂಬಿವು ಹದಿನಾರು ಪ್ರಧಾನ ಸಂಸ್ಕಾರಗಳು.

## ೨. ಕ್ಷೇತ್ರಸಂಸ್ಕಾರಗಳು

ಗರ್ಭಾಧಾನ ಪುಂಸವನ ಸೀಮಂತೋನ್ನಯನ ಈ **ಮೂರೂ** ಕ್ಷೇತ್ರಸಂಸ್ಕಾರಗಳು. ಕ್ಷೇತ್ರ (ತಾಯಿಯ) ಸಂಸ್ಕಾರವಾದುದರಿಂದ ಒಂದೇ ಸಲ ಮಾಡುವುದು, ಪ್ರತಿ ಗರ್ಭಕ್ಕೂ ಮಾಡುವುದಿಲ್ಲ.[1] "**ಗರ್ಭಾಧಾನ**" ಅಥವಾ (ನಿಷೇಕ, ಋತುಶಾಂತಿ) ಎಂಬುದು ಅನ್ವರ್ಥವಾದ ಕರ್ಮ, ಋತುಮತಿಯಾದ ಸ್ತ್ರೀಗೆ ಪತಿಯು ಮಾಡುವ ಸಂಸ್ಕಾರವು. "**ಪುಂಸವನ**"ವೆಂದರೆ ಗಂಡುಮಗುವು ಆಗಬೇಕೆಂದು ಮಾಡುವ ಸಂಸ್ಕಾರವು, ಅದೂ ಅನ್ವರ್ಥವೇ, ಗರ್ಭವು ಚಲಿಸುವುದಕ್ಕೆ ಮೊದಲು ಮಾಡುವುದು. ಈ ಕರ್ಮವನ್ನು ಸಾಧಾರಣವಾಗಿ ಯಾರೂ ಮಾಡುವ ರೂಢಿಯಿಲ್ಲ. "**ಸೀಮಂತೋನ್ನಯನ**"ವೆಂದರೆ ಗರ್ಭಿಣೀ ಸ್ತ್ರೀಗೆ ಬೈತಲೆ ತೆಗೆಯುವುದು ಎಂದರ್ಥ. ಇದೊಂದು ಕರ್ಮ—ಈ ಕರ್ಮವನ್ನು ಆರನೇ ಅಥವಾ ಎಂಟನೇ ಗರ್ಭಮಾಸದಲ್ಲಿ ಮಾಡುವುದು,[2] ಗರ್ಭಾಭಿವೃದ್ಧಿಗೆ ಪ್ರತಿಕೂಲವಾದ ಪರೋಕ್ಷ ಪ್ರತಿಬಂಧಕಗಳ ನಿವಾರಣೆಗಾಗಿ ಮಾಡುವುದು. ಇದನ್ನು ಕೆಲವರು ಆಚರಣೆಯಲ್ಲಿಟ್ಟುಕೊಂಡಿದ್ದಾರೆ, ಕೆಲವರು ಬಳೆ ತೊಡಿಸುವುದು ಎಂದು ಸೌಭಾಗ್ಯಕಾರ್ಯದಲ್ಲಿಯೇ ಮುಗಿಸುತ್ತಾರೆ, ಕೆಲವರು ಮಾಡುವುದೇ ಇಲ್ಲ.

---

1 ಏತೇ ಚ ಕ್ಷೇತ್ರಸಂಸ್ಕಾರಕರ್ಮತ್ವಾತ್ಸಕೃದೇವಕಾರ್ಯಾ ನ ಪ್ರತಿಗರ್ಭಂ। ಯಥಾಹ ದೇವಲಃ—ಸಕೃಚ್ಚ ಸಂಸ್ಕೃತಾ ನಾರೀ ಸರ್ವಗರ್ಭೇಷು ಸಂಸ್ಕೃತಾ। ಯಂ ಯಂ ಗರ್ಭಂ ಪ್ರಸೂಯೇತ ಸಸರ್ವಸ್ಸಂಸ್ಕೃತೋ ಭವೇತ್॥ ಇತಿ॥ ಮಿತಾಕ್ಷರಾ, ಯಾ-1-೧೧-೧೨॥

2 ಗರ್ಭಾಧಾನಮೃತೌ ಪುಂಸಸ್ಸವನಂ ಸ್ಪಂದನಾತ್ಪುರಾ। ಷಷ್ಠೇಽಷ್ಟಮೇ ವಾ ಸೀಮಂತೋ ಮಾಸಿ...॥ ಯಾ-1-೧೧॥

## ೩. ಜಾತಕರ್ಮಾದಿ ಚೂಡಾಂತಕರ್ಮಗಳು

**ಈ ಐದು** ಕರ್ಮಗಳನ್ನೂ ಪ್ರತಿಯೊಂದು ಶಿಶುವಿಗೂ ಮಾಡಬೇಕು. ಗಂಡು ಮಗುವಿಗೆ ಸಮಂತ್ರಕವಾಗಿಯೂ ಹೆಣ್ಣುಮಗುವಿಗೆ ಅಮಂತ್ರಕವಾಗಿಯೂ ಮಾಡುವುದು.[1] ಶಿಶುವು ಜನಿಸಿದೊಡನೆಯೇ ನಾಳಚ್ಛೇದಕ್ಕೆ ಮೊದಲೇ ಜಾತಕರ್ಮವನ್ನು ಮಾಡಬೇಕೆಂದು ಶಾಸ್ತ್ರವಿದೆ, ಅದು ಸಾಧ್ಯವಲ್ಲ. ನಾಮಕರಣದ ದಿವಸವೇ ಮಾಡುವುದು ರೂಢಿ. ಜನನವಾದ ಹನ್ನೊಂದನೆಯ ದಿವಸ **ನಾಮಕರಣ**ವನ್ನುಮಾಡುವುದು. ಇವರಿಂಥಾವರೆಂದು ವ್ಯವಹರಿಸುವುದಕ್ಕೆ ಪ್ರತಿಯೊಬ್ಬರಿಗೂ ಒಂದು ರೂಪವೂ ಹೆಸರೂ ಬೇಕು. ರೂಪದಿಂದ ನಾವು ಗುರ್ತಿಸುತ್ತೇವೆ, ಹೆಸರಿನಿಂದ ಇತರರಿಗೆ ತಿಳಿಸುತ್ತೇವೆ. ರೂಪವನ್ನು ಪ್ರಕೃತಿಯೇ ನಿರ್ಮಿಸಿಕೊಡುತ್ತದೆ. ಹೆಸರನ್ನು ನಾವಿಡಬೇಕು. ನಾಲ್ಕನೆಯ ತಿಂಗಳಲ್ಲಿ ಶಿಶುವನ್ನು ಮನೆಯಿಂದ ಹೊರಗೆ ಕರೆತಂದು ಸೂರ್ಯದರ್ಶನವನ್ನು ಮಾಡಿಸಿ ಸೂರ್ಯಚಂದ್ರರಿಗೂ ದಿಕ್ಕುಗಳಿಗೂ ದಿಕ್ಪತಿಗಳಿಗೂ ಆಕಾಶಾದಿ ಪಂಚಮಹಾಭೂತಗಳಿಗೂ ಇಂದ್ರಾದಿ ದೇವತೆಗಳಿಗೂ ಒಪ್ಪಿಸಿ, ಈ ನಿಕ್ಷೇಪವನ್ನು ರಕ್ಷಿಸಿ, ಎಂದು ಪ್ರಾರ್ಥಿಸುವುದು **ನಿಷ್ಕ್ರಮಣವು.**[2] ಅಂದರೆ ವಿಶಾಲವಾದ ವಿಶ್ವದಲ್ಲಿ ವಿವಿಧ ಶಕ್ತಿಗಳೊಡನೆ ಹೊಂದಿಕೊಂಡು ಬಾಳೆಂದು ಮಗುವನ್ನು ಹರಸುವ ಪ್ರಕಾರವು. ಆರನೆಯ ತಿಂಗಳಲ್ಲಿ **ಅನ್ನಪ್ರಾಶನ**ವನ್ನು ಮಾಡುವುದು, ಮಗುವಿಗೆ ಸ್ವತಂತ್ರವಾದ ಆಹಾರಸೇವನೆಯನ್ನು ಆರಂಭಿಸುವ ಕರ್ಮವು. ಅವರವರ ಕುಲಾಚಾರದ ಪ್ರಕಾರ ಆಯಾ ಕಾಲದಲ್ಲಿ **ಚೂಡಾಕರ್ಮ**ವನ್ನು ಮಾಡುವುದು.[3] ಜಾತಕರ್ಮಾದಿ ಈ ಐದು ಸಂಸ್ಕಾರಗಳಿಂದ ತಂದೆ ತಾಯಿಗಳಿಂದ ಪ್ರಾಪ್ತವಾಗಿರಬಹುದಾದ ಸಾಂಕ್ರಾಮಿಕ ದೋಷಗಳು ಪರಿಹಾರವಾಗಿ ಶಿಶುವಿಗೆ ಆಯುಷ್ಯಾಭಿವೃದ್ಧಿಯಾಗುವುದು.[4]

---

1 ತೂಷ್ಣೀಮೇತಾಃ ಕ್ರಿಯಾಃ ಸ್ತ್ರೀಣಾಂ ವಿವಾಹಸ್ತು ಸಮಂತ್ರಕಃ ॥ಯಾ-i-೧೩॥

2 ಚಂದ್ರಾರ್ಕಯೋರ್ದಿಗೀಶಾನಾಂ ದಿಶಾಂ ಚ ಗಗನಸ್ಯ ಚ । ನಿಕ್ಷೇಪಾರ್ಥಮಿದಂ ದದ್ಮಿ ತೇ ಮೇ ರಕ್ಷಂತು ಸರ್ವದಾ ॥ ಅಪ್ರಮತ್ತಂ ಪ್ರಮತ್ತಂ ವಾ ದಿವಾ ರಾತ್ರಾವಥಾಪಿ ವಾ । ರಕ್ಷಂತು ಸತತಂ ಸರ್ವೇ ದೇವಾಶ್ಶಕ್ರಪುರೋಗಮಾಃ ॥ ಇತಿಶಿಶುಸಂರಕ್ಷಣಾರ್ಥಂ ಸರ್ವಾನ್ ದೇವಾನ್ ಪ್ರಾರ್ಥಯೇತ್ ॥

3 ....ಏತೇ ಜಾತಕರ್ಮ ಚ ॥೧೧॥ ಅಹನ್ಯೇಕಾದಶೇ ನಾಮ ಚತುರ್ಥೇ ಮಾಸಿ ನಿಷ್ಕ್ರಮಃ। ಷಷ್ಠೇಽನ್ನಪ್ರಾಶನಂ ಮಾಸಿ ಚೂಡಾ ಕಾರ್ಯಾ ಯಥಾಕುಲಂ ॥೧೨॥ ಯಾ-i॥ ಏತೇ=ಗರ್ಭಕೋಶಾಜ್ಜಾತೇ ॥ಮಿತಾಕ್ಷರಾ॥

4 ಏವಮೇನಶ್ಶಮಂ ಯಾತಿ ಬೀಜಗರ್ಭಸಮುದ್ಭವಂ ॥ಯಾ-i-೧೩॥ ಬೀಜಗರ್ಭಸಮುದ್ಭವಂ=ಶುಕ್ರಶೋಣಿತಸಂಬದ್ಧಂ, ಗಾತ್ರವ್ಯಾಧಿಸಂಕ್ರಾಂತಿನಿಮಿತ್ತಂ ವಾ, ನ ತು ಪತಿತೋತ್ಪನ್ನತ್ವಾದಿ ॥ಮಿತಾಕ್ಷರಾ॥

## ೮. ಉಪನಯನ

**ಉಪನಯನ**ವನ್ನು ಗಂಡುಮಕ್ಕಳ ದ್ವಿಜತ್ವದ ಮತ್ತು ಬ್ರಹ್ಮಚರ್ಯದ ಸಿದ್ಧಿಗಾಗಿ ಮಾಡುವುದು. ಮೊದಲು ತಾಯಿಯ ಗರ್ಭದಿಂದ ಜನಿಸಿದವನು ಮೌಂಜೀಬಂಧನದಿಂದ ಮತ್ತೊಂದು ಜನ್ಮವನ್ನು ತಾಳುವುದರಿಂದ ದ್ವಿಜನು.[1] ಹುಟ್ಟಿದಾಗಿನಿಂದ ಮೌಂಜೀಬಂಧನದವರೆಗೂ ಲಾಲನೆಯಲ್ಲಿ ಬೆಳೆಯುವುದರಿಂದ ಅದು ವತ್ಸಲಳಾದ ತಾಯಿಯ ಮರೆಯಲ್ಲಿರುವ ಜನ್ಮ. ಮೌಂಜೀಬಂಧನದಾರಭ್ಯ ಶಿಕ್ಷಣಾವಸ್ಥೆಯಾದುದರಿಂದ ಅದು ಬೇರೆ ಜನ್ಮ. ಬ್ರಹ್ಮಚರ್ಯವೆಂದರೆ ಆಶ್ರಮಕ್ಕೂ, ವೇದಶಾಸ್ತ್ರಾದಿ ವಿದ್ಯಾರ್ಜನೆಗೂ, ಇಂದ್ರಿಯನಿಗ್ರಹವನ್ನು ಮಾಡಿಕೊಂಡು ನಿಷ್ಠೆಯಿಂದಿರುವುದಕ್ಕೂ, ಹೆಸರು. ಈ ಮೂರೂ ಬ್ರಹ್ಮಚಾರಿಯ ಧರ್ಮಗಳು. ಉಪನಯನವೆಂದರೆ ಗುರುವಿನ ಸಮೀಪಕ್ಕೆ ಕರೆದುಕೊಂಡು ಹೋಗುವುದು, ಅಥವಾ ಗುರುವೇ ಸಮೀಪಕ್ಕೆ ಕರೆದುಕೊಳ್ಳುವುದು, ಎಂದರ್ಥ.

ಹಿಂದೆ ಗುರುಕುಲಗಳಿದ್ದವು, ಶಿಷ್ಯರು ಗುರುಕುಲಕ್ಕೆ ಹೋಗಿ ಅಲ್ಲಿಯೇ ಇದ್ದು ವಿದ್ಯವನ್ನು ಕಲಿಯುತ್ತಿದ್ದರು. ತಂದೆತಾಯಿಗಳೂ ಮಕ್ಕಳನ್ನು ನಿಯಮವಾಗಿ ಗುರುಕುಲಕ್ಕೆ ಕಳುಹಿಸುತ್ತಲೂ ಇದ್ದರು. ಗುರುಗಳೂ ವಿಶ್ವಾಸವಾಗಿ ಕಲಿಸುತ್ತಿದ್ದರು. ವಿದ್ಯಾರ್ಜನೆಯು ಜ್ಞಾನಸಂಪಾದನೆಗಾಗಿಯೇ ಹೊರತು ಅರ್ಥಾರ್ಜನೆಗಾಗಿರಲಿಲ್ಲ, ಪ್ರವಚನವೂ ಅರ್ಥಾರ್ಜನೆಗಾಗಿರಲಿಲ್ಲ. ಈಗ ಆ ಗುರುಗಳೂ ಶಿಷ್ಯರೂ ಗುರುಕುಲಗಳೂ ಮಾತಾಪಿತೃಗಳೂ ಧ್ಯೇಯವೂ ಇಲ್ಲ. ಹಿಂದಿನ ವ್ಯಾಸಂಗವಿಧಾನವೇ ಲುಪ್ತವಾಗಿದೆ. ಆದರೂ ಹಿಂದಿನ ವಿದ್ಯಾರ್ಜನೆಯ ಉದಾತ್ತವಾದ ರೀತಿಯು ಗಮನಾರ್ಹವಾದುದು. ಶಿಷ್ಯರಿಗೆ ಗುರುವಿನಲ್ಲಿ ಭಕ್ತಿ, ಗುರುಗಳಿಗೆ ಶಿಷ್ಯರ ಮೇಲೆ ಪ್ರೀತಿ, ಇರುತ್ತಿತ್ತು. ಶಿಷ್ಯರೂ ಪರಸ್ಪರವಾಗಿ ಪ್ರೀತಿಸುತ್ತಿದ್ದರು. ಎಲ್ಲಿಯವರೆಗೆ ಎಂದರೆ ಗುರುವಿಗೆ ಸಗೋತ್ರ ಭಿನ್ನಗೋತ್ರ ಭಾಂಧವರು ಯಾರೂ ಇಲ್ಲದಿದ್ದರೆ ಶಿಷ್ಯನು ಗುರುವಿನ ಆಸ್ತಿಗೂ, ಶಿಷ್ಯನಿಗೂ ಯಾರೂ ಸಂಬಂಧಿಗಳಿಲ್ಲದಿದ್ದರೆ ಸಬ್ರಹ್ಮಚಾರಿಯು ಅವನ ಆಸ್ತಿಗೂ, ಹಕ್ಕುದಾರನಾಗುತ್ತಿದ್ದರು. ಶಿಷ್ಯರು ಗುರುಶುಶ್ರೂಷೆಯಲ್ಲಿ ನಿರತರಾಗಿರುತ್ತಿದ್ದರು. ಗುರುಗಳೂ ಕರೆದು ವಿದ್ಯವನ್ನು ಹೇಳುತ್ತಿದ್ದರು. ವೇತನವನ್ನು ಕೊಡುತ್ತಲೂ ತೆಗೆದುಕೊಳ್ಳುತ್ತಲೂ ಇರಲಿಲ್ಲ. ಶಿಷ್ಯರು ಇಂದ್ರಿಯ ಚಾಪಲ್ಯಕ್ಕೆ ಬೀಳದೆ, ಊರ್ಧ್ವರೇತಸ್ಕರಾಗಿ, ಜೀವನಾರ್ಥವಾಗಿ ಯಾರನ್ನೂ ಆಶ್ರಯಿಸದೆ, ಸ್ವತಂತ್ರರಾಗಿ ಭಿಕ್ಷಾನ್ನದಿಂದ ಜೀವಿಸುತ್ತಾ, ತೇಜೋವಧೆಗೆ ಅವಕಾಶವಿಲ್ಲದಹಾಗೆ ಚಾರಿತ್ರವನ್ನು ಸರ್ವಪ್ರಕಾರದಿಂದಲೂ ರಕ್ಷಿಸಿಕೊಂಡು, ಗುರುವಿನ ಶಾಸನದಲ್ಲಿ ಬೆಳೆದು ಶಾರ್ಙರವ ಶಾರದ್ವತರಂಥಾ ತೇಜಸ್ವಿಗಳೂ ಗುಣ

---

1 ಮಾತುರ್ಯದಗ್ರೇ ಜಾಯನ್ತೇ ದ್ವಿತೀಯಂ ಮೌಂಜಿಬಂಧನಾತ್ । ಬ್ರಾಹ್ಮಣಕ್ಷತ್ರಿಯವಿಶಸ್ತಸ್ಮಾದೇತೇ ದ್ವಿಜಾಃ ಸ್ಮೃತಾಃ ॥ ಯಾ. 1-೩೯ ॥

ವಂತರೂ ಬುದ್ಧಿವಂತರೂ, ವಿದ್ಯಾವಂತರೂ, ತೃಣೀಕೃತಬ್ರಹ್ಮರೂ ಆಗುತ್ತಿದ್ದರು. ಈಗಲೂ ಧ್ಯೇಯದಲ್ಲಿ ವ್ಯತ್ಯಾಸವಿಲ್ಲ, ಆಚರಣೆಯು ತಲೆಕೆಳಗಾಗಿದೆ. ಹಿರಿಯರ ಶಿಕ್ಷಣದ ಅಂತರ್ಯವು ಈಗಲೂ ಅನುಕರಣೀಯವೇ—ಆತ್ಮಾವಲಂಬನೆ, ಅನನ್ಯಾಶ್ರಯತ್ವ, ಅದೈನ್ಯಜೀವನ, ಬ್ರಹ್ಮಚರ್ಯ, ವೃತ್ತಶೌಂಡೀರ್ಯ, ಚಾರಿತ್ರ್ಯರಕ್ಷಣ, ಇತ್ಯಾದಿಗಳು ಸರ್ವಕಾಲದಲ್ಲಿಯೂ ವಿದ್ಯಾರ್ಥಿಗಳಿಗೆ ಆದರ್ಶವು. ಬ್ರಹ್ಮಚರ್ಯವನ್ನೂ ಶುದ್ಧಚಾರಿತ್ರ್ಯವನ್ನೂ ರಕ್ಷಿಸಿಕೊಳ್ಳಬೇಕೆಂದು ಎಷ್ಟು ಒತ್ತಿ ಹೇಳಿದರೂ ಸಾಲದು.

ಗರ್ಭದಿಂದಾಗಲೀ ಜನನದಿಂದಾಗಲೀ ಎಂಟು ಹನ್ನೊಂದು ಹನ್ನೆರಡರಿಂದ ಹಿಡಿದು, ಹದಿನಾರು ಇಪ್ಪತ್ತೆರಡು ಇಪ್ಪತ್ತುನಾಲ್ಕು ವರ್ಷಗಳೊಳಗಾಗಿ ಮೂರು ವರ್ಣದವರಿಗೂ ಕ್ರಮವಾಗಿ ಉಪನಯನಕ್ಕೆ ಸಕಾಲವು. ಮೊದಲು ಹೇಳಿದ ವರ್ಷಗಳು ಪ್ರಧಾನವಾದುವು, ಮಧ್ಯದವು ಮಧ್ಯಮವು, ಕಡೆಯವು ಪರಮಾವಧಿಯು.[2] ಗುರುವು ವಿದ್ಯವನ್ನು ಮಾತ್ರವೇ ಅಲ್ಲ, ಶೌಚಾಚಾರಾದಿಗಳನ್ನೂ ಕಲಿಸಬೇಕು.[3] ಬ್ರಹ್ಮಚಾರಿಯು ನಿತ್ಯವೂ ಸ್ನಾನವನ್ನು ಮಾಡಿ ಶುಚಿಯಾಗಿ ನಿತ್ಯಕರ್ಮಗಳನ್ನೂ ದೇವತಾರ್ಚನೆಯನ್ನೂ ಮಾಡಿ ಮಧುಮಾಂಸಭೋಜನವನ್ನೂ ಗಂಧಪುಷ್ಪರಸನಾರೀಸೇವೆಯನ್ನೂ ಮಾಡದೆ, ತಾಮಸಾಹಾರವನ್ನು ತಿನ್ನದೆ, ಪ್ರಾಣಿಮಾತ್ರಕ್ಕೆ ಹಿಂಸೆಮಾಡದೆ, ಶರೀರೋದ್ವರ್ತನಾದಿಗಳನ್ನು ವರ್ಜ್ಯಮಾಡಿ, ಪಾದರಕ್ಷೆಯನ್ನೂ ಛತ್ರಿಯನ್ನೂ ಧರಿಸದೆ, ಕಾಮ ಕ್ರೋಧ ಲೋಭ ನೃತ್ಯ ಗೀತ ವಾದ್ಯವಾದನ ದ್ಯೂತವಾಡುವುದು ಪರನಿಂದೆ ಮಾಡುವುದು ಅನೃತವನ್ನಾಡುವುದು ಸ್ತ್ರೀಯರನ್ನು ಅನುರಾಗದಿಂದ ನೋಡುವುದು ಮುಂತಾದುವೆಲ್ಲವನ್ನೂ ತ್ಯಜಿಸಿ, ಏಕಾಂಗಿಯಾಗಿ ನೆಲದ ಮೇಲೆ ಮಲಗುತ್ತಾ, ರೇತಸ್ಸ್ಯಂದನಕ್ಕೆ ಅವಕಾಶಕೊಡದೆ, ಬ್ರಹ್ಮಚರ್ಯವನ್ನು ಪಾಲಿಸಬೇಕು.[4] ಅದಕ್ಕೆ ಲೋಪಬರುವಂಥಾ ಯಾವ ಪ್ರಸಂಗಕ್ಕೂ ಹೋಗಬಾರದು.

---

2 ಗರ್ಭಾಷ್ಟಮೇಽಷ್ಟಮೇ ವಾಬ್ದೇ ಬ್ರಾಹ್ಮಣಸ್ಯೋಪನಾಯನಂ । ರಾಜ್ಞಾಮೇಕಾದಶೇ ಸೈಕೇ ವಿಶಾಮೇಕೇ ಯಥಾಕುಲಮ್ ॥೧೪॥ ಆಷೋಡಶಾದಾದ್ವಾವಿಂಶಾಚ್ಚತುರ್ವಿಂಶಾಚ್ಚ ವತ್ಸರಾತ್ । ಬ್ರಹ್ಮಕ್ಷತ್ರವಿಶಾಂ ಕಾಲ ಔಪನಾಯನಿಕಃ ಪರಃ ॥೩೭॥ ಯಾ-i ॥

3 ಉಪನೀಯ ಗುರುಶ್ಶಿಷ್ಯಂ ಮಹಾವ್ಯಾಹೃತಿಪೂರ್ವಕಂ । ವೇದಮಧ್ಯಾಪಯೇದೇನಂ ಶೌಚಾಚಾರಾಂಶ್ಚ ಶಿಕ್ಷಯೇತ್ ॥ಯಾ-i-೧೫॥

4 ನಿತ್ಯಂ ಸ್ನಾತ್ವಾ ಶುಚಿಃ ಕುರ್ಯಾದ್ದೇವರ್ಷಿಪಿತೃತರ್ಪಣಂ । ದೇವತಾಭ್ಯರ್ಚನಂ ಚೈವ ಸಮಿದಾಧಾನಮೇವ ಚ ॥೧೭೬॥ ವರ್ಜಯೇನ್ಮಧುಮಾಂಸಂ ಚ ಗಂಧಂ ಮಾಲ್ಯಂ ರಸಾನ್ ಸ್ತ್ರಿಯಃ । ಶುಕ್ತಾನಿ ಯಾನಿ ಸರ್ವಾಣಿ ಪ್ರಾಣಿನಾಂ ಚೈವ ಹಿಂಸನಂ ॥೧೭೭॥ ಅಭ್ಯಂಗಮಂಜನಂ ಚಾಕ್ಷ್ಣೋರುಪಾನಚ್ಛತ್ರಧಾರಣಂ। ಕಾಮಂ ಕ್ರೋಧಂ ಚ ಲೋಭಂ ಚ ನರ್ತನಂ ಗೀತವಾದನಮ್ ॥೧೭೮॥ ದ್ಯೂತಂ ಚ ಜನವಾದಂ ಚ ಪರಿವಾದಂ ತಥಾನೃತಂ:[1] ಸ್ತ್ರೀಣಾಂ ಚ ಪ್ರೇಕ್ಷಣಾಲಂಭಮುಪಘಾತಂ ಪರಸ್ಯ ಚ ॥೧೭೯॥ ಏಕಶ್ಶಯೀತ ಸರ್ವತ್ರ ನರೇ

ವಿದ್ಯಾಭ್ಯಾಸವು ಮುಗಿದಮೇಲೆ ಗುರುವು ಶಿಷ್ಯನಿಗೆ ಹೇಳುವ ಬುದ್ಧಿವಾದವು ಬಹಳ ಉದಾತ್ತವಾಗಿದೆ—ಸತ್ಯವನ್ನು ಹೇಳು, ಧರ್ಮವನ್ನಾಚರಿಸು, ಅಧ್ಯಯನದ ವಿಷಯದಲ್ಲಿ ಮೈಮರೆಯಬೇಡ. ಗುರುವಿಗೆ ಇಷ್ಟವಾದುದನ್ನು ಸಲ್ಲಿಸಿ ಆಮೇಲೆ ಸಂತಾನಾರ್ಥವಾಗಿ ವಿವಾಹವನ್ನು ಮಾಡಿಕೋ. ಸತ್ಯವನ್ನಾಡುವ, ಧರ್ಮವನ್ನಾಚರಿಸುವ, ನಿನ್ನ ಯೋಗಕ್ಷೇಮದ, ಧನಾರ್ಜನೆಯ, ಅಧ್ಯಯನಾಧ್ಯಾಪನದ, ದೇವಪಿತೃಕಾರ್ಯದ, ವಿಷಯದಲ್ಲಿ ಪ್ರಮಾದವಾಗದ ಹಾಗೆ ಜೋಕೆಯಾಗಿರು. ತಾಯಿಯನ್ನೂ ತಂದೆಯನ್ನೂ ಆಚಾರ್ಯನನ್ನೂ ಅತಿಥಿಯನ್ನೂ ದೇವರೆಂದು ಭಾವಿಸಿ ಸೇವಿಸು. ಅನಿಂದಿತವಾದ ಕಾರ್ಯಗಳನ್ನೇ ಮಾಡು, ಇತರ ಕಾರ್ಯಗಳನ್ನು ಮಾಡಬೇಡ. ನಾವು ಮಾಡುವ ಸತ್ಕಾರ್ಯವನ್ನು ನೀನೂ ಮಾಡು, ಇತರ ಕಾರ್ಯಗಳನ್ನು ಬೇಡ. ನಮಗಿಂತಲೂ ಶ್ರೇಷ್ಠರಾದವರನ್ನು ಆದರಿಸಿ ಸತ್ಕರಿಸು. ಶ್ರದ್ಧೆಯಿಂದ ದಾನಮಾಡಬೇಕು, ಅಶ್ರದ್ಧೆಯಿಂದ ಮಾಡಬಾರದು. ಹೆಚ್ಚಾಗಿದೆಯೆಂದೂ ಕೊಡದಿದ್ದರೆ ಮಾನವಲ್ಲವೆಂದೂ ಅಥವಾ ಅಪಾಯ ಸಂಭವಿಸುವುದೆಂದೂ ಕೊಡಬೇಕು, ಪಾತ್ರಾಪಾತ್ರವಿವೇಚನೆಯಿಂದ ಮನಃಪೂರ್ವಕವಾಗಿ ಕೊಡಬೇಕು (ಅಂತೂ ಸರ್ವಪ್ರಕಾರದಿಂದಲೂ ದಾನಶೀಲನಾಗಬೇಕು). ಕರ್ಮದ ಚಾರಿತ್ರ್ಯದ ಅಥವಾ ವ್ಯವಹಾರದ ವಿಷಯದಲ್ಲಿ ಸಂದೇಹವು ಬಂದರೆ ಜ್ಞಾನಿಗಳೂ ಧರ್ಮಶೀಲರೂ ಆಚಾರಸಂಪನ್ನರೂ ಆದವರು ಹೇಗೆ ನಡೆಯುತ್ತಾರೋ ಹಾಗೆಯೇ ನೀನೂ ನಡೆಯಬೇಕು. ಇದೇ ನಮ್ಮ ಆದೇಶ, ಇದೇ ಉಪದೇಶ, ಇದೇ ವೇದ, ಇದೇ ವೇದಾಂತ, ಇದೇ ಬುದ್ಧಿವಾದ, ಹೀಗೆಯೇ ಮಾಡಬೇಕು, ಹೀಗೆಯೇ ನಡೆಯಬೇಕು.[5] ಇದೇ ವಿದ್ಯಾಭ್ಯಾಸದ ಉದಾತ್ತ ಧ್ಯೇಯವು, ಇದರಿಂದಲೇ ಶ್ರೇಯಸ್ಸು.

---

ತಸ್ಕಂದಯೇತ್ಕ್ವಚಿತ್ । ಕಾಮಾದ್ಧಿ ಸ್ಕಂದಯನ್ರೇತೋ ಹಿನಸ್ತಿ ವ್ರತಮಾತ್ಮನಃ ॥೧೮೦॥ ಅಗ್ನೀಂಧನಂ ಭೈಕ್ಷಚರ್ಯಾಮಧಶ್ಶಯ್ಯಾಂ ಗುರೋರ್ಹಿತಮ್ । ಆಸಮಾವರ್ತನಾತ್ಕುರ್ಯಾತ್ಕೃತೋಪನಯನೋ ದ್ವಿಜಃ ॥೧೦೮॥ ಮ-ii ॥ ಅಭ್ಯಂಜನವನ್ನು ನಿಷೇಧಿಸಿರುವುದು ಗುರುಕುಲದಲ್ಲಿ ಮಾತೃ ಮಾತೃಸ್ಥಾನೀಯರಿಲ್ಲದೆ ಇರುವುದರಿಂದ ಗುರುಪತ್ನಿಯಿಂದ ಮಾಡಿಸಿಕೊಳ್ಳಬಾರದೆಂದು ಮುಂದೆ ಹೇಳಿದೆ(ಮ-ii-೨೧೧). ಅಧಶ್ಶಯ್ಯಾಂ ಎಂದರೆ ಮಂಚಾದಿಗಳನ್ನು ವರ್ಜ್ಯಮಾಡಬೇಕು ಎಂದರ್ಥ, ನೆಲದಮೇಲೆ ಮಲಗಬೇಕೆಂದರ್ಥವಲ್ಲ, ಎಂದು ಕುಲ್ಲೂಕರು ವಿವರಿಸಿದ್ದಾರೆ.

5 ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ ॥ ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾಪ್ರಮದಃ । ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತನ್ತುಂ ಮಾ ವ್ಯವಚ್ಛೇತ್ಸೀಃ । ಸತ್ಯಾನ್ನ ಪ್ರಮದಿತವ್ಯಂ । ಧರ್ಮಾನ್ನ ಪ್ರಮದಿತವ್ಯಂ । ಕುಶಲಾನ್ನ ಪ್ರಮದಿತವ್ಯಂ । ಭೂತ್ಯೈ ನ ಪ್ರಮದಿತವ್ಯಂ । ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಂ । ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ । ಮಾತೃದೇವೋ ಭವ । ಪಿತೃದೇವೋ ಭವ । ಆಚಾರ್ಯದೇವೋ ಭವ । ಅತಿಥಿದೇವೋ ಭವ । ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ । ನೋ ಇತರಾಣಿ ॥ ಯಾನ್ಯಸ್ಮಾಕಗ್ಂ ಸುಚರಿತಾನಿ

## ೫. ವೇದವ್ರತಗಳು

**ಮಹಾನಾಮ್ನೀವ್ರತ, ಮಹಾವ್ರತ, ಉಪನಿಷದ್ವ್ರತ, ಗೋದಾನವ್ರತ,** ಈ ನಾಲ್ಕೂ ವೇದವ್ರತಗಳು. ಇವನ್ನು ಕ್ರಮವಾಗಿ ಹದಿಮೂರನೇ ಹದಿನಾಲ್ಕನೇ ಹದಿನೈದನೇ ಹದಿನಾರನೇ ವಯಸ್ಸಿನಲ್ಲಿ ಮಾಡುವುದು. ಈಗ ಇದನ್ನು ಮಾಡುವವರೇ ಇಲ್ಲವೆಂದು ಕಾಣುತ್ತದೆ. ಇದರ ವಿವರವನ್ನು ಕರ್ಮಕಾಂಡದಲ್ಲಿ ಬೇಕಾದವರು ನೋಡಬಹುದು.

## ೬. ಸಮಾವರ್ತನ

ಉಪನಯನವೆಂದರೆ ಗುರುಕುಲಕ್ಕೆ ಹೋಗುವುದು—**ಸಮಾವರ್ತನ**ವೆಂದರೆ ಅಲ್ಲಿಂದ ಹಿಂತಿರುಗುವುದು. ಈ ಕಾಲದಲ್ಲಿ ಗುರುಕುಲಕ್ಕೆ ಹೋಗುವುದೇ ಇಲ್ಲವಾಗಿ ಸಮಾವರ್ತನವೂ ವಿಧಿಯಾಗಿ ನಡೆಯುವುದಿಲ್ಲ. ವಿವಾಹಕಾಲದಲ್ಲಿಯೇ ಇದನ್ನು ಮಾಡುತ್ತಾರೆ. ವಿದ್ಯಾರ್ಜನೆಯು ಮುಗಿದ ಮೇಲೆ ಗುರುವಿಗೆ ಯಾವುದಾದರೂ ಇಷ್ಟವಾದ ವಸ್ತುವನ್ನು ಸಮರ್ಪಿಸಿ ಅವನ ಅನುಜ್ಞೆಯನ್ನು ಪಡೆದು ಈ ಕರ್ಮವನ್ನು ಮಾಡಿ ಗುರುಕುಲದಿಂದ ಹಿಂತಿರುಗುವುದು ಕ್ರಮವು.[1] ಗುರುಕುಲದಿಂದ ಹಿಂತಿರುಗುವವನಿಗೆ ಸ್ನಾತಕನೆಂದು ಹೆಸರು. ಸಮಾವರ್ತನಹೋಮವನ್ನು ಮಾಡಿ, ಶ್ಮಶ್ರು(ಮೀಸೆ)ವನ್ನು ವಪನಮಾಡಿಸಿಕೊಂಡು ಹೊಸ ವಸ್ತ್ರಗಳನ್ನು ಧರಿಸಿ ಚಿನ್ನದ ಮಣಿಯನ್ನು ಕತ್ತಿಗೆ ಹಾಕಿಕೊಂಡು ಉಷ್ಣೀಷ(ರುಮಾಲು, ಪಾಗು)ವನ್ನು ಧರಿಸುವುದು. ಬ್ರಹ್ಮಚಾರಿಯಾಗಿದ್ದಾಗ ನಿಷಿದ್ಧವಾಗಿದ್ದ ಕಾಡಿಗೆಯನ್ನು ಕಣ್ಣಿಗೆ ಇಟ್ಟು, ಕುಂಡಲವನ್ನು ಕಿವಿಗೆ ಧರಿಸಿ, ಹೂವನ್ನು ತಲೆಗೆ ಮುಡಿದು, ಪಾದರಕ್ಷೆಯನ್ನು ಕಾಲಿಗೆ ಮೆಟ್ಟಿ, ಕಚ್ಚೆಯನ್ನು ಹಾಕಿ ಪಂಚೆಯನ್ನುಟ್ಟು, ಶರೀರ ರಕ್ಷಣೆಗೆ ಬಿದಿರಿನ ಕೋಲನ್ನೂ

---

ತಾನಿ ತ್ವಯೋಪಾಸ್ಯಾನಿ । ನೋ ಇತರಾಣಿ ॥ ಯೇ ಕೇ ಚಾಸ್ಮಚ್ಛ್ರೇಯಾಗ್ಂಸೋ ಬ್ರಾಹ್ಮಣಾಃ । ತೇಷಾಂ ತ್ವಯಾಸನೇನ ಪ್ರಶ್ವಸಿತವ್ಯಂ ॥ ಶ್ರದ್ಧಯಾ ದೇಯಂ । ಅಶ್ರದ್ಧಯಾಽದೇಯಂ । ಶ್ರಿಯಾ ದೇಯಂ । ಹ್ರಿಯಾ ದೇಯಂ । ಭಿಯಾ ದೇಯಂ । ಸಂವಿದಾ ದೇಯಂ ॥ ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ । ವೃತ್ತವಿಚಿಕಿತ್ಸಾ ವಾ ಸ್ಯಾತ್ । ಯೇ ತತ್ರ ಬ್ರಾಹ್ಮಣಾಸ್ಸಂಮರ್ಶಿನಃ। ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಸ್ಸ್ಯುಃ । ಯಥಾ ತೇ ತತ್ರ ವರ್ತೇರನ್ । ತಥಾ ತತ್ರ ವರ್ತೇಥಾಃ । ಅಥಾಭ್ಯಾಖ್ಯಾತೇಷು । ಯೇ ತತ್ರ ಬ್ರಾಹ್ಮಣಾಸ್ಸಂಮರ್ಶಿನಃ। ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಸ್ಸ್ಯುಃ । ಯಥಾ ತೇ ತೇಷು ವರ್ತೇರನ್ । ತಥಾ ತೇಷು ವರ್ತೇಥಾಃ ॥ ಏಷ ಆದೇಶಃ । ಏಷ ಉಪದೇಶಃ । ಏಷಾ ವೇದೋಪನಿಷತ್ । ಏತದನುಶಾಸನಂ । ಏವಮುಪಾಸಿತವ್ಯಂ । ಏವ ಮುಚೈತದುಪಾಸ್ಯಂ ॥ತೈ. ಉ.॥

1 ಗುರವೇ ತು ವರಂ ದತ್ವಾ ಸ್ನಾಯೀತ ತದನುಜ್ಞಯಾ । ವೇದವ್ರತಾನಿ ವಾ ಪಾರಂ ನೀತ್ವಾ ಹ್ಯುಭಯಮೇವ ವಾ ॥ಯಾ-i-೫೧॥

ಮಳೆ ಬಿಸಿಲಿನ ನಿವಾರಣೆಗಾಗಿ ಛತ್ರಿಯನ್ನೂ, ಹಿಡಿದು, ರಾತ್ರಿಯಹೊತ್ತು ಸ್ನಾನ ಮಾಡುವುದಿಲ್ಲ ನಗ್ನನಾಗಿಯೂ ಮಾಡುವುದಿಲ್ಲ ನಗ್ನನಾಗಿ ಮಲಗುವುದಿಲ್ಲ ನಗ್ನಳಾದ ಸ್ತ್ರೀಯನ್ನು ನೋಡುವುದಿಲ್ಲ ಮಳೆ ಹುಯ್ಯುತ್ತಿರುವಾಗ ಓಡುವುದಿಲ್ಲ ಮರವನ್ನು ಹತ್ತುವುದಿಲ್ಲ ಈಜಿಕೊಂಡು ನದಿಯನ್ನು ದಾಟುವುದಿಲ್ಲ ಪ್ರಾಣಕ್ಕೆ ಸಂಶಯ ಬರುವ ಯಾವುದನ್ನೂ ಮಾಡುವುದಿಲ್ಲ ಎಂದು ಪ್ರವಾಸೋಚಿತವಾದ ಸಂಕಲ್ಪವನ್ನು ಮಾಡಿ ಗುರುಕುಲದಿಂದ ಹೊರಟು ನಿಯಮವಾಗಿ ದೇಶಾಟನವನ್ನು ಮಾಡಿ ವಿಶೇಷ ವಿದ್ಯೆಯನ್ನೂ ಅನುಭವವನ್ನೂ ಪಡೆಯುತ್ತಿದ್ದರು. ಈ ಸಂಪ್ರದಾಯವು ಈಗ ಲುಪ್ತವಾಗಿ ವಿವಾಹ ಕಾಲದಲ್ಲಿ ಕಾಶೀಯಾತ್ರೆ ಎಂಬ ಅಲ್ಪಾನುಕರಣದಲ್ಲಿ ಅವಶಿಷ್ಟವಾಗಿದೆ.

## ೭. ವಿವಾಹ

**ವಿವಾಹವು** ಗಂಡಸಿಗೊಂದು ಪ್ರಧಾನ ಸಂಸ್ಕಾರವಾದರೆ ಹೆಂಗಸಿಗೆ ಏಕೈಕ ಸಂಸ್ಕಾರವು. ಯಾರು ಎಷ್ಟೇ ವಾದಿಸಲಿ, ಎಷ್ಟೇ ವಿರೋಧಿಸಲಿ, ವಿವಾಹವು ಸಂಸ್ಕಾರವೆಂಬುದರಲ್ಲಿ ಸಂಶಯವಿಲ್ಲ. ಇದು ನಮ್ಮ ವೈಶಿಷ್ಟ್ಯ ಮಾತ್ರವೇ ಅಲ್ಲ. ಎಲ್ಲಾ ಜನಾಂಗಗಳೂ ಇದನ್ನು ಸಂಸ್ಕಾರವೆಂದು ತಿಳಿದು ಒಂದಲ್ಲ ಒಂದು ಪ್ರಕಾರದಲ್ಲಿ ಸಂಸ್ಕಾರವನ್ನು ಮಾಡಿಯೇ ದಾಂಪತ್ಯಸಿದ್ಧಿಯನ್ನು ಹೊಂದುತ್ತಾರೆ. ಅಮೆರಿಕದ ಪ್ರಖ್ಯಾತರಾದ ಆರ್. ಜಿ. ಇಂಗರ್‌ಸೋಲ್‌ರು ನಾಸ್ತಿಕರಾದರೂ ಕೂಡ—ವಿವಾಹವು ಮಾನವರಲ್ಲೊಂದು ಅತ್ಯಂತ ಪವಿತ್ರವಾದ ಸಂಪ್ರದಾಯವೆಂದು ನಾನು ಭಾವಿಸುತ್ತೇನೆ[1] ಎಂದಿದ್ದಾರೆ ಎಂದಮೇಲೆ ಹೇಳಬೇಕಾದುದೇನು ? ಸ್ವತಃ ದಂಪತಿಗಳೂ ಅವರ ಕುಲದವರೂ ಭಾಂಧವರೂ ಕೇರಿಯವರೂ ಊರಿನವರೂ ಎಲ್ಲಾ ಜನ ಜನಾಂಗಗಳೂ ಸಂಸ್ಥೆಗಳೂ ಸಮಾಜಗಳೂ ಸರ್ಕಾರಗಳೂ, ಸರ್ವರೂ, ಏಕವಾಕ್ಯವಾಗಿ ಸಂಸ್ಕಾರಜನ್ಯವಾದ ದಾಂಪತ್ಯಕ್ಕೆ ಮನ್ನಣೆಯನ್ನೂ ಗೌರವವನ್ನೂ ಸಲ್ಲಿಸುತ್ತಾರೆ. ಸಂಸ್ಕಾರವಲ್ಲದಿದ್ದರೆ ಸ್ತ್ರೀಪುರುಷರಿಗೆ ಸ್ವತಸ್ಸಿದ್ಧವಾದ ಸರ್ವಗಮ್ಯತ್ವಕ್ಕೆ ಪರಿಹಾರವೇ ಇರುತ್ತಿರಲಿಲ್ಲ, ಮಾನವರೂ ಪಶುವತ್ತಾಗಿಯೇ ಬಾಳಬೇಕಾಗುತ್ತಿತ್ತು. ಸಂಸ್ಕಾರದಿಂದಲೇ ವಿವಾಹಕ್ಕೆ ಸ್ಥಿರತ್ವವೂ ಮಾನ್ಯತ್ವವೂ ಅಭಾಧ್ಯತ್ವವೂ ಅಭೇದ್ಯತ್ವವೂ ಇರುವುದು. ಇಂಥಾ ಪವಿತ್ರ ಸಂಸ್ಕಾರವನ್ನು ಅಲ್ಲಗಳೆಯುವವರು ತಮ್ಮ ಶ್ರೇಯಸ್ಸಿಗೆ ತಾವೇ ಕುಠಾರವನ್ನು ಪ್ರಯೋಗಿಸುತ್ತಾರೆ.

ಜೀವವರ್ಗಗಳಲ್ಲೆಲ್ಲ ಸರ್ವೋತ್ಕೃಷ್ಟವಾದ ಮಾನವಜಾತಿಯಲ್ಲಿ ಸ್ತ್ರೀಪುರುಷ ಸಾಹಚರ್ಯವು ಇತರ ಜೀವಕೋಟಿಗಳಲ್ಲಿರುವಂತೆ ಕ್ಷಣಿಕವಲ್ಲ—ಸ್ಥಾಯಿಯಾದುದು. ಈ ವೈಶಿಷ್ಟ್ಯಕ್ಕೆ ಮಾನವನ ದೇಹಧರ್ಮವೂ ಮನೋಧರ್ಮವೂ ಪ್ರಧಾನ ಕಾರಣಗಳು. ದೇಹಧರ್ಮವು ಪ್ರತ್ಯಕ್ಷವಾದುದು. ಮನೋಧರ್ಮವು ವಿಧವಿಧವಾಗಿ

---

1 Let me say right here that I regard marriage as the holiest institution among men—The Liberty of Man—by R. G. Ingersoll.

ಪ್ರಸರಿಸಿ ಅದೇ ಒಂದು ದೊಡ್ಡ ದುರ್ಗವಾಗಿ ಪರಿಣಮಿಸಿದೆ. ಅದಕ್ಕಾಗಿ ಎಷ್ಟೆಷ್ಟೋ ಮಹಾ ಮಹಾ ಪ್ರಯತ್ನಗಳೂ ಸಾಹಸಗಳೂ ಸ್ವಾರ್ಥತ್ಯಾಗಗಳೂ ಆಗಿಹೋಗಿವೆ—ಆಗುತ್ತಲೂ ಇವೆ, ಮುಂದೂ ಆಗುತ್ತವೆ. ಇಷ್ಟವಾದ ವ್ಯಕ್ತಿಯು ಸ್ವಾಧೀನವಾದರೆ ಪುರುಷಾರ್ಥಸಾಧನೆ—ಆಗದಿದ್ದರೆ ಜೀವನವೇ ನೀರಸವಾಗಿ ವ್ಯರ್ಥವಾಗಿಹೋಗುತ್ತದೆ. ಈ ವಿಷಯವಾಗಿ ಲಾಕ್ಷಣಿಕರು ಒಂದು ಶಾಸ್ತ್ರವನ್ನೇ ರಚಿಸಿದ್ದಾರೆ. ಅದರಲ್ಲೀವಿಧದ ಮನೋವೃತ್ತಿಗೆ ಶೃಂಗಾರವೆಂದು ಹೆಸರು. ನವರಸಗಳಲ್ಲಿ ಶೃಂಗಾರವೇ ಪ್ರಧಾನವಾದ ರಸ, ಅದೇ ಮಧುರವಾದ ರಸ, ಪ್ರಹ್ಲಾದನವಾದ ರಸ, ಜೀವನ ಸರ್ವಸ್ವವಾದ ಮನೋಭಾವ, ಇಂದ್ರಿಯಸೌಖ್ಯವು ಪ್ರಧಾನವಾದುದಲ್ಲ—ಸ್ನೇಹಪ್ರೇಮದಿಂದ ಪರಿಪೋಷಿತವಾಗಿ ಸದಾಚಾರಶೀಲಚಾರಿತ್ರಗಳಿಂದ ವ್ಯವಸ್ಥಿತವಾಗಿ ಧರ್ಮಬುದ್ಧಿಯಿಂದ ಸಂಶೋಧಿತವಾಗಿ ಅಸ್ವಾರ್ಥದ ಮಹತ್ವಕ್ಕೇರಿ ಸರ್ವೋತ್ಕೃಷ್ಟವಾದ ಪ್ರಾಶಸ್ತ್ಯವನ್ನೂ ಪಾವನತ್ವವನ್ನೂ ಪಡೆದ ಜೀವನದ ಜೀವನಾಡಿ. ಇದನ್ನು ಲಘುವಾಗೆಣಿಸುವುದೊಂದು ಮಹಾಪಾತಕವೇ.

ಇಂಥಾ ಮಹತ್ವ ವಿಶಿಷ್ಟವಾದ ಸಂಬಂಧವನ್ನು ಮಾಡುವಾಗ ಆಚರಿಸುವ ಸಂಸ್ಕಾರವೇ ವಿವಾಹವು. ಧರ್ಮಪ್ರಧಾನವಾದ ನಮ್ಮ ಜನಾಂಗದಲ್ಲೀ ಸಂಸ್ಕಾರಕ್ಕೆ ವಿಶೇಷ ಕಾರ್ಯಕಲಾಪಗಳು ನಡೆಯುವುದೂ ಸಹಜವೇ. ವಿವಾಹಕ್ಕೆ ಪೂರ್ವಭಾವಿಯಾಗಿ ಎರಡು ಕಡೆಯವರೂ ವಿಶೇಷ ವಿಚಕ್ಷಣೆಯಿಂದ ವಧೂವರರನ್ನು ಗೊತ್ತು ಮಾಡುತ್ತಾರೆ. ಆರಿಸುವುದರಲ್ಲಿ ನೋಡಬೇಕಾದ ಗುಣಾವಗುಣಗಳನ್ನು ಸ್ಮೃತಿಕಾರರೂ ಜ್ಯೋತಿಷ್ಕರೂ ಸಾಮುದ್ರಿಕರೂ ವಿಶೇಷವಾಗಿ ಹೇಳಿದ್ದಾರೆ. ಮನುವೂ ಯಾಜ್ಞವಲ್ಕ್ಯರೂ ಹೇಳಿರುವ ಲಕ್ಷಣಗಳನ್ನು ಮಾತ್ರ ಗಮನಿಸಿದರೆ ಸಾಕು. ಅವುಗಳಲ್ಲಿ ನಿಷಿದ್ಧವಾದವು ಕೆಲವು, ಪ್ರಶಂಸನೀಯವು ಕೆಲವು. ವಧೂವರರು ಸವರ್ಣದವರಾಗಿರಬೇಕು, ಸಪಿಂಡರೂ ಸಗೋತ್ರದವರೂ ಸಪ್ರವರದವರೂ ಆಗಿರಕೂಡದು. ಅಂಥಾವರ ವಿವಾಹವು ಅಸಿದ್ಧವಾಗುವುದು. ಪ್ರಶಂಸನೀಯ ಗುಣಗಳು ಬಾಹ್ಯವೂ ಆಭ್ಯಂತರವೂ ಎಂದೆರಡು ಪ್ರಕಾರದವು. ಮೊದಲು ಕುಲವನ್ನು ಪರೀಕ್ಷಿಸಬೇಕು.[1] ತಾಯಿಯ ಕಡೆ ಐದು ತಲೆವರೆಗೂ ತಂದೆಯ ಕಡೆ ಐದು ತಲೆವರೆಗೂ ವಿಖ್ಯಾತರೂ ಶ್ರುತಾಧ್ಯಯನ ಸಂಪನ್ನರೂ, ಪುತ್ರಪೌತ್ರಕ್ಷೇತ್ರಪಶುದಾಸೀತ್ಯಾದಿ ಸಂಪನ್ನರೂ, ಸ್ತ್ರೀಸಂತಾನವೇ ಆಗದವರೂ, ಅಜೀರ್ಣ ದೀರ್ಘರೋಗ ಮೂಲವ್ಯಾಧಿ ಕ್ಷಯ ಮೂರ್ಛೆ ತೊನ್ನು ಕುಷ್ಠ ಮುಂತಾದ ಪರಂಪರೆಯಾಗಿ ಬರುವ ರೋಗವಿಲ್ಲದವರೂ, ಆದ ಕುಲದಿಂದ ಹೆಣ್ಣು ಗಂಡನ್ನು ಆರಿಸಬೇಕು. ನೋಡಿದ ಕೂಡಲೇ ಕಣ್ಣಿಗೂ ಮನಸ್ಸಿಗೂ[2] ಆನಂದವಾಗಬೇಕು. ವಿಕಲಾಂಗರೂ ಅಧಿ

---

1 ಕುಲಮಗ್ರೇಪರೀಕ್ಷೇತ ॥ ಕುಲವು ಒಳ್ಳೆಯದಾದರೆ ಕೋಡಗವನ್ನಾದರೂ ಮಾಡಿಕೊಳ್ಳಬಹುದು—ಅಂದರೆ ಹೆಣ್ಣು ಗಂಡು ಕಮನೀಯರೇ ಆದರೂ ಕುಲಹೀನರಾಗಬಾರದು, ಎಂಬಗಾದೆಯ ಅರ್ಥವೂ ಇದೇ. 2 ಮನೋಽನುಕೂಲಂಪ್ರಥಮಂ ॥ ಭೃಗುಃ॥

ಕಾಂಗರೂ ಆಗಿರಬಾರದು. ಮೈಮೇಲೆ ಕೂದಲೇ ಇಲ್ಲದೆ ಇರುವುದೂ, ಅಧಿಕವಾಗಿ ಹೆಚ್ಚಾಗಿ ಕೂದಲಿರುವುದೂ, ಅಪಲಕ್ಷಣ. ಮೈಮೇಲೆ ಸ್ವಲ್ಪಕೂದಲೂ ಮೃದುವಾದ ಕೂದಲೂ ಇರಬೇಕು. ತಲೆಯ ಕೂದಲೂ ಮೃದುವಾಗಿರಬೇಕು, ಕೆಂಪುಮಿಶ್ರವಾದ ಬಣ್ಣದ್ದಾಗಿರಬಾರದು. ಹಲ್ಲುಗಳು ಸಣ್ಣಗೆ ಇರಬೇಕು. ಮಾತು ಕಠಿಣವಾಗಿಯೂ ಗರ್ಹ್ಯವಾಗಿಯೂ ಇರಬಾರದು. ಕಣ್ಣು ಘೋರರೂಪವರ್ಣವಾಗಿರಬಾರದು. ಹೆಣ್ಣಿಗೆ ವಯಸ್ಸು ಗಂಡಿಗಿಂತಲೂ ಚಿಕ್ಕದಾಗಿರಬೇಕು, ಅಣ್ಣತಮ್ಮಂದಿರಿರಬೇಕು, ಹಂಸದ ಆನೆಯ ಹಾಗೆ ನಡೆಯಿರಬೇಕು, ಹೆಸರು ಸೌಮ್ಯವಾಗಿರಬೇಕು—ವೃಕ್ಷಪಕ್ಷಿನಕ್ಷತ್ರಗಿರಿನದೀದಾಸೀತ್ಯಾದಿಗಳ ಹೆಸರೂ, ಭಯಂಕರವಾದ ಹೆಸರೂ, ಇರಬಾರದು. ಗಂಡು ವಿದ್ಯಾವಂತನೂ ಬುದ್ಧಿವಂತನೂ ಯೌವನಸ್ಥನೂ ಜನಪ್ರಿಯನೂ ಆಗಿರಬೇಕು. ಇವೆಲ್ಲವೂ ಬಾಹ್ಯಲಕ್ಷಣಗಳು. ಹೆಣ್ಣಿಗೆ ಸ್ತ್ರೀತ್ವವೂ ಗಂಡಿಗೆ ಪುಂಸತ್ವವೂ ಇರಬೇಕು—ನಪುಂಸಕತ್ವವಿರಬಾರದು. ಹೆಣ್ಣು ವಿವಾಹದಿಂದಾಗಲೀ ಉಪಭೋಗದಿಂದಾಗಲೀ ದೂಷಿತಳಾಗಿರಬಾರದು. ಗಂಡೂ ಬ್ರಹ್ಮಚರ್ಯವನ್ನು ಕಳೆದುಕೊಂಡಿರಬಾರದು. ಇವೆಲ್ಲವೂ ಆಭ್ಯಂತರ ದೋಷಗಳು. ಇವನ್ನು ವೈದ್ಯಜ್ಯೋತಿಷಸಾಮುದ್ರಿಕಾದಿಗಳಿಂದಲೂ, ಲಕ್ಷಣಗಳಿಂದಲೂ, ಆಪ್ತವಾಕ್ಯದಿಂದಲೂ, ಅನುಭವದಿಂದಲೂ, ಸರ್ವಪ್ರಯತ್ನದಿಂದಲೂ, ಪರೀಕ್ಷಿಸಿ ತಿಳಿಯಬೇಕು.[3] ಲೋಭಾಲಸ್ಯ

---

3 ಗುರುಣಾನುಮತಃ ಸ್ನಾತ್ವಾ ಸಮಾವೃತ್ತೋ ಯಥಾವಿಧಿ । ಉದ್ವಹೇತ ದ್ವಿಜೋ ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಂ ॥೪॥ ಅಸಪಿಂಡಾ ಚ ಯಾ ಮಾತುರಸಗೋತ್ರಾ ಚ ಯಾ ಪಿತುಃ । ಸಾ ಪ್ರಶಸ್ತಾ ದ್ವಿಜಾತೀನಾಂ ದಾರಕರ್ಮಣಿ ಮೈಥುನೇ ॥೫॥ ಮಹಾಂತ್ಯಪಿ ಸಮೃದ್ಧಾನಿ ಗೋಽಜಾವಿಧನಧಾನ್ಯತಃ । ಸ್ತ್ರೀಸಂಬಂಧೇ ದಶೈತಾನಿ ಕುಲಾನಿ ಪರಿವರ್ಜಯೇತ್ ॥೬॥ ಹೀನಕ್ರಿಯಂ ನಿಷ್ಪುರುಷಂ ನಿಶ್ಛಂದೋ ರೋಮಶಾರ್ಶಸಮ್ । ಕ್ಷಯ್ಯಾಮಯಾವ್ಯಪಸ್ಮಾರಿಶ್ವಿತ್ರಿಕುಷ್ಠಿಕುಲಾನಿ ಚ ॥೭॥ ನೋದ್ವಹೇತ್ಕಪಿಲಾಂ ಕನ್ಯಾಂ ನಾಧಿಕಾಂಗೀಂ ನ ರೋಗಿಣೀಂ । ನಾಲೋಮಿಕಾಂ ನಾತಿಲೋಮಾಂ ನ ವಾಚಾಟಾಂ ನ ಪಿಂಗಲಾಂ ॥೮॥ ನರ್ಕ್ಷವೃಕ್ಷನದೀನಾಮ್ನೀಂ ನಾಂತ್ಯಪರ್ವತನಾಮಿಕಾಂ । ನಪಕ್ಷ್ಯಹಿಪ್ರೇಷ್ಯನಾಮ್ನೀಂ ನಚಭೀಷಣನಾಮಿಕಾಂ ॥೯॥ ಅವ್ಯಂಗಾಂಗೀಂ ಸೌಮ್ಯನಾಮ್ನೀಂ ಹಂಸವಾರಣಗಾಮಿನೀಂ । ತನುಲೋಮಕೇಶದಶನಾಂ ಮೃದ್ವಂಗೀಮುದ್ವಹೇತ್ಸ್ತ್ರಿಯಂ ॥೧೦॥ ಯಸ್ಯಾಸ್ತು ನಭವೇದ್ಭ್ರಾತಾ ನವಿಜ್ಞಾಯೇತ ವಾ ಪಿತಾ । ನೋಪಯಚ್ಛೇತ ತಾಂ ಪ್ರಾಜ್ಞಃ ಪುತ್ರಿಕಾಧರ್ಮಶಂಕಯಾ ॥೧೧॥ ಮ-iii ॥ ಅವಿಪ್ಲುತಬ್ರಹ್ಮಚರ್ಯೋ ಲಕ್ಷಣ್ಯಾಂ ಸ್ತ್ರಿಯಮುದ್ವಹೇತ್ । ಅನನ್ಯಪೂರ್ವಿಕಾಂ ಕಾಂತಾಮಸಪಿಂಡಾಂ ಯವೀಯಸೀಂ ॥೫೨॥ ಅರೋಗಿಣೀಂ ಭ್ರಾತೃಮತೀಮಸಮಾನಾರ್ಷಗೋತ್ರಜಾಂ । ಪಂಚಮಾತ್ಸಪ್ತಮಾದೂರ್ಧ್ವಂ ಮಾತೃತಃ ಪಿತೃತಸ್ತಥಾ ॥೫೩॥ ದಶಪೂರುಷವಿಖ್ಯಾತಾಚ್ಛ್ರೋತ್ರಿಯಾಣಾಂ ಮಹಾಕುಲಾತ್ । ಸ್ಫೀತಾದಪಿ ನ ಸಂಚಾರಿರೋಗದೋಷಸಮನ್ವಿತಾತ್ ॥೫೪॥ ಏತೈರೇವ ಗುಣೈರ್ಯುಕ್ತಸ್ಸವರ್ಣಶ್ಶ್ರೋತ್ರಿಯೋ ವರಃ । ಯತ್ನಾತ್ಪರೀಕ್ಷಿತಃ ಪುಂಸ್ತ್ವೇ ಯುವಾ ಧೀಮಾನ್ ಜನಪ್ರಿಯಃ ॥೫೫॥ ಯಾ-i ॥ ಕುಲಂ ಚ ಶೀಲಂ ಚ ವಯಶ್ಚ ರೂಪಂ ವಿದ್ಯಾಂ ಚ ವಿತ್ತಂ ಚ ಸನಾಥತಾಂ ಚ । ಏತಾನ್ ಗುಣಾನ್ ಸಪ್ತ ಸಮೀಕ್ಷ್ಯ ದೇಯಾ ಕನ್ಯಾ ಬುಧೈಶ್ಶೇಷಮಚಿಂತನೀಯಂ ॥ಯಮಃ॥

ಪ್ರಮಾದಾದಿಗಳಿಂದ ಮೋಸಹೋಗಬಾರದು. ಯಾವುದೋ ಒಂದು ಸಿಕ್ಕಿತೆಂದು ಮಾಡು, ಮಾಡಿಕೋ, ಎಂದು ಯಾರೂ ಹೇಳಿಲ್ಲ. ಗುಣಹೀನನಿಗೆ ಕೊಡುವುದಕ್ಕಿಂತಲೂ ಕನ್ನಿಕೆಯಾಗಿಯೇ ಇದ್ದುಬಿಡುವುದೊಳ್ಳೆಯದೆಂದೇ ಸ್ಮೃತಿಯು ಹೇಳುವುದು.[4] ಇಷ್ಟೆಲ್ಲವನ್ನೂ ಪರೀಕ್ಷಿಸಿ ಕನ್ಯಾದಾನವನ್ನು ಮಾಡಿದರೂ ಕೂಡ ಸಪ್ತಪದಿಯು ಮುಗಿವುದರೊಳಗೆ ವರನಲ್ಲಿ ದೋಷವು ಕಂಡುಬಂದರೂ ಅಥವಾ ಅವನಿಗಿಂತಲೂ ಶ್ರೇಷ್ಠನಾದವನು ದೊರೆತರೂ ದಾನಮಾಡಿದವನಿಗೆ ತಪ್ಪಿಸಿ ಶ್ರೇಷ್ಠನಾದವನಿಗೆ ಕೊಡುವುದು ಎಂದು ಹೇಳಿದೆ.[5]

ಪ್ರೌಢಕನ್ಯಾ ವಿವಾಹದ ವಿಷಯದಲ್ಲಿ ವಿವಾದವಿತ್ತು. ಪ್ರೌಢವಿವಾಹವು ನಿಷಿದ್ಧವೆಂದಾಗಲೀ, ನಡೆದರೆ ಅಕೃತವಾಗುವುದೆಂದಾಗಲೀ, ಸ್ಮೃತಿವಚನವಿಲ್ಲ. ಋತುಮತಿಯಾದರೂ ವಿವಾಹ ಮಾಡದಿದ್ದರೆ ಕನ್ನಿಕೆಗೆ ದೋಷವು ಉಕ್ತವಾಗಿಲ್ಲ, ಕನ್ಯಾದಾತನಿಗೆ ಭ್ರೂಣಹತ್ಯದೋಷವು ಉಕ್ತವಾಗಿದೆ.[6] ಭ್ರೂಣಹತ್ಯ ದೋಷವನ್ನು ದಾತನ ಕತ್ತಿಗೆ ಕಟ್ಟಿರುವುದು ಅರ್ಥಗರ್ಭಿತವಾಗಿದೆ(ಅದು ಸೂಕ್ಷ್ಮವಿಚಾರ). ಪಾಪಪುಣ್ಯದವ್ಯವಸ್ಥೆಯು ಈ ಪ್ರಕರಣಕ್ಕೆ ಅಪ್ರಕೃತ. ಋತುವಾದರೂ ಮದುವೆ ಮಾಡ

---

ಪಂಚದೀರ್ಘಂ ಚತುರ್ಹ್ರಸ್ವಂ ಪಂಚಸೂಕ್ಷ್ಮಂ ಷಡುನ್ನತಂ । ಸಪ್ತರಕ್ತಂ ತ್ರಿಗಂಭೀರಂ ತ್ರಿವಿಸ್ತೀರ್ಣಂ ಪ್ರಶಸ್ಯತೇ ॥ ಬಾಹುನೇತ್ರಾಂತರೇ ಚೈವ ಜಾನು ನಾಸಾ ತಥೈವ ಚ । ಸ್ತನಯೋರಂತರಂ ಚೈವ ಪಂಚದೀರ್ಘಂ ಪ್ರಶಸ್ಯತೇ ॥ ಗ್ರೀವಾ ಪ್ರಜನನಂ ಪೃಷ್ಠಂ ಹ್ರಸ್ವಂ ಜಂಘೇ ಚ ಶೋಭನೇ । ಹ್ರಸ್ವಾನಿ ಯಸ್ಯ ಚತ್ವಾರಿ ಪೂಜಾಮಾಪ್ನೋತಿ ನಿತ್ಯಶಃ॥ ಸೂಕ್ಷ್ಮಾಣ್ಯಂಗುಳಿಪರ್ವಾಣಿ ದಂತಕೇಶನಖತ್ವಚಃ । ಪಂಚಸೂಕ್ಷ್ಮಾಣಿ ಯೇಷಾಂ ಸ್ಯುಸ್ತೇ ನರಾ ದೀರ್ಘಜೀವಿನಃ । ಕಕ್ಷಃ ಕುಕ್ಷಿಶ್ಚ ಘ್ರಾಣಶ್ಚ ಸ್ಕಂಧವಕ್ಷೋಲಲಾಟಕಾಃ । ಏತತ್ಸರ್ವಂ ವಿನಿರ್ದಿಷ್ಟಮುನ್ನತಂ ಷಟ್ಪ್ರಶಸ್ಯತೇ ॥ ನೇತ್ರಾಂತಂ ಕರಪಾದಂ ಚ ಹ್ಯಧರೋಷ್ಠಂ ಚ ತಾಲುಕಂ । ಜಿಹ್ವಾ ನಖಾಶ್ಚ ತೇ ಸಪ್ತ ರಕ್ತವರ್ಣಾಶ್ಶುಭಾವಹಾಃ ॥ ಸ್ವರಸ್ಸತ್ವಂ ಚ ನಾಭಿಶ್ಚ ತ್ರಿಗಂಭೀರಂ ಪ್ರಶಸ್ಯತೆ. ॥ಸಾಮುದ್ರಿಕ॥ ತೋಳು ಕಣ್ಣುಗಳ ಅಂತರ ಮೊಳಕಾಲು ಮೂಗು ಸ್ತನಗಳ ಅಂತರ ಈ ಐದೂ ದೀರ್ಘವಾಗಿರಬೇಕು. ಕತ್ತು ಉಪಸ್ಥ ಬೆನ್ನು ಮಂಡಿ ಈ ನಾಲ್ಕೂ ಹ್ರಸ್ವವಾಗಿರಬೇಕು. ಬೆರಳಿನ ಪರ್ವ ಹಲ್ಲು ತಲೇಕೂದಲು ಉಗುರು ಚರ್ಮ ಈ ಐದೂ ಸೂಕ್ಷ್ಮವಾಗಿರಬೇಕು. ಕಂಕುಳು ಹೊಟ್ಟೆ ಮೂಗು ಹೆಗಲು ಎದೆ ಹಣೆ ಈ ಆರೂ ಉನ್ನತವಾಗಿರಬೇಕು. ಕಣ್ಣಿನ ತುದಿ ಕೈ ಕಾಲು ತುಟಿಗಳು ಕೆನ್ನೆ ನಾಲಿಗೆ ಉಗುರು ಈ ಏಳೂ ಕೆಂಪಗಿರಬೇಕು. ಸ್ವರವೂ ಸತ್ವವೂ ಹೊಕ್ಕಳೂ ಗಂಭೀರವಾಗಿರಬೇಕು. ಎದೆ ತಲೆ ಹಣೆ ವಿಶಾಲವಾಗಿರಬೇಕು.

4 ಕಾಮಮಾಮರಣಾತ್ತಿಷ್ಠೇದ್ಗೃಹೇ ಕನ್ಯರ್ತುಮತ್ಯಪಿ । ನ ಚೈವೇನಾಂ ಪ್ರಯಚ್ಛೇತ್ತು ಗುಣಹೀನಾಯ ಕರ್ಹಿಚಿತ್ ॥ಮ-ix-೮೯॥

5 ದತ್ತಾಮಪಿ ಹರೇತ್ಕನ್ಯಾಂ ಶ್ರೇಯಾಂಶ್ಚೇದ್ವರಆವ್ರಜೇತ್ ॥ಯಾ-i-೬೫॥ ಏತತ್ಸಪ್ತಮಪದಾತ್ಪ್ರಾಕ್ ॥ಮಿತಾಕ್ಷರಾ॥

6 ಅಪ್ರಯಚ್ಛನ್ ಸಮಾಪ್ನೋತಿ ಭ್ರೂಣಹತ್ಯಾಮೃತಾವೃತೌ । ಗಮ್ಯಂ ತ್ವಭಾವೇ ದಾತೄಣಾಂ ಕನ್ಯಾ ಕುರ್ಯಾತ್ಸ್ವಯಂವರಂ ॥ಯಾ-i-೬೪॥

ದಿದ್ದರೆ ಕನ್ನಿಕೆಯು ಮೂರು ವರ್ಷ **ಕಾದುನೋಡಿ** ಆಮೇಲೆ ಸ್ವಯಂವರವನ್ನು ಮಾಡಿಕೊಳ್ಳುವುದು, ಮಾಡಿಕೊಳ್ಳುವವಳಿಗೂ ಮಾಡಿಕೊಂಡವನಿಗೂ ಯಾವ ದೋಷವೂ ಇಲ್ಲವೆಂದು ಮನುವಚನವಿದೆ.[7] ಮದುವೆಯಾದ ಮೂರು ದಿವಸದ ವರೆಗೂ ವಧೂವರರು ಸ್ವಲಂಕೃತರಾಗಿ **ಬ್ರಹ್ಮಚಾರಿಗಳಾಗಿಯೇ** ಕೆಳಗೆ ಮಲಗಬೇಕೆಂದು ಗೃಹ್ಯಸೂತ್ರವಿದೆ.[8] ವಧುವಿಗೆ ಪ್ರೌಢಾವಸ್ಥೆಯು ಪ್ರಾಪ್ತವಾಗದಿದ್ದರೆ ಬ್ರಹ್ಮಚರ್ಯನಿಯಮವೇ ಅನವಶ್ಯವಾಗಿತ್ತು. ಈ ವಚನಗಳಿಂದಲೇ ಪ್ರೌಢ ಕನ್ಯಾ ವಿವಾಹವು ಶಾಸ್ತ್ರೀಯವೆಂದು ಸ್ಪಷ್ಟವಾಗುತ್ತದೆ(ಬೇರೆ ಆಧಾರಗಳೂ ಇವೆ). ಇದು ಗತಿಸಿದ ಮಾತು, ಈಗ ಅನೇಕ ಕಾರಣಗಳಿಂದ ಪ್ರೌಢಕನ್ಯಾವಿವಾಹವೇ ರೂಢಿಯಾಗಿದೆ. ಕನ್ನಿಕೆಯರೂ ವಿದ್ಯಾವತಿಯರಾಗುತ್ತಿದ್ದಾರೆ. ಅವರನ್ನು ಕೇಳಿ ಮಾಡುವುದೂ ಪ್ರಚಾರಕ್ಕೆ ಬರುತ್ತಿದೆ. ಅವರಿಗೆ ತಮ್ಮ ಇಷ್ಟವನ್ನು ಸ್ಪಷ್ಟಪಡಿಸುವ ಅವಕಾಶವೂ ದೊರೆತಿದೆ. ಈ ವಿಷಯದಲ್ಲಿದ್ದೊಂದು ದೊಡ್ಡ ಆಕ್ಷೇಪಕ್ಕೆ ಅವಕಾಶವೂ ತಪ್ಪಿದೆ. ಸರ್ವಸಂಮತಿಯಿಂದಲೇ ಸಂಬಂಧವು ನಿಷ್ಕರ್ಷೆಯಾಗುತ್ತದೆ. ನಿಷ್ಕರ್ಷೆಯಾದ ಮೇಲೆ ನಡೆಯಲೇಬೇಕೆಂಬ ನಿರ್ಬಂಧವೂ ಇಲ್ಲ, ಆಮೇಲೂ ಬೇಡವೆನ್ನಬಹುದು.

ಉತ್ಸವಕ್ಕೆ ಸಿದ್ಧಪಡಿಸಿಕೊಂಡು ಉಭಯಪಕ್ಷದವರೂ ಬಂಧುಮಿತ್ರಸುಹೃಜ್ಜನರನ್ನು ಬರಮಾಡಿಕೊಳ್ಳುತ್ತಾರೆ. ಎಲ್ಲರ ಅಭಿನಂದನೆಯನ್ನು ಪಡೆಯುವುದು ಇದರ ಅಂತರ್ಯ. ಕಲಾಪಗಳೂ ವಿಶೇಷವಾಗಿ ನಡೆಯುತ್ತವೆ. ಮೊದಲು ದೇವರ ಸಂತರ್ಪಣೆ—ದೈವಸಂಕಲ್ಪವನ್ನು ಆಶಂಸಿಸಿ ಪ್ರಾರ್ಥಿಸುವುದು. ಎರಡನೆಯದು ವರಪೂಜೆ—ವರನನ್ನೂ ವರನ ಬಂಧುಗಳನ್ನೂ ಸ್ವಾಗತಿಸಿ ಸತ್ಕರಿಸುವುದು. ಆ ಕಾಲದಲ್ಲಿ ಕನ್ಯಾಮಾತೆಯು ವರನ ಕಣ್ಣಿಗೂ ಕೆನ್ನೆಗೂ ಕಾಡಿಗೆಯನ್ನು ಹಚ್ಚುತ್ತಾಳೆ, ಇದೊಂದು ಸೂಕ್ಷ್ಮಪರೀಕ್ಷೆ. ಆಮೇಲೆ ಉಭಯಪಕ್ಷದವರೂ ಹಿರಿಯರನ್ನಾರಾಧಿಸಿ ಗ್ರಹಶಾಂತಿಯನ್ನು ಮಾಡುತ್ತಾರೆ—ಇದೇ ನಾಂದೀಗ್ರಹಯಜ್ಞ. ವರನು ಸಮಾವರ್ತನವನ್ನು ಮಾಡಿಕೊಂಡು ದೇಶಾಟನಕ್ಕೆ ಹೊರಟ ಶಾಸ್ತ್ರವನ್ನು ಮಾಡುತ್ತಾನೆ. ದೀಕ್ಷಾವಸ್ತ್ರವನ್ನು ವರನಿಗೆ ಕನ್ಯೆಯ ಸೋದರಮಾವನು ಉಡಿಸುವ ಪದ್ಧತಿಯಿದ್ದು,

---

7 ತ್ರೀಣಿ ವರ್ಷಾಣ್ಯುದೀಕ್ಷೇತ ಕುಮಾರ್ಯೃತುಮತೀಸತೀ । ಊರ್ಧ್ವಂ ತು ಕಾಲಾದೇತಸ್ಮಾದ್ವಿಂದೇತ ಸದೃಶಂ ಪತಿಂ ॥೯೦॥ ಅದೀಯಮಾನಂ ಭರ್ತಾರಮಧಿಗಚ್ಛೇದ್ಯದಿ ಸ್ವಯಂ । ನೈನಃ ಕಿಂಚಿದವಾಪ್ನೋತಿ ನ ಚ ಯಂ ಸಾಧಿಗಚ್ಛತಿ ॥೯೧॥ ಮ-ix ॥
ಅಪ್ರಯಚ್ಛನ್ ಸಮಾಪ್ನೋತಿ ಭ್ರೂಣಹತ್ಯಾಮೃತಾವೃತೌ । ಗಮ್ಯಂ ತ್ವಭಾವೇ ದಾತೄಣಾಂ ಕನ್ಯಾ ಕುರ್ಯಾತ್ಸ್ವಯಂವರಂ ॥ಯಾ-i-೬೪॥

8 ಅಕ್ಷಾರಲವಣಾಶಿನೌ ಬ್ರಹ್ಮಚಾರಿಣಾವಲಂಕುರ್ವಾಣಾವಧಶ್ಶಯಾನೌ ಸ್ಯಾತಾಂ । ಅತಊರ್ಧ್ವಂ ತ್ರಿರಾತ್ರಂ ॥ ಆಶ್ವಲಾಯನಗೃಹ್ಯಸೂತ್ರ ॥ ವೈದೇಹೇಷು ಸದ್ಯ ಏವ ವ್ಯವಾಯೋ ದೃಷ್ಟಃ । ಗೃಹ್ಯೇ ತು "ಬ್ರಹ್ಮಚಾರಿಣೌ ತ್ರಿರಾತ್ರಂ" ಇತಿ ಬ್ರಹ್ಮಚರ್ಯಂ ವಿಹಿತಂ ॥ (ವ್ಯವಾಯಸ್ಸಂಭೋಗಃ) ॥ಗಾರ್ಗ್ಯನಾರಾಯಣವೃತ್ತಿ॥

ಇದೂ ಒಂದು ಸೂಕ್ಷ್ಮ ಪ್ರಸಂಗವೇ. ಇದೇ ಸಮಾವರ್ತನೆ—ಕಾಶೀಯಾತ್ರೆ. ಕನ್ಯಾದಾತನು ವರನನ್ನು ಹಿಂತಿರುಗಿಸಿ ವಿವಾಹಮಂಟಪಕ್ಕೆ ಕರೆತಂದು ಸತ್ಕರಿಸುತ್ತಾನೆ. ವರನ ಕಡೆಯ ಮುತ್ತೈದೆಯರು ವಧುವಿಗೆ ದೀಕ್ಷಾವಸ್ತ್ರವನ್ನುಡಿಸಿ ಗೌರೀ ಪೂಜೆಯನ್ನು ಮಾಡಿಸುತ್ತಾರೆ, ಇದೂ ಸೂಕ್ಷ್ಮಪ್ರಸಂಗವೇ. ಮಧ್ಯಸ್ಥಗಾರರು ಇಂಥಾ ವರನಿಗೆ ಇಂಥಾ ವಧುವನ್ನು ವರಿಸುತ್ತೇವೆಂದು ತ್ರಿಪೌರುಷೇಯವಾಗಿ ವಿವರಿಸಿ ಕೇಳುತ್ತಾರೆ, ದಾತನು ಕೊಡುತ್ತೇನೆಂದು ಒಪ್ಪುತ್ತಾನೆ. ಆಗ ವಧೂವರರ ಪಿತೃ(ಪಿತೃಸ್ಥಾನೀಯ)ಗಳು ಪರಸ್ಪರ ಸತ್ಕರಿಸಿ ವರಣವನ್ನು ಒಪ್ಪುತ್ತಾರೆ. ಇದೇ ನಿಜವಾದ ವಾಗ್ದಾನ, ಹಿಂದೆ ನಡೆದುದೆಲ್ಲವೂ ಸಂಧಾನ. ಆಮೇಲೆ ವಧುವನ್ನು ಅವಳ ಸೋದರಮಾವನು ಕರೆತಂದು ತೆರೆಯ ಮರೆಯಲ್ಲಿ ವರನಿಗೆ ಅಭಿಮುಖವಾಗಿ ನಿಲ್ಲಿಸುತ್ತಾನೆ. ಇದು ಮಾತಾಮಹ ಕುಲದ ಅನುಮತಿ, ಮಾತೆಗೆ ಆಪ್ತಾನುಮೋದನೆ. ಜ್ಯೋತಿರ್ವೇತ್ತರಿಟ್ಟ ಶುಭಮುಹೂರ್ತದಲ್ಲಿ ಮಂಗಳಾಷ್ಟಕಾದಿಗಳನ್ನು ಹೇಳಿ ತೆರೆಯನ್ನು ತೆಗೆಯುತ್ತಾರೆ—ವಧೂವರರು ಜೀರಿಗೆ ಬೆಲ್ಲವನ್ನು ಒಬ್ಬರ ಮೇಲೊಬ್ಬರು ನಾನು ಮುಂದು ತಾನು ಮುಂದು ಎಂದು ಸ್ಪರ್ಧೆಯಿಂದ ಹಾಕಿ ನಿರೀಕ್ಷಿಸುತ್ತಾರೆ. ಇದನ್ನೇ ಲಗ್ನ ಮುಹೂರ್ತ ಎನ್ನುವುದು. ಇದರಲ್ಲಿ ಅನುಮೋದನ ಸಂಭ್ರಮೋತ್ಸಾಹಗಳ ಪ್ರದರ್ಶನವಾಗುತ್ತದೆ. ಆಮೇಲೆ ಸರ್ವರ ಅನುಮತಿಯನ್ನು ಪಡೆದು ಕನ್ಯಾದಾನವನ್ನು ಮಾಡುತ್ತಾರೆ. ಕನ್ಯಾಮಾತೆಯು ಧಾರೋದಕವನ್ನು ಹಾಕುತ್ತಾಳೆ. ಸಂಬಂಧಿಗಳೂ ಹಾಕುವ ಸಂಪ್ರದಾಯವು ಕೆಲವರಲ್ಲಿದೆ. ಇವೆಲ್ಲವೂ ಸರ್ವಸಂಮತಿಸೂಚಕಗಳು. ಆಮೇಲೆ ವಧೂವರರು ಪುಷ್ಪಮಾಲೆಗಳನ್ನು ಪರಸ್ಪರ ಹಾಕಿ ಅಕ್ಷತಾರೋಪಣವನ್ನು ಮಾಡುತ್ತಾರೆ, ಇವೂ ಸಂಭ್ರಮೋತ್ಸಾಹಸೂಚಕಗಳೇ. ಮಾಂಗಲ್ಯಧಾರಣ, ಅಲಂಕಾರದಾನ, ಬಹುಮಾನಪ್ರದಾನ, ಫಲಪೂಜೆ ಆರತಿ ಆಶೀರ್ವಾದ ಸಭಾಸತ್ಕಾರಗಳು ನಡೆದು ಕಲಾಪಗಳು ಮುಗಿಯುತ್ತವೆ. ಇವೆಲ್ಲವೂ ದಾತಪ್ರತಿಗೃಹೀತರು ಮಾಡುವ ಕಲಾಪಗಳೇ ಹೊರತು ವಿವಾಹ ಸಂಸ್ಕಾರವಲ್ಲ.

ವಿವಾಹ ಸಂಸ್ಕಾರವು ನಡೆಯುವುದೂ ವಧೂವರರು ಪತಿಪತ್ನಿಯರಾಗುವುದೂ ಆಮೇಲೆ. ಅದನ್ನು ಮಾಡಿಕೊಳ್ಳುವವರು ವಧೂವರರೇ. ಸಂಸ್ಕಾರವೆಂದರೇನು ? ಪ್ರಕೃತಿಸ್ವರೂಪದಲ್ಲಿರುವುದನ್ನು ಶುದ್ಧಿಮಾಡಿ ಹದಕೊಟ್ಟು ಹಸನು ಮಾಡುವುದು. ಕಬ್ಬಿಣವನ್ನು ಉಕ್ಕು ಮಾಡುವುದು ಶುದ್ಧೀಕರಣ, ಉಕ್ಕಿಗೆ ಹದವನ್ನು ಕೊಟ್ಟು ಹರಿತ ಮಾಡಿ ಆಯುಧ ಮಾಡುವುದು—ಕಬ್ಬಿಣದ ಸಂಸ್ಕಾರ. ಧಾತುವನ್ನು ಪುಟಕ್ಕೆ ಹಾಕಿ ದೋಷವನ್ನು ಹೋಗಲಾಡಿಸಿ ರೋಗವನ್ನು ನಿವಾರಿಸುವ ಗುಣವನ್ನು ಕೊಟ್ಟು ರಸ ಮಾಡುವುದು ಧಾತುಸಂಸ್ಕಾರ. ಅಶ್ವಾದಿಗಳ ನಿರರ್ಗಳ ಪ್ರವೃತ್ತಿಯನ್ನು ನಿರೋಧಿಸಿ ಉಚಿತದಲ್ಲಿ ಪ್ರವರ್ತಿಸುವಂತೆ ಮಾಡುವುದು ಅಶ್ವಾದಿಗಳ ಸಂಸ್ಕಾರ. ಗರ್ಭಾಶಯವನ್ನು ಪ್ರಶಸ್ತಮಾಡಿ ಜನಿಸಿದ ಶಿಶುವಿಗೆ ಜಾತಕರ್ಮಾದಿಗಳಿಂದ ಬೀಜ

ಗರ್ಭಸಂಭೂತವಾದ ದೋಷವನ್ನು ಪರಿಹರಿಸಿ ಉಪನಯನಾದಿಗಳಿಂದ ಗೃಹಸ್ಥ ಧರ್ಮ ನಿರ್ವಹಣೆಗೆ ಹದಮಾಡಿ ವಿವಾಹದಿಂದ ಧರ್ಮಜೀವನಕ್ಕೆ ತಕ್ಕ ಯೋಗ್ಯತೆಯನ್ನು ಕೊಡುವುದೇ ಸಂಸ್ಕಾರ. ಇದು ನಡೆಯುವುದು ವಿವಾಹ ಪ್ರಧಾನಹೋಮ ಮತ್ತು ಸಪ್ತಪದಿಯಲ್ಲಿ. ಪ್ರಾಚೀನರಲ್ಲಿ ಸ್ನಾತಕನು ದೇಶಾಟನೆಗೆ ಹೊರಟು ಅನುರೂಪ ವಧುವನ್ನು ಪ್ರತಿಗ್ರಹಮಾಡಿಕೊಂಡು ಹಿಂತಿರುಗಿ ಬಂದು ಗ್ರಾಮವೃದ್ಧಕುಲಸ್ಥರನ್ನು ಕರೆದು "ನೋಡಿ ಈ ವಧುವು ಸುಮಂಗಲಿ, ಇವಳಿಗೆ ಆಶೀರ್ವಾದವನ್ನು ಮಾಡಿ"[9] ಎಂದು ಹೇಳುವ ಮೂಲಕ ಅವರ ಅನುಮತಿಯನ್ನರಿತು, ತನ್ನ ಮನೆಯಲ್ಲಿ ಪ್ರಧಾನ ಸಂಸ್ಕಾರವನ್ನು ಮಾಡಿಕೊಳ್ಳುವ ರೂಢಿಯಿತ್ತು. ಔತ್ತರೀಯರಲ್ಲೀಗಲೂ ಇದೆ. ಕರೆದುಕೊಂಡು ಹೋದಮೇಲೆ ಸಂಸ್ಕಾರವಾಗದಿದ್ದರೆ ವಧುವಿನ ಶ್ರೇಯಸ್ಸಿಗೂ ವಧೂಕುಲದ ಕೀರ್ತಿಗೌರವಗಳಿಗೂ ಹಾನಿಯು ಸಂಭವಿಸಬಹುದೆಂದೂ ಸಂಸ್ಕಾರವು ಮುಗಿದ ಮೇಲೆ ಕಳುಹಿಸುವುದು ಯುಕ್ತವೆಂದೂ ಈಗ ಅದನ್ನೂ ವಧೂಗೃಹದಲ್ಲಿಯೇ ಮಾಡುವ ಸಂಪ್ರದಾಯವಾಗಿದೆ. ಅದರಲ್ಲಿ ನಡೆಯುವ ಪ್ರಮುಖ ಕಾರ್ಯಗಳು ಗಮನಾರ್ಹಗಳು ವಿವಾಹಾಗ್ನಿಯನ್ನು ಸ್ಥಾಪಿಸಿ ಅದರ ಪಶ್ಚಿಮದಲ್ಲಿ ಗಟ್ಟಿಯಾದ ಶಿಲೆಯನ್ನಿರಿಸಿ ಮೂರು ಪ್ರಧಾನಾಜ್ಯಾಹುತಿಗಳನ್ನು ಕೊಡುವವರೆಗೂ ಹೋಮ ಮಾಡಿ ಆಗ ಪಾಣಿಗ್ರಹಣವು ನಡೆಯುತ್ತದೆ. ಆಗ ಹೇಳುವ ಮಂತ್ರದ ಅರ್ಥವಿದು—"ಎಲೌ ವಧುವೇ ಭಗ ಅರ್ಯಮ ಸವಿತೃ ಪುರನ್ಧಿ (ಪೂಷಾ) ಎಂಬ ನಾಲ್ವರು ದೇವರು ನಿನ್ನನ್ನು ನನಗೆ ಗೃಹಸ್ಥಾಶ್ರಮಿಯಾಗೆಂದು ಕೊಟ್ಟಿದ್ದಾರೆ; ಸೌಭಾಗ್ಯಾವಾಪ್ತಿಗೂ ವೃದ್ಧಾಪ್ಯದಲ್ಲೂ ಜತೆಯಲ್ಲಿರಬೇಕೆಂದೂ ನಾನು ನಿನ್ನ ಪಾಣಿಗ್ರಹಣವನ್ನು ಮಾಡುತ್ತೇನೆ" ಎಂದು.[10] ವಿವಾಹಕ್ಕೆ ಪಾಣಿಗ್ರಹಣವೆಂದು ಹೆಸರಾಗಿರುವುದು ಇದರಿಂದಲೇ. ಅನಂತರ ವರನು ವಧುವಿನ ಕೈಯಿಂದ ಮೂರು ಲಾಜಾ ಹೋಮವನ್ನು ಮಾಡಿಸುತ್ತಾನೆ. ವಧುವಿನ ಸಹೋದರನು ಆ ಅರಳನ್ನು ಅವಳ ಕೈಯಲ್ಲಿಡುವವನು. ಅದೇ ಅವಳಿಗೆ ಸಹಕಾರ. ಆಗ ಹೇಳುವ ಮಂತ್ರದ ಅರ್ಥವಿದು. "ಎಲೈ ಅರ್ಯಮಸಂಜ್ಞಕನೂ ದ್ಯೋತನಾತ್ಮಕನೂ ಆದ ಅಗ್ನಿಯೇ, ಈ ಕನ್ನಿಕೆಯು (ಜೀವನದ ಈ ಮಹಾಕ್ರಾಂತಿಯ ಸಮಯದಲ್ಲಿ ಸರಿಯಾದ ತಿಳಿವಳಿಕೆಯಾಗುವಂಥಾ ಬೆಳಕನ್ನು ಕೊಡಬೇಕೆಂದು) ನಿನ್ನ ಶರಣು ಹೊಕ್ಕಿದ್ದಾಳೆ. ನೀನು ಈಕೆಯನ್ನು ಪಿತೃಕುಲದಿಂದ ಬಿಡಿಸು, ಭರ್ತೃಕುಲದಿಂದ ಬಿಡಿಸಬೇಡ" ಎಂದೊಂದು ಲಾಜಾಹುತಿಯನ್ನೂ, "ಎಲೈ (ಸಂಬಂಧರೂಪದ ಪಾಶದಿಂದ ಸಂತಾನ

---

9. ಸುಮಂಗಲೀರಿಯಂ ವಧೂರಿಮಾಂ ಸಮೇತ ಪಶ್ಯತ । ಸೌಭಾಗ್ಯಮಸ್ಯೈ ದತ್ವಾ ಯಾಥಾಸ್ತಂ ವಿಪರೇತನ ॥(ಋ.ವೇ—ಅ. ೮, ಅ. ೩, ವ. ೨೬॥

10 ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾಸಃ । ಭಗೋ ಅರ್ಯಮಾ ಸವಿತಾ ಪುರನ್ಧಿರ್ಮಹ್ಯಂ ತ್ವಾದು ರ್ಗಾರ್ಹಪತ್ಯಾಯ ದೇವಾಃ ॥(ಋ-ವೇ.—ಅ. ೮, ಅ. ೩, ವ, ೨೭॥

ವನ್ನು ಜನಕಕುಲಕ್ಕೆ ಕಟ್ಟುವ) ವರುಣಸಂಜ್ಞಕನೂ ದ್ಯೋತನಾತ್ಮಕನೂ ಆದ ಅಗ್ನಿಯೇ ಈ ಕನ್ನಿಕೆಯು (ಅದೇ ಸಮಯದಲ್ಲಿ ಅಂಥಾ ಬೆಳಕಿಗಾಗಿಯೇ) ನಿನ್ನ ಶರಣು ಹೊಕ್ಕಿದ್ದಾಳೆ. ನೀನೂ ಈಕೆಯನ್ನು ಪಿತೃಕುಲದಿಂದ ಬಿಡಿಸು, ಭರ್ತೃಕುಲ ದಿಂದ ಬಿಡಿಸಬೇಡ," ಎಂದೆರಡನೆಯ ಆಹುತಿಯನ್ನೂ, "ಎಳೈ (ಕೈಹಿಡಿದು ಮನೆಗೆ ಕರೆತರುವ) ಪೂಷಸಂಜ್ಞಕನೂ ದ್ಯೋತನಾತ್ಮಕನೂ ಆದ ಅಗ್ನಿಯೇ (ಅದೇ ಸಮಯ ದಲ್ಲಿ ಅಂಥಾ ಬೆಳಕಿಗಾಗಿಯೇ) ನಿನ್ನ ಶರಣು ಬೇಡುತ್ತಾಳೆ, ಇವಳನ್ನು ಪಿತೃಕುಲ ದಿಂದ ವಿಮೋಚನೆ ಮಾಡು, ಭರ್ತೃಕುಲದಿಂದ ಮಾಡಬೇಡ" ಎಂದು ಮೂರನೆಯ ದನ್ನೂ,[11] ಹೋಮಮಾಡಿಸುತ್ತಾನೆ. ಪ್ರತಿಯೊಂದಾಹುತಿಗೂ ಒಂದೊಂದಾವೃತ್ತಿ ವಧುವಿನೊಡನೆ ಅಗ್ನಿಯನ್ನು ಪ್ರದಕ್ಷಿಣೆ ಮಾಡಿ ಅವಳನ್ನು ಶಿಲೆಯ ಮೇಲೆ ನಿಲ್ಲಿಸಿ ಹೀಗೆ ಹೇಳುತ್ತಾನೆ—"ನಮ್ಮಿಬ್ಬರಿಗೂ ಅಜ್ಞಾನವು ಆವರಿಸಿಲ್ಲ, ಅಂತರಿಕ್ಷದಂತೆ ನಾನೂ-ಪೃಥ್ವಿಯಂತೆ ನೀನೂ, ಸಾಮವೇದದಂತೆ ನಾನೂ-ಋಗ್ವೇದದಂತೆ ನೀನೂ, ಇದ್ದೇವೆ. ಈಗ ನಮಗೆ ವಿವಾಹವಾಗುತ್ತಿದೆ(ಒಂದಾಗಬೇಕು), ಮುಂದೆ ಸಂತಾನ ವನ್ನು ಪಡೆದು ಒಬ್ಬರನ್ನೊಬ್ಬರು ಪ್ರೀತಿಸುತ್ತಾ, ಒಬ್ಬರಿಗೊಬ್ಬರು ಇಷ್ಟರಾಗಿಯೂ ಅನ್ಯೋನ್ಯವಾಗಿಯೂ ನೂರು ವರ್ಷ ಬಾಳೋಣ",[12] "ಈ ಶಿಲೆಯಮೇಲೆ ನಿಲ್ಲು, ಶಿಲೆಯಂತೆ ಮನಸ್ಸನ್ನು ಸ್ಥಿರ (ಗಟ್ಟಿ) ಮಾಡಿಕೋ, ಯಾವ ವಿರೋಧವು ಪ್ರಾಪ್ತ ವಾದರೂ ಸಹಿಸಿಕೊಂಡು, (ಸದ್ಗುಣದಿಂದ) ವಿರೋಧಿಗಳನ್ನೇ ವಶಪಡಿಸಿಕೋ"[13] ಎಂದು. ಇಷ್ಟೂ ಅವಳ ಭ್ರಾತೃಸಂಮುಖದಲ್ಲಿ ನಡೆಯುವುದು—ಇದಾದಮೇಲೆ ಅವನೂ ಹತ್ತಿರ ಇರುವುದಿಲ್ಲ. ಅನಂತರ ವರನು ವಧುವಿನ ಶಿಖೆಯನ್ನು ಬಿಚ್ಚಿ

---

11 ಅರ್ಯಮಣಂ ನು ದೇವಂ ಕನ್ಯಾ ಅಗ್ನಿಮಯಕ್ಷತ। ಸ ಇಮಾಂ ದೇವೋ ಅರ್ಯಮಾ ಪ್ರೇತೋ ಮುಂಚಾತು ನಾಮುತಸ್ಸ್ವಾಹಾ ॥ ವರುಣಂ ನು ದೇವಂ ಕನ್ಯಾ ಅಗ್ನಿಮಯಕ್ಷತ । ಸ ಇಮಾಂ ದೇವೋ ವರುಣಃ ಪ್ರೇತೋ ಮುಂಚಾತು ನಾಮುತಸ್ಸ್ವಾಹಾ ॥ ಪೂಷಣಂ ನು ದೇವಂ ಕನ್ಯಾ ಅಗ್ನಿಮಯಕ್ಷತ । ಸ ಇಮಾಂ ದೇವಃ ಪೂಷಾ ಪ್ರೇತೋ ಮುಂಚಾತು ನಾಮುತಸ್ಸ್ವಾಹಾ ॥

12 ಅಮೋಹಮಸ್ಮಿ ಸಾ ತ್ವಂ ಸಾ ತ್ವಮಸ್ಯಮೋಹಂ । ದ್ಯೌರಹಂ-ಪೃಥಿವೀತ್ವಂ, ಸಾಮೋಹಂ-ಋಕ್ತ್ವಂ, ತಾವೇವ ವಿವಹಾವಹೈ । ಪ್ರಜಾಂ ಜನಯಾವಹೈ । ಸಂಪ್ರಿಯೌ ರೋಚಿಷ್ಣೂ ಸುಮನಸ್ಯಮಾನೌ ಜೀವೇಮ ಶರದಶ್ಶತಂ ॥ ಸಾತ್ವಂ ಸಾತ್ವಂ ಎಂಬ ದ್ವಿರುಕ್ತಿಯು ಒತ್ತಿ ಒತ್ತಿ ಹೇಳುವ ಮಾತು. ಅಂತರಿಕ್ಷಭೂಮಿಗಳ ಉಪಮಾನವು ಸುಖರೂಪದವರಾಗಿ ನಿಕಟದಲ್ಲಿದ್ದರೂ ಪೃಥಕ್ಕಾಗಿದ್ದೇವೆಂದು ಸೂಚಿಸುವುದಕ್ಕೆ, ಋಕ್ಸಾಮಗಳ ಉಪಮಾನವು ಶ್ರುತಿಯಂತೆ ಇಬ್ಬರೂ ಪಾವನಸ್ವರೂಪರಾಗಿ ಒಂದೇ ಅರ್ಥದ ಪದಬಂಧವಾದರೂ ಬೇರೆ ಬೇರೆ ಸ್ವರೋಚ್ಚಾರಣ ಕ್ರಮದಂತೆ ಪೃಥಕ್ಕಾಗಿ ಕಾಣುತ್ತಾ ಒಂದೇ ಪುರುಷಾರ್ಥವನ್ನು ಸಾಧಿಸುವವರಾಗಿದ್ದೇವೆಂದು ಸೂಚಿಸುವುದಕ್ಕೆ.

13 ಇಮಮಶ್ಮಾನಮಾರೋಹಾಶ್ಮೇವ ತ್ವಂ ಸ್ಥಿರಾ ಭವ । ಸಹಸ್ವ ಪೃತನಾಯತೋಽಭಿತಿಷ್ಠ ಪೃತನ್ಯತ ಇತಿ ॥

ತ್ತಾನೆ, ಅಂದರೆ ಕೆದರುವುದಲ್ಲ—ಅದಕ್ಕೆ ಕಟ್ಟಿದ ದಾರವನ್ನು ಶಿಥಿಲಮಾಡುವುದು. ಆಗ ಹೇಳುವ ಮಂತ್ರದ ಅರ್ಥವಿದು—"ಎಲೌ ವಧುವೇ (ವಿಶ್ವದ ಸೃಷ್ಟಿ ಸ್ಥಿತಿ ಲಯ ಗಳಿಗೆ ಕಾರಣನಾದ ಸವಿತೃದೇವನಿಂದ ಪ್ರೇರಿತನಾಗಿ) ಸುಖಪ್ರದನಾದ ವರುಣ ದೇವನು ನಿನ್ನನ್ನೂ ನಿನ್ನ ಜನನೀಜನಕಾದಿಗಳನ್ನೂ ಕಟ್ಟಿರುವ ವ್ಯಾಮೋಹರೂಪದ ಪಾಶದಿಂದ ನಾನು ನಿನ್ನನ್ನು ಬಿಡಿಸುತ್ತೇನೆ—ಬಿಡಿಸಿ ಸತ್ಯಕ್ಕೆ ಸ್ಥಾನವೂ ಸುಕೃತಕ್ಕೆ ಕ್ಷೇತ್ರವೂ ಆದ ಗಾರ್ಹಸ್ಥ್ಯದಲ್ಲಿ ನಿನ್ನನ್ನು ಪತಿಯಾದ ನನ್ನೊಡನೆ ನಿನಗೆ ಹಿಂಸೆ ಯಾಗದ ಹಾಗೆ ಸ್ಥಾಪಿಸುತ್ತೇನೆ, ನಿನ್ನನ್ನು ಪಿತೃಕುಲದಿಂದ ಬಿಡಿಸುತ್ತೇನೆ, ಈ ಭರ್ತೃಕುಲದಿಂದ ಬೇರೆ ಮಾಡುವುದಿಲ್ಲ—ಇಲ್ಲಿ ಸ್ಥಿರವಾಗಿರುವಂತೆ ಮಾಡುತ್ತೇನೆ. ಎಲೈ ವೃಷ್ಟಿದಾಯಕನಾದ ಇಂದ್ರನೇ ಇವಳಿಗೆ (ಇಲ್ಲಿ ಶಾಶ್ವತವಾದ ಆತ್ಮೀಯತೆಯ ಪ್ರಾಪ್ತಿಗಾಗಿ) ಸುಪುತ್ರರನ್ನೂ ಸೌಭಾಗ್ಯವನ್ನೂ ಅನುಗ್ರಹ ಮಾಡು"[14] ಎಂದು. ಲಾಜಾಹೋಮವನ್ನು ಮಾಡುವುದಕ್ಕೂ ಬಿಡುವುದಕ್ಕೂ ಶಿಖಾವಿಮೋಚನೆಗೆ ಒಪ್ಪುವುದಕ್ಕೂ ಒಪ್ಪದಿರುವುದಕ್ಕೂ ಕನ್ನಿಕೆಗೆ ಸ್ವಾತಂತ್ರ್ಯವಿದೆ. ಕನ್ಯಾ ಸ್ವಾತಂತ್ರ್ಯವು ಪರಾಕಾಷ್ಠವನ್ನು ಮುಟ್ಟುವುದು ಸಪ್ತಪದಿಯಲ್ಲಿ. ಅದರಲ್ಲಿಯೂ ಸಪ್ತಮಪದವಿನ್ಯಾಸದಲ್ಲಿ. ಆಗ ಹೇಳುವ ಮಂತ್ರದ ಅರ್ಥವಿದು :—"ನಮಗೆ ಅನ್ನಾದ್ಯವಶ್ಯಕತೆಗಳನ್ನೊದಗಿಸಲು ಒಂದು ಹೆಜ್ಜೆಯಿಡು, ನಮಗೆ ಬಲಪ್ರಾಪ್ತಿಗಾಗಿ ಎರಡನೆಯ ಹೆಜ್ಜೆಯಿಡು, ನಮ್ಮ ಧನವನ್ನು ಪೋಷಿಸಲು ಮೂರನೆಯದನ್ನಿಡು, ನಮಗೆ ಸುಖವನ್ನು ಮಾಡುವುದಕ್ಕೆ ನಾಲ್ಕನೆಯದನ್ನಿಡು, ಸಂತಾನಪ್ರಾಪ್ತಿಗಾಗಿ ಐದನೆಯದನ್ನಿಡು, ನನ್ನೊಡನೆ ವಸಂತಾದಿ ಋತುಗಳ, ಅಥವಾ ಋತುಪ್ರಯುಕ್ತ ವಾದ, ಭೋಗಗಳನ್ನು ಅನುಭವಿಸಲು ಆರನೆಯದನ್ನಿಡು, ನನಗೆ (ಸರಿಸಮಾನ ಸ್ಕಂಧಳಾದ) ಸಖಿಯಾಗಿರಲು ಏಳನೆಯದನ್ನಿಡು" ಎಂದು ಹೇಳುತ್ತಾ ಪ್ರತಿ ಯೊಂದು ಹೆಜ್ಜೆಯನ್ನು ಕೋರುವಾಗಲೂ "ನನ್ನ ವ್ರತಗಳಲ್ಲಿ ಸಹಕರಿಸು, ನಮ್ಮಿಬ್ಬ ರಿಗೂ ಪುತ್ರರು ಜನಿಸುತ್ತಾರೆ, ಜನಿಸಿ ಜರಾಯುಕ್ತರಾಗಿ ಎಂಭತ್ತು ವರ್ಷಗಳ ಮೇಲ್ಪಟ್ಟು ಜೀವಿಸಲಿ." ಎಂದು ಆವೃತ್ತಿ ಮಾಡುತ್ತಾನೆ.[15] ಏಳನೆಯದನ್ನಿಟ್ಟ

14 ಪ್ರ ತ್ವಾ ಮುಂಚಾಮಿ ವರುಣಸ್ಯ ಪಾಶಾದ್ಯೇನ ತ್ವಾ ಬಧ್ನಾತ್ಸವಿತಾ ಸುಶೇವಃ । ಋತಸ್ಯಯೋನೌ ಸುಕೃತಸ್ಯ ಲೋಕೇऽರಿಷ್ಟಾಂ ತ್ವಾ ಸಹ ಪತ್ಯಾ ದಧಾಮಿ ॥ ಪ್ರೇತೋ ಮುಂಚಾಮಿ ನಾಮುತಸ್ಸುಬದ್ಧಾಮಮುತಸ್ಕರಂ। ಯಥೇಯಮಿಂದ್ರ ಮೀಢ್ವಸ್ಸುಪುತ್ರಾಂ ಸುಭಗಾಂ ಕೃಣು ॥(ಋ.ವೇ.—ಅ. ೮, ಅ. ೩, ವ. ೨೪)

15 ಇಷ ಏಕಪದೀ ಭವ ।
ಊರ್ಜೇ ದ್ವಿಪದೀ ಭವ ।
ರಾಯಸ್ಪೋಷಾಯ ತ್ರಿಪದೀ ಭವ ।
ಮಾಯೋಭವ್ಯಾಯ ಚತುಷ್ಪದೀ ಭವ ।
ಪ್ರಜಾಭ್ಯಃ ಪಂಚಪದೀ ಭವ ।
ಋತುಭ್ಯಷ್ಷಟ್ಪದೀ ಭವ ।
ಸಖಾ ಸಪ್ತಪದೀ ಭವ ।

ಸಾ ಮಾಮನುವ್ರತಾ ಭವ ।
ಪುತ್ರಾನ್ ವಿಂದಾವಹೈ । ಬಹೂಂ
ಸ್ತೇ ಸಂತು ಜರದಷ್ಟಯಃ ।
(ಇತಿಪ್ರತ್ಯೇಕಂಯೋಜ್ಯಂ)

ಕೂಡಲೇ ವಧುವು ಭರ್ತೃಗೋತ್ರಕ್ಕೆ ಸೇರಿಹೋಗುಳವು. ಅಲ್ಲಿಯವರೆಗೂ ಅವಳು ಪಿತೃಗೋತ್ರದವಳೇ, ಪಿತೃಕುಲದ ಕನ್ನಿಕೆಯೇ. ಗೋತ್ರಪರಿವರ್ತನೆಯೊಡನೆಯೇ ವಿವಾಹವು ಪೂರ್ತಿಯಾಗುವುದು, ವರನು ಪತಿಯಾಗುವುದು, ವಧುವು ಪತ್ನಿಯಾಗುವುದು.[16] ಏಳನೆಯ ಹೆಜ್ಜೆಯನ್ನಿಡದಿದ್ದರೆ ವಿವಾಹವೇ ಸಿದ್ಧಿಯಾಗುವುದಿಲ್ಲ. ಅಲ್ಲಿಯವರೆಗೂ ಮಾಡಿದುದೆಲ್ಲವೂ ಮುರಿದುಬಿದ್ದಹಾಗೆಯೇ. ಈ ಮಹಾಕ್ರಾಂತಿಯನ್ನರಿತೇ ಸಪ್ತಪದಿಯ ಕಾಲದಲ್ಲಿ ವರನಿಗೆ ವಧುವಿನ ಕಾಲನ್ನು ಕಟ್ಟಿಕೋ ಎಂದು ಜನರು ಹೇಳುವುದು, ವಿನೋದಕ್ಕಲ್ಲ. ಇಂಥಾ ಮಹತ್ವವಿಶಿಷ್ಟವಾದ ಹೆಜ್ಜೆಯಿದು, ಇದರಿಂದ ನಿನ್ನ ಇಷ್ಟಾರ್ಥವು ಫಲಿಸುವುದು, ನಿನ್ನ ಮನೆಯು ಬೆಳಗುವುದು, ನಿನ್ನ ಜೀವನವು ಸಾರ್ಥಕವಾಗುವುದು, ಎಂಬರ್ಥದ ಮಾತು. ಇಷ್ಟೆಲ್ಲವೂ ನಡೆಯುವ ಸಂಸ್ಕಾರವಾದುದರಿಂದಲೇ ಸಹಧರ್ಮಚಾರಿಣೀ ಸಂಬಂಧಪ್ರಾಪ್ತಿಗಾಗೀಕರ್ಮವನ್ನಾಚರಿಸುತ್ತೇನೆಂದು ಸಂಕಲ್ಪಮಾಡುವುದು.[17] ಇದರಲ್ಲೇನೂ ನಿರ್ಬಂಧವಿಲ್ಲ, ಮುಚ್ಚುಮರೆಯಿಲ್ಲ, ಪರಿಣಾಮವನ್ನು ಹೇಳಿ ಹೇಳಿ ಮನದಟ್ಟು ಮಾಡಿಸಿ ಕೋರುವ ಪ್ರಸಂಗವು. ವಧುವೂ ಮನಃಪೂರ್ವಕವಾಗಿ ಮಾಡುವ ಕಾರ್ಯವು. ವಧುವಿಗೆ ಮಾಡುವುದಕ್ಕೂ ಬಿಡುವುದಕ್ಕೂ ಪೂರ್ಣಸ್ವಾತಂತ್ರ್ಯವಿದೆ. ಪ್ರಕೃತ ಬಿದ್ದರೆ ಸದುಪಯೋಗಪಡಿಸಿಕೊಳ್ಳಬಹುದು, ದುರುಪಯೋಗಪಡಿಸಬಾರದು. ಮಂತ್ರವೂ ಮಂತ್ರಾರ್ಥವೂ ಸ್ವಾತಂತ್ರ್ಯವೂ ವಿದಿತವಿರದೇ ಇರಬಹುದು. ಮೌಢ್ಯವು ನಮ್ಮ ತಪ್ಪು—ಮೌಢ್ಯವೆಂದು ನಿಯಮದಿಂದ ನಿಷ್ಕೃತಿಯಿಲ್ಲ. ಋಷಿಗಳು ನಮ್ಮ ಶ್ರೇಯಸ್ಸಿಗಾಗಿ ಮಾಡಿಟ್ಟಿರುವುದನ್ನು ಅರಿತು ವರ್ತಿಸಬೇಕು. ಯಾರೋ ಅಂದುದನ್ನು ಶುಕಶಾರಿಕೆಗಳಂತೆ ಆಡಬಾರದು.

ವಿವಾಹಹೋಮಾನಂತರ ಪ್ರವೇಶಹೋಮವು ನಡೆಯುತ್ತದೆ. ಇದು ವಧುವನ್ನು ಮನೆಗೆ ಕರೆತಂದು ವರನು ತನ್ನ ಮನೆಯಲ್ಲಿ ಮಾಡಬೇಕಾದ ಕರ್ಮವು. ಇದನ್ನೂ ವಧೂಗೃಹದಲ್ಲಿಯೇ ಮಾಡುವ ರೂಢಿಯಾಗಿದೆ. ಆಗ ಹೇಳುವ ಮಂತ್ರಗಳು ಜೀವನದ ಉಚ್ಚಧ್ಯೇಯವನ್ನು ಸೂಚಿಸುತ್ತವೆ. ವಧುವನ್ನು ಕರೆದುಕೊಂಡು ಹೋಗುವಾಗ "ಪೂಷನೆಂಬ ದೇವನು ನಿನ್ನನ್ನು ಕೈಹಿಡಿದು ಕರೆತರಲಿ, ಅಶ್ವಿನೀ ದೇವತೆಗಳು ರಥದ ಮೇಲೆ ಕೂರಿಸಿಕೊಂಡು ಕರೆತರಲಿ. (ಅಂದರೆ ಪೂಷನು ರಥದಲ್ಲಿ ಕೂರಿಸುವಾಗಲೂ, ಇಳಿಸಿ ಮನೆಗೆ ಪ್ರವೇಶ ಮಾಡಿಸುವಾಗಲೂ ಕೈ ಹಿಡಿದು

---

16 ನೋದಕೇನ ನ ವಾಚಾ ವಾ ಕನ್ಯಾಯಾಃ ಪತಿರುಚ್ಯತೇ । ಪಾಣಿಗ್ರಹಣಸಂಸ್ಕಾರಾತ್ಪತಿತ್ವಂ ಸಪ್ತಮೇ ಪದೇ ॥ಯಮಃ॥ ಅದ್ಭಿರ್ವಾಚಾ ಚ ಯಾ ದತ್ತಾ ಮ್ರಿಯೇತಾದೌ ವರೋ ಯದಿ। ನ ತು ಮಂತ್ರೋಪನೀತಾಸ್ಯಾತ್ಕುಮಾರೀ ಪಿತುರೇವ ಸಾ ॥ವಸಿಷ್ಠಃ॥ ಅನೇನ ಸಪ್ತಮಪದಾದರ್ವಾಕ್ಪರಿಣೇತುರ್ಮರಣೇಪಿ ನವಿಧವಾತ್ವಮಿತ್ಯುಕ್ತಂ ಭವತಿ। ಪಿತುರೇವ ನ ಪ್ರತಿಗ್ರಹೀತುರಿತ್ಯರ್ಥಃ ॥ಸ್ಮೃತಿಚಂದ್ರಿಕಾ॥

17 ಮಮ ಸಹಧರ್ಮಿಣೀಸಂಬಂಧಸಂಪಾದನೀಯೌಪಾಸನಾಗ್ನಿಪರಿಗ್ರಹಣದ್ವಾರಾ ಶ್ರೀ ಪರಮೇಶ್ವರಪ್ರೀತ್ಯರ್ಥಮಿತಿ ವಿವಾಹಪ್ರಧಾನಹೋಮೇಸಂಕಲ್ಪಃ ॥

ಕರೆತರಲಿ ಎಂದರ್ಥ.) ವೈಭವದಿಂದ ಬಂದು ಪತಿಗೃಹವನ್ನು ಸೇರಿ ಅಲ್ಲಿ ಗೃಹಸ್ವಾಮಿನಿಯಾಗಿ ಕುಟುಂಬದ ಜನರನ್ನೂ ಭೃತ್ಯರನ್ನೂ (ಸದ್ವರ್ತನದಿಂದ) ನಿನ್ನ ವಶದಲ್ಲಿಟ್ಟುಕೊಂಡು ಸುಖವಾಗಿ ಬಾಳು"[18] ಎಂದು ಹೇಳುವುದು. ಗೃಹವನ್ನು ಪ್ರವೇಶಿಸಿದಾಗ "ಎಲೌ ವಧುವೇ ನಿನಗೆ ಈ ಮನೆಯಲ್ಲಿ ಸಂತಾನಾದಿ ಇಷ್ಟಾರ್ಥಗಳು ಸಮೃದ್ಧಿಯಾಗಿ ಲಭಿಸಲಿ, ನೀನೀಗೃಹಕ್ಕೆ ಸ್ವಾಮಿನಿ, ಪತಿಯೊಡನೆ ನಿನ್ನ ದೇಹವನ್ನು ಸೇರಿಸು, ದಂಪತಿಗಳಿಬ್ಬರೂ ಹೊಂದಿಕೊಂಡು ಸುಖವಾಗಿರಿ"[19] ಎಂದು ಹೇಳುವುದು. ಪ್ರವೇಶ ಹೋಮದಲ್ಲಿ ನಾಲ್ಕು ಪ್ರಧಾನಾಹುತಿಗಳನ್ನು ಹವನಮಾಡಬೇಕು. ಆಗ ಹೇಳುವ ನಾಲ್ಕು ಮಂತ್ರಗಳ ಅರ್ಥವಿದು—"ವಿಧಾತನು ನಮಗೆ ಸಂತಾನವನ್ನು ಅನುಗ್ರಹಿಸಲಿ. ಅರ್ಯಮನು ವೃದ್ಧಾಪ್ಯದಲ್ಲೂ ನಮ್ಮನ್ನು ಜತೆಯಲ್ಲಿರಿಸಲಿ. ಸುಮಂಗಲಿಯಾಗಿ ಪತಿಕುಲವನ್ನು ಸೇರು. ನಮಗೂ ನಮ್ಮ ಪಶುಗಳಿಗೂ ಸುಖದಾಯಕಳಾಗು. ಸೌಮ್ಯದೃಷ್ಟಿಯವಳಾಗಿ, ಪತಿಯಾದ ನನಗೆ ವಧೆಗೆ ಸಮಾನವಾದ ಯಾವ ಅಪಮಾನಾದಿ ಅಹಿತವನ್ನೂ ಮಾಡದೆ, ಮೂಗುಜಂತುಗಳಿಗೆ ಒಳ್ಳೆಯದನ್ನು ಮಾಡುತ್ತಾ, ಒಳ್ಳೆಯ ಮನಸ್ಸೂ ವರ್ಚಸ್ಸೂ ಉಳ್ಳವಳಾಗಿ, ಪುತ್ರರನ್ನು ಪಡೆದು, ದೇವಕಾರ್ಯದಲ್ಲಿ ಆಸಕ್ತಿಯಿಟ್ಟು, ಸುಖವಾಗಿ ಬಾಳು. ಎಲೈ ಸದ್ವೃಷ್ಟಿಯನ್ನು ಕೊಡುವ ಇಂದ್ರನೇ ಇವಳಿಗೆ ಸತ್ಸಂತಾನವನ್ನೂ ಸೌಭಾಗ್ಯವನ್ನೂ ಅನುಗ್ರಹಿಸು. ಇವಳಿಗೆ ಹತ್ತು ಜನ ಪುತ್ರರನ್ನು ಕೊಡು. (ಹತ್ತು ಎಂದರೆ ತುಂಬ ಎಂಬ ಆದರದ ಮಾತು, ಹತ್ತೆಂಬುದು ಪರಮಾವಧಿಯು.) ಹನ್ನೊಂದನೆಯದಾಗುವುದಾದರೆ ನಾನೇ ಇವಳಲ್ಲಿ ಜನಿಸಿದಂತೆ ಮಾಡು(ಅಂದರೆ ಇವಳು ನನಗೆ ತಾಯಿಯಾದಂತೆ). ಎಲೌ ವಧುವೆ ಅತ್ತೆಮಾವರನ್ನೂ ಅತ್ತಿಗೆನಾದಿನಿಯರನ್ನೂ ಭಾವಮೈದುನರನ್ನೂ ಸಂರಕ್ಷಿಸಿ ಸಂತೋಷಪಡಿಸಿ ಅವರು ನಿನ್ನನ್ನು ಸಂರಾಜ್ಞಿಯೆಂದು ಭಾವಿಸುವಂತೆ ಬಾಳು"[20]

---

18 ಪೂಷಾ ತ್ವೇತೋ ನಯತು ಹಸ್ತಗೃಹ್ಯಾಶ್ವಿನಾ ತ್ವಾ ಪ್ರವಹತಾಂ ರಥೇನ। ಗೃಹಾನ್ ಗಚ್ಛ ಗೃಹಪತ್ನೀ ಯಥಾಸೋ ವಶಿನೀ ತ್ವಂ ವಿದಥಮಾವದಾಸಿ॥ (ಋ.ವೇ.—ಅ. ೮, ಅ. ೩, ವ. ೨೫)

19 ಇಹ ಪ್ರಿಯಂ ಪ್ರಜಯಾ ತೇ ಸಮೃದ್ಧ್ಯತಾಮಸ್ಮಿನ್ ಗೃಹೇ ಗಾರ್ಹಪತ್ಯಾಯ ಜಾಗೃಹಿ। ಏನಾ ಪತ್ಯಾ ತನ್ವಂ ಸಂಸೃಜಸ್ವಾಥಾ ಜಿವ್ರೀ ವಿದಥಮಾವದಾಥಃ ॥(ಋ.ವೇ.— ಅ. ೮, ಅ. ೩, ವ. ೨೫)

20 ಆ ನಃ ಪ್ರಜಾಂ ಜನಯತು ಪ್ರಜಾಪತಿರಾಜರಸಾಯ ಸಮನಕ್ತ್ವರ್ಯಮಾ। ಅದುರ್ಮಂಗಲೀಃ ಪತಿಲೋಕಮಾವಿಶ ಶಂ ನೋಭವ ದ್ವಿಪದೇ ಶಂ ಚತುಷ್ಪದೇ॥ ಅಘೋರಚಕ್ಷುರಪತಿಘ್ನ್ಯೇಧಿ ಶಿವಾ ಪಶುಭ್ಯಸ್ಸುಮನಾಸ್ಸುವರ್ಚಾಃ। ವೀರಸೂರ್ದೇವಕಾಮಾ ಸ್ಯೋನಾ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ॥ ಇಮಾಂ ತ್ವಮಿಂದ್ರಮೀಢ್ವಸ್ಸುಪುತ್ರಾಂ ಸುಭಗಾಂ ಕೃಣು। ದಶಾಸ್ಯಾಂ ಪುತ್ರಾನಾಧೇಹಿ ಪತಿಮೇಕಾದಶಂ ಕೃಧಿ॥ ಸಂರಾಜ್ಞೀ ಶ್ವಶುರೇ ಭವ ಸಂರಾಜ್ಞೀ ಶ್ವಶ್ರ್ವಾಂ ಭವ। ನನಾಂದರಿ ಸಂರಾಜ್ಞೀ ಭವ ಸಂರಾಜ್ಞೀ ಅಧಿದೇವೃಷು ॥(ಋ.ವೇ—ಅ. ೮, ಅ. ೩, ವ. ೨೮)

ಎಂದು. ಹುತಶೇಷವಾದ ತುಪ್ಪವನ್ನು ತನ್ನ ಮತ್ತು ಪತ್ನಿಯ ಎದೆಗಳಿಗೆ ಸೌರಿಕೊಂಡು ಹೀಗೆ ಪ್ರಾರ್ಥಿಸಬೇಕು—"ದೇವತೆಗಳೆಲ್ಲರೂ ನಮ್ಮ ಹೃದಯಗಳಲ್ಲಿ ಪರಸ್ಪರ ಸ್ನೇಹವನ್ನು ತುಂಬಲಿ, ಜಲವೂ ವಾಯುವೂ ವಿಧಾತನೂ ಸರಸ್ವತಿಯೂ ನಮ್ಮ ಹೃದಯಗಳನ್ನು ಒಂದಾಗಿ ಮಾಡಿ ಕಾಪಾಡಲಿ"[21] ಎಂದು. ಎಲ್ಲಾ ದೇವರನ್ನೂ ಒಟ್ಟಿಗೆ ಪ್ರಾರ್ಥಿಸಿ ಜಲವಾಯುವಿಧಾತಸರಸ್ವತಿಯರನ್ನು ಪುನಃ ಪ್ರಾರ್ಥಿಸುವುದರಲ್ಲಿ ವಿಶೇಷವಿದೆ—ಜಲವು ಹೇಗೆ ಬೆರೆದು ಐಕ್ಯವಾಗುವುದೋ ಹಾಗೆ ಜಲದ ದೇವರು ಹೃದಯಗಳನ್ನು ಸೇರಿಸಲಿ, ಐಕ್ಯವಾದ ಜಲದಮೇಲೆ ಬೀಸಿ ಅಲೆಯೆಬ್ಬಿಸುವ ವಾಯುವು ಐಕ್ಯಕ್ಕೆ ಅಲೆಯಾಗದಂತೆ ಕಾಯಲಿ, ಕರ್ಮಪರಿಪಾಕದಿಂದ ಐಕ್ಯಕ್ಕೆ ಬಾಧೆಯಾಗದಂತೆ ವಿಧಾತನು ಕಾಯಲಿ, ನಾವೇ ಬುದ್ಧಿಹೀನರಾಗಿ ಅನ್ಯೋನ್ಯತ್ವಕ್ಕೆ ಭಂಗವನ್ನು ತಂದುಕೊಳ್ಳದಹಾಗೆ ಸರಸ್ವತಿಯು ಕಾಯಲಿ, ಎಂದು ಪರಿಪೂರ್ಣೈಕತ್ವಪ್ರಾಪ್ತಿಗಾಗಿಯೂ ಅದಕ್ಕೆ ಸಂಭವಿಸಬಹುದಾದ ಆತ್ಮಾಯತ್ತ ಪರಾಯತ್ತ ದೈವಾಯತ್ತ ಬಾಧೆಗಳ ನಿವಾರಣೆಗಾಗಿಯೂ ವಿಶೇಷ ಪ್ರಾರ್ಥನೆಯು.

ಈರೀತಿಯಾಗಿ ಪತ್ನಿಗೆ ಮಾನ್ಯವೂ ಬಹುಮನ್ಯವೂ ಆದ ಸ್ಥಾನವನ್ನು ಶ್ರುತಿಯೂ ಧರ್ಮಾಚಾರ್ಯರೂ ವಿಧಿಸಿದ್ದಾರೆ. ಇದನ್ನು ತಿಳಿದುಕೊಂಡು ಪರಿಪಾಲಿಸುತ್ತಾ ತಮ್ಮ ಶ್ರೇಯಸ್ಸನ್ನು ಸಾಧಿಸಿಕೊಳ್ಳುವುದು ದಂಪತಿಗಳನ್ನವಲಂಬಿಸಿದುದು. ಇದೇ ಧರ್ಮಜೀವನ, ಪ್ರೇಮಜೀವನ, ಸಹಜೀವನ.

## ೮. ಅಂತ್ಯೇಷ್ಟಿ

ದೇಹವು ಬಿದ್ದುಹೋದರೂ ಜೀವವಿದೆಯೆಂದು ಉತ್ತರಕ್ರಿಯಾದಿಗಳನ್ನು ಮಾಡುವುದು ಕೊನೆಯ ಸಂಸ್ಕಾರವು.



21 ಸಮಂಜಂತು ವಿಶ್ವೇದೇವಾಸ್ಸಮಾಪೋ ಹೃದಯಾನಿ ನೌ। ಸಂ ಮಾತರಿಶ್ವಾ ಸಂ ಧಾತಾ ಸಮುದೇಷ್ಟ್ರೀ ದಧಾತು ನೌ ॥ (ಋ.ವೇ—ಅ. ೮, ಅ. ೩, ವ. ೨೮)

# ೬ನೆಯ ಪ್ರಕರಣ—ಸತಿಪತಿಯರ ಪರಸ್ಪರ ಧರ್ಮಗಳು

## ೧. ವಿಶೇಷ ಧರ್ಮಗಳು

ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯನಿಗ್ರಹ, ದಾನ, ದಯೆ, ಕ್ಷಮೆ, ಶೀಲ, ಸೌಜನ್ಯ, ಸದಾಚಾರ, ದೇವಗುರುಭಕ್ತಿ, ಅತಿಥಿಅಭ್ಯಾಗತಸತ್ಕಾರ, ಇತ್ಯಾದಿಗಳು ಸ್ತ್ರೀಪುರುಷರಿಬ್ಬರಿಗೂ ಸಮಾನವಾದ ಧರ್ಮಗಳು. ಅವನ್ನು ಬೇರೆ ಬೇರೆ ಪ್ರಕರಣಗಳಲ್ಲಿ ವಿವರಿಸಿದೆ. ಸ್ತ್ರೀಯೂ ಪುರುಷನೂ ಆಚರಿಸಬೇಕಾದ ವಿಶೇಷ ಧರ್ಮವನ್ನು ಈ ಪ್ರಕರಣದಲ್ಲಿ ಸೂಚಿಸಿದೆ. ಈಗಿನ ವಾತಾವರಣದಲ್ಲಿ ಇದೊಂದು ಕ್ರಾಂತಿಸ್ವರೂಪವನ್ನು ತಾಳಿ ಬೆಳೆಯುತ್ತಾ ಭಿನ್ನಭಾವನೆಗಳಿಗೂ ಅಸಮಾಧಾನಗಳಿಗೂ ವೈಷಮ್ಯಗಳಿಗೂ ತಿರುಗುತ್ತಿದೆ. ಇದಕ್ಕೆ ಸ್ಮೃತ್ಯಾದಿಗಳ "ಸಂಕುಚಿತ"ವೆನ್ನುವ ಉಕ್ತಿಗಳೇ ಕಾರಣವೆಂಬ ಆಕ್ಷೇಪವೂ ಉಪಸ್ಥಿತವಾಗುತ್ತಿದೆ. ಅದಕ್ಕಾಗಿ ಈ ವಿಚಾರವನ್ನು ವಿಸ್ತಾರವಾಗಿಯೇ ಮಾಡಬೇಕಾಗಿದೆ.

ಧರ್ಮಕ್ಕೆ ಶ್ರುತಿಸ್ಮೃತಿಗಳೇ ಮೂಲಾಧಾರ. ಯಾವ ಶಾಸ್ತ್ರವೂ ಅಧರ್ಮವನ್ನು ಪ್ರತಿಪಾದಿಸಿಲ್ಲ, ಪ್ರತಿಪಾದಿಸಿರುವುದು ಧರ್ಮವೇ ಎಂಬುದರಲ್ಲಿ ಸಂಶಯವಿಲ್ಲ. ಶ್ರುತಿಸ್ಮೃತಿಗಳ ಪ್ರಾಮಾಣ್ಯವನ್ನೊಪ್ಪದವರಿಗೂ ನಾಸ್ತಿಕರಿಗೂ ಪಾಷಂಡಿಗಳಿಗೂ ಕುಹಕಿಗಳಿಗೂ ಕುತರ್ಕಿಗಳಿಗೂ ಏನೂ ಹೇಳಿಯೂ ಇಲ್ಲ, ಹೇಳುವುದೂ ಇಲ್ಲ. ಅವರು ಸ್ವತಂತ್ರರು. ಆಸ್ತಿಕರಿಗೂ ಜಿಜ್ಞಾಸುಗಳಿಗೂ ಮಾತ್ರವೇ ಧರ್ಮವನ್ನು ಹೇಳಿರುವುದು.

ಈ ಧರ್ಮವಚನಗಳು ಶ್ರುತಿಸ್ಮೃತ್ಯಾದಿಗಳ ಆಧಾರದ ಮೇಲೂ ಸ್ತ್ರೀಪುರುಷರ ಪ್ರಕೃತಿಧರ್ಮದ ಮೇಲೂ ವ್ಯವಸ್ಥಿತವಾಗಿದೆ. ಸ್ತ್ರೀತ್ವ ಪುರುಷತ್ವವೆಂಬ ಭೇದವು ನೈಸರ್ಗಿಕವು. ಅದಕ್ಕನುಸಾರವಾದ ಪ್ರಕೃತಿಭೇದವೂ ನೈಸರ್ಗಿಕವೇ. ಲೋಕಾಚಾರವೂ ಪ್ರಕೃತಿವೈಶಿಷ್ಟ್ಯಕ್ಕನುಗುಣವಾಗಿಯೇ ಹುಟ್ಟಿ ಬೆಳೆದಿದೆ. ಸ್ತ್ರೀಪುರುಷ ಭೇದವು ಜತೆಯಲ್ಲಿಯೇ ಹುಟ್ಟುತ್ತದೆ, ಜತೆಯಲ್ಲಿಯೇ ಇರುತ್ತದೆ, ಬದುಕಿರುವವರೆಗೂ ಅದರಿಂದ ನಿವೃತ್ತಿಯಿಲ್ಲ. ಪುರುಷರು ಬೀಜಭೂತರು, ನಾರಿಯರು ಕ್ಷೇತ್ರಭೂತರು, ಬೀಜಕ್ಷೇತ್ರಗಳ ಸಮಾಯೋಗದಿಂದಲೇ ದೇಹಿಗಳ ಜನನವಾಗುವುದು.[1] ಸ್ವಜಾತಿಯು ನಷ್ಟವಾಗದೆ ಸ್ಥಿರವಾಗಿರಬೇಕೆಂಬುದು ಎಲ್ಲಾ ಜೀವಿ

1 ಕ್ಷೇತ್ರಭೂತಾ ಸ್ಮೃತಾ ನಾರೀ ಬೀಜಭೂತಸ್ಸ್ಮೃತಃ ಪುಮಾನ್ । ಕ್ಷೇತ್ರಬೀಜಸಮಾಯೋಗಾತ್ಸಂಭವಸ್ಸರ್ವದೇಹಿನಾಂ ॥ಮ.ix-೩೩॥

ಗಳಿಗೂ ಸಮಾನವಾದ ನೈಸರ್ಗಿಕ ಪ್ರವೃತ್ತಿಯು.[2] ಈ ಪ್ರವೃತ್ತಿಯೇ ಸ್ತ್ರೀಪುರುಷ ಸಮಾಯೋಗಕ್ಕೂ ಸಾಹಚರ್ಯಕ್ಕೂ ಆಧಾರವು. ಉತ್ಪಾದನ ಕ್ರಿಯೆಯಲ್ಲಿ ಪುರುಷನ ವ್ಯಾಪಾರವು ಸಮಾಯೋಗಪರ್ಯಂತವಾದುದು, ಸ್ತ್ರೀಯ ಪಾತ್ರವು ಅಷ್ಟರಲ್ಲಿಯೇ ಪರಿಸಮಾಪ್ತಿಯಾಗುವುದಿಲ್ಲ—ಗರ್ಭವನ್ನು ಧರಿಸಿ ಯಥಾಕಾಲದಲ್ಲಿ ಪ್ರಸವಿಸಿ ಸಂತಾನವನ್ನು ಪಾಲಿಸಿ ಪೋಷಿಸುವುದು ಸ್ತ್ರೀಗೆ ಪ್ರಕೃತಿಯೇ ನಿಬಂಧನೆ ಮಾಡಿರುವ ಪ್ರತ್ಯಕ್ಷವಾದ ಕರ್ತವ್ಯ.[3] ಅದನ್ನು ನಿರ್ವಹಿಸುವುದಕ್ಕೆ ಅನುಕೂಲವಾದ ದೇಹ ಧರ್ಮವನ್ನೂ ಮನೋಧರ್ಮವನ್ನೂ ನಾರಿಗೆ ಪ್ರಕೃತಿಯೇ ಒದಗಿಸಿದೆ. ತಾಯಿಯ ಮನೋಧರ್ಮವನ್ನು ಪೂಜ್ಯತ್ವ ವಿಮರ್ಶೆಯಲ್ಲಿ ಹಿಂದೆಯೇ ಹೇಳಿದೆ. ಸಂತಾನವೇ ತಾನು, ಅದರ ಯೋಗಕ್ಷೇಮವೇ ತನ್ನ ಯೋಗಕ್ಷೇಮ, ಎಂಬ ಭಾವನೆಯಿಂದ ತಾಯಿಯು ಸಂತಾನವನ್ನು ಸಂರಕ್ಷಿಸುತ್ತಾಳೆ.[4] ಜನನಿಯಂಥಾ ಪರಮಬಂಧುವು ಪೃಥ್ವಿಯಲ್ಲಿನ್ನಿಲ್ಲ. ಅವಳ ಮನಸ್ಸ್ವಾಸ್ಥ್ಯಕ್ಕೂ ಸಂತಾನದ ಅಭ್ಯುದಯಕ್ಕೂ ಆ ಬಂಧುತ್ವಕ್ಕೆ ಭಂಗವನ್ನು ತರಬಾರದು. ತಾಯಿಮಕ್ಕಳನ್ನು ಬೇರ್ಪಡಿಸುವುದು ಸರ್ವಥಾ ಅಯುಕ್ತವು. ನಾರಿಯ ಪ್ರಕೃತಿಯು ಸ್ವಾಭಾವಿಕವಾಗಿ ಮೃದುವೂ ಸೂಕ್ಷ್ಮವೂ ಸ್ನೇಹಮಯವೂ ಆದುದು, ಗರ್ಭಾದಿ ನಿಮಿತ್ತವಾಗಿ ಸ್ನಿಗ್ಧತರವೂ ಸೂಕ್ಷ್ಮತರವೂ ಆಗುವುದು. ಪುರುಷನ ಪ್ರಕೃತಿಯು ಮೃದುವೂ ಸೂಕ್ಷ್ಮವೂ ಅಲ್ಲ—ಅಧ್ಯವಸಾಯಾತ್ಮಕವಾದುದು. ಅದಕ್ಕೆ ತಕ್ಕ ಶಾರೀರಕವೂ ಅವನಿಗಿದೆ; ಅವನ ಕಾರ್ಯರಂಗದ ಅನುಭವದಿಂದ ಆ ಪ್ರಕೃತಿಯೇ ಪೋಷಿತವಾಗುತ್ತದೆ. ಸಂತಾನೋದಯದಿಂದ ಅಧ್ಯವಸಾಯವು ತೀವ್ರವಾಗುವುದೇ ವಿನಾ ಅವನ ಶಾರೀರಕದ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ. ದಂಪತಿಗಳು ಸಹಜ ವಾಗಿಯೇ ಅವರವರ ಪ್ರಕೃತಿಗನುಗುಣವಾದ ಕಾರ್ಯರಂಗಗಳಲ್ಲಿ ಪ್ರವರ್ತಿಸುತ್ತಾರೆ. ಕಾರ್ಯವೂ ಕಾರ್ಯರಂಗವೂ ವಿಭಕ್ತವಾದರೂ ಇಬ್ಬರದೂ ಒಂದೇ ಸಂಸಾರದ ನಿರ್ವಾಹ, ಏಕದೇಹ ನ್ಯಾಯದಿಂದ ವರ್ತಿಸುತ್ತಾರೆ. ಪುರುಷನಿಗೆ ಸ್ತ್ರೀಯೂ ಸ್ತ್ರೀಗೆ ಪುರುಷನೂ ಪರ್ಯಾಪ್ತಿಗೆ ಬೇಕೇ ಬೇಕು. ಸಾಹಚರ್ಯವೇ ಪೂರ್ಣ ಜೀವನ. ಅದರಲ್ಲಿ ವ್ಯಕ್ತಿಭಾವವಿಲ್ಲ, ಅಂಗಾಂಗಿಭಾವವಿಲ್ಲ, ತಾರತಮ್ಯವಿಲ್ಲ. ಒಂದರಲ್ಲಿ ಒಬ್ಬನ ಕೈ ಮೇಲಾದರೆ ಇನ್ನೊಂದರಲ್ಲಿ ಇನ್ನೊಬ್ಬಳ ಕೈ ಮೇಲು. ಇಷ್ಟಕ್ಕೂ ತಾರತಮ್ಯವು ಸಾಧಾರಣ ಧರ್ಮ ಸಾಪೇಕ್ಷವಾದುದು,[5] ಅನನ್ಯಾಪೇಕ್ಷ ವಲ್ಲ.[6] ಪುರುಷನಿಗೆ ಪುರುಷನನ್ನೂ ಸ್ತ್ರೀಗೆ ಸ್ತ್ರೀಯನ್ನೂ ಹೋಲಿಸಬಹುದೇ

2 Instinct of race preservation.

3 ಉತ್ಪಾದನಪತ್ಯಸ್ಯ ಜಾತಸ್ಯ ಪರಿಪಾಲನಂ। ಪ್ರತ್ಯಹಂ ಲೋಕಯಾತ್ರಾಯಾಃ ಪ್ರತ್ಯಕ್ಷಂ ಸ್ತ್ರೀನಿಬಂಧನಂ ॥ಮ-ix-೩೩॥

4 ತಸ್ಸಿನ್ತ್ರಿಯಾ ಆತ್ಮಭೂಯಂ ಗಚ್ಛತಿ ಯಥಾ ಸ್ವಮಂಗಂ ತಥಾ ॥ಐ.ಉ.॥

5 Relative term. 6 Not an absolute term.

ಹೊರತು ಪುರುಷನಿಗೆ ಸ್ತ್ರೀಯನ್ನೂ ಸ್ತ್ರೀಗೆ ಪುರುಷನನ್ನೂ ಹೋಲಿಸುವುದು ಹೇತ್ವಾಭಾಸ.[7] ಮಾನವತ್ವ ದೃಷ್ಟಿಯಿಂದ ಹೋಲಿಸಬಹುದು, ಅದೀಪ್ರಕರಣಕ್ಕೆ ಅಸಂಬದ್ಧವು.

ಸನಾತನಿಗಳಲ್ಲಿ ವಿವಾಹವೊಂದು ಸಂಸ್ಕಾರವು, ಸಂಸ್ಕಾರದಿಂದಲೇ ದಾಂಪತ್ಯ ಸಿದ್ಧಿಯು, ಅದರಿಂದಲೇ ದಾಂಪತ್ಯಕ್ಕೆ ಧರ್ಮತ್ವ ಪಾವನತ್ವಗಳು. ಪುತ್ರರಂತೆ, ಬಂದ ಸ್ತ್ರೀಯರೂ ಕುಲದಲ್ಲೈಕ್ಯವಾಗಬೇಕು, ಬೇಕೆಂಬುದು ಸರ್ವಸಮಾಜ ಸಮ್ಮತವಾದುದು. ಪುತ್ರರು ಜನನದಿಂದ ಕುಲದಲ್ಲೈಕ್ಯವಾದರೆ ಬಂದ ಸ್ತ್ರೀಯರು ದತ್ತಕರಂತೆ ಸಂಸ್ಕಾರದಿಂದೈಕ್ಯವಾಗುತ್ತಾರೆ. ದತ್ತಕನಿಗೆ ಸಂಸ್ಕಾರಜನ್ಯವಾದ ಪುತ್ರತ್ವದಿಂದ ಹೇಗೆ ನಿವೃತ್ತಿಯಿಲ್ಲವೋ ಹಾಗೆ ಸಂಸ್ಕಾರಜನ್ಯವಾದ ಪತ್ನೀತ್ವದಿಂದ ಸ್ತ್ರೀಗೂ ನಿವೃತ್ತಿಯಿಲ್ಲ—ಅಂದರೆ ಧರ್ಮದೃಷ್ಟಿಯಲ್ಲಿಲ್ಲ. ಧರ್ಮವೇ ಅಪ್ರಕೃತವೆನ್ನಬಹುದೇ ವಿನಾ ಧರ್ಮವೂ ಬೇಕು ನಿವೃತ್ತಿಯೂ ಬೇಕು ಎನ್ನುವುದು ಪರಸ್ಪರ ವಿರುದ್ಧವಾದ ಮಾತು. ಸನಾತನಿಗಳ ವಿವಾಹದ ಉದಾತ್ತ ಧ್ಯೇಯವನ್ನು ಸರ್ವರೂ ಪ್ರಶಂಸಿಸಿದ್ದಾರೆ—ಅದರಿಂದ ಕಲ್ಯಾಣವೂ ಆಗಿದೆ. ವೈಧವ್ಯವು ದೈವಾಯತ್ತವು-ಜನ್ಮಾಂತ್ರಿಯವು. ಪ್ರಾಪ್ತವಾದರೆ ನಿವೃತ್ತಿಯಾಗಬೇಕೇ ಬೇಡವೇ ಎಂಬುದರಲ್ಲಿ ಮತಭೇದವಿದೆ, ಆಗಬೇಕೆನ್ನುವವರಿಗೆ ನಾರದ ಪರಾಶರರು ದಾರಿಯನ್ನು ತೆರೆದಿದ್ದಾರೆ, ಲೋಕಾಚಾರವೂ ಪ್ರಚುರವಾಗಿದೆ, ಕಾನೂನುಗಳೂ ಇವೆ. ಸಾಧಕಬಾಧಕಗಳ ವಿವೇಚನೆಯಿಂದ ನಡೆಯಬಹುದು. ದಾಂಪತ್ಯಕ್ಕೆ ಧರ್ಮತ್ವವಿಲ್ಲವೆಂಬ ವಾದದಲ್ಲಿ ತಿರುಳಿಲ್ಲ. ಧರ್ಮತ್ವವಿಲ್ಲದ ದಾಂಪತ್ಯವು ಕಾಮಾರ್ಥವಾಗುವುದು—ಅದರಲ್ಲಿ ಸ್ತ್ರೀಯರು ಭೋಗಿನಿಯರಾಗಲೇಬೇಕಾಗುವುದು—ಅದು ವಾದಿವಿರುದ್ಧವಾದ ವಾದವು. ಧರ್ಮದೃಷ್ಟಿಯಲ್ಲಿ ವಿವಾಹಾಗ್ನಿಯೇ ಗೃಹ್ಯಾಗ್ನಿಯು, ಅದನ್ನು ಸಂರಕ್ಷಿಸಿ[8] ಅದರಲ್ಲೇ ಸ್ಮಾರ್ತಕರ್ಮಗಳನ್ನು ನಡೆಸಬೇಕು.[9] ಪತ್ನಿಯಿಂದಲೇ ಪತಿಗೆ ಕರ್ಮಾಧಿಕಾರ, ಅಪತ್ನೀಕನಿಗೂ ಮೃತಪತ್ನೀಕನಿಗೂ ಇಲ್ಲ. ದಂಪತಿಗಳು ಅಪುತ್ರರಾದರೆ ಪರಸ್ಪರ ಶ್ರಾದ್ಧಾದಿಗಳನ್ನು ಮಾಡಬೇಕು. ಇವೆಲ್ಲ ಧರ್ಮನಿಬಂಧನೆ. ವಿತಂಡವಾದದಿಂದ ಪ್ರಯೋಜನವಿಲ್ಲ, ವಿರೋಧವು ಹೆಚ್ಚುವುದು—ಅದು ಬೇಡ. ವಿವಾಹವು ಕೇವಲ ಕಾಮೋಪಭೋಗಾರ್ಥವಾದುದಲ್ಲ. ಧರ್ಮಪ್ರಜಾಸಂಪದರ್ಥವಾದುದು. ಅದೇ ವಿವಾಹದ ಪ್ರತಿಜ್ಞೆ. ಧರ್ಮಸಂಪತ್ತು ಗೃಹಸ್ಥಧರ್ಮ ಪರಿಪಾಲನ ರೂಪದ್ದು. ಪ್ರಜಾಸಂಪತ್ತೂ ಧಾರ್ಮಿಕವೇ, ಜೀವಿಸಾಮಾನ್ಯವಾದ ಜಾತಿಸ್ಥಿರೀಕರಣರೂಪದ ನೈಜಪ್ರವೃತ್ತಿ ಮಾತ್ರವಲ್ಲ—ಆತ್ಮೋದ್ಧಾರಕ್ಕೂ ಪಿತೃದ್ಧಾರಕ್ಕೂ ಪುಣ್ಯಲೋಕಾವಾಪ್ತಿಗೂ ಅವಶ್ಯವಾದುದು. ಪುತ್ರಜನನದಿಂದ "ಪುಂ"ನಾಮ ನರಕವು ತಪ್ಪಿ

7 **Fallacy of begging the term.**

8 ವಿಚ್ಛಿತ್ತಿ ಬಂದರೆ ಪುನಸ್ಸಂಧಾನದಿಂದ ಉಜ್ಜೀವಿಸಿಕೊಳ್ಳಬೇಕು.

9 ಕರ್ಮ ಸ್ಮಾರ್ತಂ ವಿವಾಹಾಗ್ನೌ ಕುರ್ವೀತ ಪ್ರತ್ಯಹಂ ಗೃಹೀ ॥ ಯಾ-i-೯೭॥

ಆತ್ಮೋದ್ಧಾರವಾಗುವುದು, ಅದರಿಂದಲೇ ಪುಂ ಸಂತಾನಕ್ಕೆ ಪುತ್ರನೆಂದು ಹೆಸರು.[10] ಅಷ್ಟೇ ಅಲ್ಲ, ತನಗೂ ತನ್ನ ಪಿತೃಗಳಿಗೂ ಪುಣ್ಯಲೋಕಾವಾಪ್ತಿಯಾಗುವುದು.[11] ಔರಸನೇ ಪುತ್ರನು, ಕುಂಡನೂ[12] ಗೋಳಕನೂ[13] ಅಲ್ಲ. ವಿವಾಹದಿಂದ ಸಂಸ್ಕೃತಳಾದ ಸ್ವಪತ್ನಿಯಲ್ಲಿ ತನಗೆ ಜನಿಸಿದವನೇ ಔರಸನು.[14] ಬೀಜಸಂಬಂಧವಿಲ್ಲದಿದ್ದರೂ, ಪತ್ನೀತ್ವವಿಲ್ಲದಿದ್ದರೂ ಪುತ್ರತ್ವವಿಲ್ಲ.[15] ಪತಿಯೇ ಪತ್ನಿಯಲ್ಲಿ ಜನಿಸುತ್ತಾನಾದುದರಿಂದಲೇ ಪತ್ನಿಯು ಜಾಯೆಯು,[16] ಪಿತಾಪುತ್ರರಿಗೆ ಐಕ್ಯಭಾವವು.[17]

ಈ ಆಧಾರಗಳ ಮೇಲೆಯೇ ಪತಿಪತ್ನಿಯರ ಅನ್ಯೋನ್ಯಧರ್ಮಗಳು ನಿಬಂಧನೆಯಾಗಿರುವುದೂ, ಪ್ರಚಾರದಲ್ಲಿರುವುದೂ. ಈ ಮೂಲಭೂತವಾದ ತತ್ತ್ವಗಳನ್ನೂ ವೈಶಿಷ್ಟ್ಯಗಳನ್ನೂ ಸ್ಮೃತಿಯಲ್ಲಿಟ್ಟುಕೊಂಡು ವಿಮರ್ಶಿಸಿದರೇ ಸ್ಮೃತಿವಾಕ್ಯಗಳೂ ಅನೂಚಾನವಾಗಿ ನಡೆದುಬರುತ್ತಿರುವ ಆಚಾರಗಳೂ ಅರ್ಥವಾಗುವುದು. ದಾಂಪತ್ಯವನ್ನು ಸಾಮಯಿಕವೆಂದಾಗಲೀ[18] ಪಾರಸ್ಪರ್ಯವೆಂದಾಗಲೀ[19] ಪಣವಿಕ್ರಯವೆಂದಾಗಲೀ[20] ಭೃತಭರ್ತೃಸಂಬಂಧವೆಂದಾಗಲೀ[21] ಉಪಕಾರ ಪ್ರತ್ಯುಪಕಾರವೆಂದಾಗಲೀ[22] ಸಾಮಾಜಿಕ ವ್ಯವಹಾರವೆಂದಾಗಲೀ[23] ಪರಸ್ಪರ ಸ್ನೇಹಸಂಬಂಧ

---

10 ಪುಂನಾಮ್ನೋನರಕಾದ್ಯಸ್ಮಾತ್ತ್ರಾಯತೇ ಪಿತರಂ ಸುತಃ । ತಸ್ಮಾತ್ಪುತ್ರ ಇತಿ ಪ್ರೋಕ್ತಸ್ಸ್ವಯಮೇವ ಸ್ವಯಂಭುವಾ ॥ಮ-ix-೧೩೮॥

11 ಪುತ್ರೇಣ ಲೋಕಾ ಜಯತಿ ಪೌತ್ರೇಣಾನಂತಮಶ್ನುತೇ । ಅಥ ಪುತ್ರಸ್ಯ ಪೌತ್ರೇಣ ಬ್ರಧ್ನಸ್ಯಾಪ್ನೋತಿ ವಿಷ್ಟಪಂ ॥ಮ-ix-೧೩೭॥ (ಅನಂತಮಶ್ನುತೇ—ಸ್ವರ್ಗಾದಿ ಲೋಕೇಷು ಚಿರಕಾಲಮವತಿಷ್ಠತೇ, ಬ್ರಧ್ನಸ್ಯ=ಆದಿತ್ಯಸ್ಯ, ವಿಷ್ಟಪಂ=ಲೋಕಂ, ಆಪ್ನೋತಿ=ಪ್ರಾಪ್ನೋತಿ) ದಾರಾಧೀನಸ್ತಥಾಸ್ವರ್ಗಃ ಪಿತೄಣಾಮಾತ್ಮನಸ್ಯಹ ॥ಮ-ix-೨೮॥

12 ಅಮೃತೇ ಜಾರಜಃ ಕುಂಡಃ ॥ಅಮರ॥ (ಗಂಡನಿದ್ದಾಗ ಜಾರನಿಂದ ಜನಿಸಿದವನು ಕುಂಡನು). 13 ಮೃತೇ ಭರ್ತರಿ ಗೋಳಕಃ ॥ಅಮರ॥ (ಗಂಡನು ತೀರಿದ ಮೇಲೆ ಜಾರನಿಂದ ಜನಿಸಿದವನು ಗೋಳಕನು.) 14 ಸ್ವಕ್ಷೇತ್ರೇ ಸಂಸ್ಕೃತಾಯಾಂ ತು ಸ್ವಯಮುತ್ಪಾದಯೇದ್ಧಿ ಯಂ । ತಮೌರಸಂ ವಿಜಾನೀಯಾತ್ಪುತ್ರಂ ॥ಮ-ix-೧೬೬॥

15 ಈ ನ್ಯಾಯವನ್ನು ಪ್ರಾಯಶಃ ಸರ್ವರೂ ಅನುಮೋದಿಸುತ್ತಾರೆ. ಅಲ್ಲದೆ ವಿವಾಹಕ್ಕೆ ಏನಾದರೂ ಕಲಾಪವನ್ನೂ ಮಾಡುತ್ತಾರೆ, ದಾಂಪತ್ಯಸಂಬಂಧಕ್ಕೆ ಮಹತ್ವವನ್ನೂ ಸ್ಥಿರಭಾವವನ್ನೂ ಅವರವರ ಆಚಾರ ಸಂಸ್ಕಾರಗಳಿಗನುಗುಣವಾಗಿ ಕಲ್ಪಿಸುತ್ತಾರೆ. ಪುತ್ರಲಕ್ಷಣವೂ ಸರ್ವಸಂಮತವಾದುದೇ. 16 ಪತಿರ್ಭಾರ್ಯಾಂ ಸಂಪ್ರವಿಶ್ಯ ಗರ್ಭೋ ಭೂತ್ವೇಹ ಜಾಯತೇ । ಜಾಯಾಯಾಸ್ತದ್ಧಿ ಜಾಯಾತ್ವಂ ಯದಸ್ಯಾಂ ಜಾಯತೇ ಪುನಃ ॥ಮ-ix-೮॥ ತಜ್ಜಾಯಾ ಜಾಯಾ ಭವತಿ ಯದಸ್ಯಾಂ ಜಾಯತೇ ಪುನಃ ॥ಐತ. ಬ್ರಾಹ್ಮ॥

17 ಆತ್ಮಾ ವೈ ಪುತ್ರನಾಮಾಸಿ ॥ಕೌಷೀತಕೀ ಉಪನಿಷತ್ತು॥

18 ಸಮಯವೆಂದರೆ ಸಂಕೇತ—ಸಂಕೇತದಿಂದ ನಡೆಯುವುದು ಸಾಮಯಿಕ.

19 Due to mutual attraction. 20 Chattel sold and purchased.

21 Protector and protected. 22 Mutual service.

23 Social institution.

ವೆಂದಾಗಲೀ[24] ಆಕಸ್ಮಿಕವೆಂದಾಗಲೀ[25] ಕೇವಲ ಲೌಕಿಕದೃಷ್ಟಿಯಿಂದ ವಿಮರ್ಶಿಸಿದರೆ ಸ್ಮೃತಿವಚನಗಳಿಗೆ ಅರ್ಥವಾಗುವುದಿಲ್ಲ, ಅಪಾರ್ಥವೇ ಆಗುವುದು. ಯಾರು ಯಾವ ದೃಷ್ಟಿಯಿಂದ ಹೇಳಿದ್ದಾರೋ ಆ ದೃಷ್ಟಿಯಿಂದಲೇ ಅವರ ವಾಕ್ಯಗಳನ್ನು ಪರಿಶೀಲಿಸಬೇಕು.[26]

## ೨. ಪತಿಧರ್ಮ

(i) ಸಂಯೋಗಧರ್ಮ—

ಧರ್ಮಕರ್ಮವೂ ವಂಶೋದ್ಧಾರವೂ ಹಿತವಾದ ರತಿಯೂ ಪತ್ನಿಯಿಂದಲೇ ಪ್ರಾಪ್ತವಾಗುವುದು ; ತನಗೆ 'ಪುಂ' ಎಂಬ ನರಕವು ತಪ್ಪುವುದೂ ತನಗೂ ತನ್ನ ಪಿತೃಗಳಿಗೂ ಪುಣ್ಯಲೋಕವು ಸಿಗುವುದೂ ಸಹ ಪತ್ನಿಯಿಂದಲೇ. ಆದ್ದರಿಂದ ಪತ್ನಿಯನ್ನು ಚೆನ್ನಾಗಿ ರಕ್ಷಿಸಬೇಕು.[1] ಸ್ತ್ರೀಯರು ಮಹಾಭಾಗೆಯರು, ಅವರಿಂದ ಕಲ್ಯಾಣವಾಗುವುದು, ಅವರು ಮನೆಗೆ ದೀಪವಿದ್ದ ಹಾಗೆ. ಅವರನ್ನು ವಸ್ತ್ರಾಲಂಕಾರಗಳಿಂದ ಸನ್ಮಾನಿಸಬೇಕು. ಮನೆಯನ್ನು ಶೋಭಾಯಮಾನವಾಗುವಂತೆ ಮಾಡುವ ಸ್ತ್ರೀಗೂ ಶ್ರೀಗೂ ಲೇಶವೂ ವ್ಯತ್ಯಾಸವಿಲ್ಲ, ಸ್ತ್ರೀಯೇ ಲಕ್ಷ್ಮಿಯು.[2] ಧನವಿಲ್ಲದವನ ಮನೆಯು ಹೇಗೆ ಶೋಭಿಸುವುದಿಲ್ಲವೋ ಹಾಗೆ ಗೃಹಲಕ್ಷ್ಮಿಯಿಲ್ಲದವನ ಮನೆಯೂ ಶೋಭಿಸುವುದಿಲ್ಲ. ಅದರಿಂದಲೇ ಗೃಹಿಣಿಯೇ ಗೃಹವೆಂದು ಲೋಕವಾದವಾಗಿರುವುದು[3] ಪತಿಯೊಬ್ಬನೇ ಅಲ್ಲ, ತಂದೆತಾಯಂದಿರೂ, ದೊಡ್ಡಪ್ಪಚಿಕ್ಕಪ್ಪಂದಿರೂ, ಅಣ್ಣತಮ್ಮಂದಿರೂ, ಜ್ಞಾತಿಬಾಂಧವರೂ, ಅತ್ತೆಮಾವಂದಿರೂ, ಭಾವಮೈದುನರೂ, ಎಲ್ಲರೂ ತಮಗೆ ಒಳ್ಳೆಯದಾಗಬೇಕಾದರೆ, ಹಿತವಾದ ಭೋಜನಾದ್ಯಾವಶ್ಯಕತೆಗಳನ್ನೂ, ವಸ್ತ್ರಾಲಂಕಾರಾದಿ ಭೂಷಣಗಳನ್ನೂ, ಕೊಟ್ಟು ಸ್ತ್ರೀಯರನ್ನು ಸತ್ಕರಿಸಬೇಕು.[4] ಯಾವ ಕುಲದಲ್ಲಿ ನಾರಿಯರು ಸನ್ಮಾನಿತರಾಗಿ ಪ್ರಸನ್ನರಾಗಿರುವರೋ

---

24 Friendly union. 25 Accidental or due to chance.

26 ವಿವಾಹಸಂಸ್ಕಾರದ ವಿವರವನ್ನು ಹಿಂದೆಯೇ ವಿವರಿಸಿದೆ.

1 ಅಪತ್ಯಂ ಧರ್ಮಕಾರ್ಯಾಣಿ ಶುಶ್ರೂಷಾ ರತಿರುತ್ತಮಾ । ದಾರಾಧೀನಸ್ತಥಾ ಸ್ವರ್ಗಃ ಪಿತೄಣಾಮಾತ್ಮನಶ್ಚ ಹ ॥ಮ-ix-೨೮॥ ಲೋಕಾನನ್ತ್ಯಂ ದಿವಃ ಪ್ರಾಪ್ತಿಃ ಪುತ್ರಪೌತ್ರಪ್ರಪೌತ್ರಕೈಃ । ಯಸ್ಮಾತ್ತಸ್ಮಾತ್ ಸ್ತ್ರಿಯಸ್ಸೇವ್ಯಾಃ ಕರ್ತವ್ಯಾಶ್ಚ ಸುರಕ್ಷಿತಾಃ ॥ ಯಾ-i-೭೮॥

2 ಪ್ರಜನಾರ್ಥಂ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ । ಸ್ತ್ರಿಯಃ ಶ್ರಿಯಶ್ಚ ಗೇಹೇಷು ನವಿಶೇಷೋಽಸ್ತಿ ಕಿಂ ಚ ನ ॥ಮ-ix-೨೬॥ ಅನುಕೂಲಾ ಹ್ಯವಾಗ್ದುಷ್ಟಾ ದಕ್ಷಾ ಸಾಧ್ವೀ ಪ್ರಜಾವತೀ । ಏತಾವದ್ಗುಣಸಂಯುಕ್ತಾ ಶ್ರೀರೇವ ಸ್ತ್ರೀ ನ ಸಂಶಯಃ ॥ದಕ್ಷಃ॥

3 ಗೃಹಿಣೀ ಗೃಹಮುಚ್ಯತೇ ॥ನೀತಿ॥

4 ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ । ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ॥ಮ-iii-೫೫॥ ಭರ್ತೃಭ್ರಾತೃಪಿತೃಜ್ಞಾತಿಶ್ವಶ್ರೂಶ್ವಶುರದೇವರೈಃ । ಬಂಧುಭಿಶ್ಚ ಸ್ತ್ರಿಯಃ ಪೂಜ್ಯಾ ಭೂಷಣಾಚ್ಛಾದನಾಶನೈಃ ॥ಯಾ-i-೮೨॥

ಆ ಕುಲದ ಮೇಲೆ ದೇವತೆಗಳೂ ಪ್ರಸನ್ನರಾಗುವರು, ಯಾವ ಕುಲದಲ್ಲಿ ಸ್ತ್ರೀಯರಿಗೆ ಸನ್ಮಾನವಿಲ್ಲವೋ ಅಲ್ಲಿ ನಡೆಯುವ ಯಜ್ಞಾದಿ ಕರ್ಮಗಳು ಫಲಿಸುವುದಿಲ್ಲ.[5] ಯಾವ ಕುಲದಲ್ಲಿ ಪೋಷ್ಯವರ್ಗಕ್ಕೆ ಸೇರಿದ ಹೆಂಡತಿ ಹೆಣ್ಣುಮಕ್ಕಳು ಸೊಸೆಯರು ಮುಂತಾದವರು ದುಃಖಿಸುವರೋ ಅದು ಶೀಘ್ರವಾಗಿ ನಾಶವಾಗುವುದು.[6] ಯಾವುದನ್ನು ಅವರು ಶಪಿಸುವರೋ ಅದು ಮಾಯಾಮಂತ್ರೋಪಹತವಾದಂತೆ ಪೂರ್ಣವಾಗಿ ನಾಶವಾಗುವುದು[7] ಆದಕಾರಣ ಸದಾಕಾಲವೂ, ವಿಶೇಷವಾಗಿ ಇತರರಿಗೆ ಸನ್ಮಾನಮಾಡುವ ಉತ್ಸವಾದಿ ಕಾಲಗಳಲ್ಲಿಯೂ, ಪೋಷ್ಯವರ್ಗದ ಸ್ತ್ರೀಯರಿಗೆ ಸತ್ಕಾರಮಾಡಬೇಕು, ಅನ್ಯಥಾ ಸಂಪದಭ್ಯುದಯಗಳು ಲಭ್ಯವಲ್ಲ[8] ಇದೇ ಅರ್ಥಾನುಚರತ್ವ, ಪತಿಪತ್ನಿಯರು ಪರಸ್ಪರ ಸಂತುಷ್ಟರಾಗಿದ್ದರೇ ಕಲ್ಯಾಣ,[9] ಅದರಿಂದಲೇ ಧರ್ಮಾರ್ಥಕಾಮಗಳಿಗೆ ವೃದ್ಧಿ[10] ಈ ತ್ರಿವರ್ಗಾನುಚರತ್ವಕ್ಕಾಗಿಯೇ ವಿವಾಹದಲ್ಲಿ ವರನು ಪ್ರಮಾಣವಚನವನ್ನು ಸ್ವೀಕರಿಸುವುದು.[11]

ಕಾಮವು ಜ್ಞಾನವಿಜ್ಞಾನನಾಶಕವೇ,[12] ಆದರೂ ಧರ್ಮಕ್ಕೆ ಅವಿರುದ್ಧವಾದ ಕಾಮವು ವಿಭೂತಿಮತ್ತಾದುದು[13] ಸ್ವದಾರರತಿಯು ಸಂತತಿಪ್ರದವಾದುದರಿಂದ ಧರ್ಮ್ಯವೇ, ಬ್ರಹ್ಮಚರ್ಯವೇ.[14] ಋತುಸ್ನಾತಳನ್ನು ಉಪೇಕ್ಷಿಸುವುದು ಪಾತಕವು[15]

---

5 ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ । ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ಮ-iii-೫೬॥

6 ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಂ । ನ ಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ ॥ಮ-iii ೫೭॥

7 ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ । ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ ॥ಮ-iii-೫೮॥

8 ತಸ್ಮಾದೇತಾಸ್ಸದಾ ಪೂಜ್ಯಾ ಭೂಷಣಾಚ್ಛಾದನಾಶನೈಃ । ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರೇಷೂತ್ಸವೇಷು ಚ ॥ಮ-iii-೫೯॥

9 ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ। ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಂ ॥ಮ-iii-೬೦॥

10 ಯತ್ರಾನುಕೂಲ್ಯಂ ದಂಪತ್ಯೋಸ್ತ್ರಿವರ್ಗಸ್ತತ್ರ ವರ್ಧತೇ ॥ಯಾ-i-೭೪॥

11 ಕನ್ಯಾದಾತಾ । "ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಿತವ್ಯಾ" ॥ ವರಃ। "ನಾತಿಚರಾಮಿ" ॥ಇತಿಸಂಶ್ರುತಿಃ॥

12 ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ । ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ ॥ಭ.ಗೀ.॥

13 ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ಭ.ಗೀ.॥

14 ಲೋಕಾನಂತ್ಯಂ ದಿವಃ ಪ್ರಾಪ್ತಿಃ ಪುತ್ರಪೌತ್ರಪ್ರಪೌತ್ರಕೈಃ । ಯಸ್ಮಾತ್ತಸ್ಮಾತ್ಸ್ತ್ರಿಯಸ್ಸೇವ್ಯಾಃ ಕರ್ತವ್ಯಾಶ್ಚ ಸುರಕ್ಷಿತಾಃ ॥ಯಾ-i-೭೮॥ ಧರ್ಮಪ್ರಜಾಸಂಪತ್ತಿಃ ಪ್ರಯೋಜನಂ ದಾರಸಂಗ್ರಹಸ್ಯೋಕ್ತಂ ॥ಮಿತಾಕ್ಷರಾ॥

15 ಸ್ವಯಂ ದಾರಾನ್ ಋತುಸ್ನಾತಾನ್ ಸ್ವಸ್ಥಶ್ಚೇನ್ನೋಪಗಚ್ಛತಿ । ಭ್ರೂಣಹತ್ಯಾಂ ಸಮಾಪ್ನೋತಿ ಗರ್ಭಂ ಪ್ರಾಪ್ತಂ ವಿನಾಶಯೇತ್ ॥ದೇವಲಃ॥

ಋತುಕಾಲದಲ್ಲಿ ಸ್ತ್ರೀಯು ಸೇವ್ಯಳು ಎನ್ನುವುದಕ್ಕೆ ಕಾಲನಿಯಮವಿದೆ ಗರ್ಭ ಧಾರಣ ಯೋಗ್ಯಕಾಲವು ರಜೋದರ್ಶನದಿಂದ ಹದಿನಾರು ರಾತ್ರಿಗಳು, ಅದರಲ್ಲಿ ಮೊದಲ ನಾಲ್ಕು ಹನ್ನೊಂದನೆಯದು ಹದಿಮೂರನೆಯದು ವರ್ಜ್ಯಗಳು, ಪರ್ವ ದಿವಸಗಳೂ ವರ್ಜ್ಯಗಳು(ಮೊದಲ ಮೂರೆಂದು ಆಚಾರವಿರುವುದು.) ಋತುಕಾಲದಲ್ಲಿ ಎಂಬುದರಿಂದ ಋತುಕಾಲದಲ್ಲಿ ಸೇವಿಸಲೇಬೇಕೆಂದೊಂದು ನಿಯಮವೂ, ವ್ಯತೀತ ವಾದಮೇಲೆ ಕೂಡದೆಂದೊಂದು ನಿಯಮವೂ, ಎರಡೂ ಉಕ್ತವಾದಹಾಗಾಯಿತು; ಎರಡಕ್ಕೂ ಆಧಾರವಿದೆ.[16] ಎರಡನೆಯದಕ್ಕೆ ಅಪವಾದವೂ ಉಕ್ತವಾಗಿದೆ—ಉಕ್ತ ಕಾಲವು ಅತೀತವಾದರೂ ಸ್ತ್ರೀಯನ್ನು ರಕ್ಷಿಸುವುದಕ್ಕೂ ಸ್ತ್ರೀಯರಿಗೆ ಇಂದ್ರದತ್ತ ವಾದ ವರವನ್ನು ಪಾಲಿಸುವುದಕ್ಕೂ ಸಹ ಸ್ತ್ರೀಕಾಮನವನ್ನು ಉಪೇಕ್ಷಿಸಬಾರದು[17] ರಕ್ಷಿಸುವುದೆಂದರೆ ಅಕಾರ್ಯಕ್ಕೆ ಅವಕಾಶಕೊಡಬಾರದೆಂದರ್ಥವು[18] ನಿಮ್ಮ ಕಾಮನ ವನ್ನು ಉಪೇಕ್ಷಿಸುವವನು ಪಾತಕಿಯಾಗಲಿ ಎಂದು ಇಂದ್ರನ ವರವು.[19] ಇದು ಕಾಮದಲ್ಲಿ ಅತಿಚಾರವಾಗದೆ ಇರುವಹಾಗೆ ನಡೆಯುವ ರೀತಿ.

ಪತಿಗೆ ಪತ್ನಿಯು ದೇವದತ್ತಳು, ಇಚ್ಛಾಪ್ರಾಪ್ತಳಲ್ಲ,[20] ಭಗ ಅರ್ಯಮ ಸವಿತಾ ಪುರಂಧಿ (ಪೂಷಾ) ಇವರು ಗೃಹಸ್ಥಾಶ್ರಮಿಯಾಗಿರೆಂದೂ, ಅಗ್ನಿಯು ಆಯಸ್ಸು ವರ್ಚಸ್ಸು ಸಂಪತ್ತು ಪುತ್ರಸಂತತಿ ಎಲ್ಲವೂ ಲಭಿಸಲೆಂದೂ, ಪತ್ನಿಯನ್ನು ಪತಿಗೆ ಕೊಡುವರು ಎಂದು ಶ್ರುತಿಯಿದೆ. ದೇವದತ್ತಳಾದುದರಿಂದ ದೇವತಾ ಪ್ರೀತ್ಯರ್ಥವಾಗಿಯೂ ಸಂಭಾವ್ಯಳು.[21] ಪತ್ನೀಸದ್ಭಾವವೇ ಶ್ರೌತಸ್ಮಾರ್ತಕರ್ಮಾನು ಷ್ಠಾನಕ್ಕೆ ಮೂಲವು. ಆ ಕರ್ಮಗಳಲ್ಲೆಲ್ಲಾ ಪತ್ನಿಯು ಸಹಕರಿಸಲೇಬೇಕು. ಆದರಿಂದಲೇ ಆಕೆಯನ್ನು ಸಹಧರ್ಮಿಣಿಯೆನ್ನುವುದು.[22] ಆಕೆಯು ಹನೆಯನ್ನು

---

16 ಋತೌ ನೋಪೇತಿ ಯೋ ಭಾರ್ಯಾಮನೃತೌ ಯಶ್ಚ ಗಚ್ಛತಿ । ತುಲ್ಯಮಾಹುಸ್ತ ಯೋಃ ಪಾಪಂ ...॥ಬೋಧಾಯನಃ॥ This is family planning in a way.

17 ಯಥಾಕಾಮೀ ಭವೇದ್ವಾಪಿ ಸ್ತ್ರೀಣಾಂ ವರಮನುಸ್ಮರ್ರ । ಸ್ವದಾರನಿರತಶ್ಚೈವ ಸ್ತ್ರಿಯೋ ರಕ್ಷ್ಯಾ ಯತಸ್ಸ್ಮೃತಾಃ ॥ಯಾ-i-೮೧॥

18 ರಕ್ಷೇತ್-ಅಕಾರ್ಯಕರಣಾದ್ರಕ್ಷೇತ್ । ತತ್ರಸುರಕ್ಷಿತತ್ವಂ ಯಥಾಕಾಮಿತ್ವೇನ ಸ್ತ್ರ್ಯಂತರಾಗಾಮಿತ್ವೇನ (ಅರ್ಥಾತ್ ಸ್ವದಾರನಿರತತ್ವೇನ) ಚ ಭವತಿ ॥ಮಿತಾಕ್ಷರಾ-ಯಾ-i-೮೧॥

19 ಭವತೀನಾಂ ಕಾಮವಿಹಂತಾ ಪಾತಕೀ ಸ್ಯಾದಿತೀಂದ್ರದತ್ತಂ ವರಂ ॥ಮಿತಾಕ್ಷರಾ॥

20 ಭಗೋ ಆರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದಾದ್ಬೃಹಸ್ಪತಿಃ ॥ಋ. ವೇ- ಅ. ೮, ಅ. ೩, ವ. ೨೭॥ ಪುನಃ ಪತ್ನೀಮಗ್ನಿರದಾದಾಯುಷಾ ಸಹ ವರ್ಚಸಾ ॥ಋ. ವೇ— ಅ. ೮, ಅ. ೩, ವ. ೨೭॥

21 ದೇವದತ್ತಾಂ ಪತಿರ್ಭಾರ್ಯಾಂ ವಿಂದತೇನೇಚ್ಛಯಾತ್ಮನಃ । ತಾಂ ಸಾಧ್ವೀಂ ಬಿಭೃಯಾನ್ನಿತ್ಯಂ ದೇವಾನಾಂ ಪ್ರಿಯಮಾಚರ್ರ ॥ಮ-ix-೯೫॥

22 ಪತ್ಯಾ ಭರ್ತ್ರಾ ಸಹ ಧರ್ಮಃ ದಾನಯಜ್ಞಾದಿರಸ್ಯಾ ಇತಿ ಸಹಧರ್ಮಿಣೀ ॥

ಅಲಂಕರಿಸದೆ ಯಾವ ಕರ್ಮವೂ ನಡೆಯುವುದಿಲ್ಲ, ಅವಳ ಜಲಧಾರೆಯಿಲ್ಲದೆ ಯಾವ ದಾನವೂ ಕೃತವಾಗುವುದಿಲ್ಲ, ಔಪಾಸನದಲ್ಲಿ ಅವಳು ವಿಭಾಗಿಸಿಕೊಟ್ಟುದೇ ಆಹುತಿಯು, ನಷ್ಟವಾದ ಅಗ್ನಿಯನ್ನು ಪುನಸ್ಸಂಧಾನ ಮಾಡಲು ಆಕೆಯಿಂದಲೇ ಲಾಜಾಹೋಮವು ನಡೆಯಬೇಕು, ಅವಭೃತಸ್ನಾನಮಾರ್ಜನೆಗಳಲ್ಲಿ ಆಕೆಯ ಸದ್ಭಾವವು ಅನಿವಾರ್ಯವು. ಪುತ್ರಸಂತತಿಯಾಗಿ ಆತ್ಮೋದ್ಧಾರ ಪಿತ್ರುದ್ಧಾರವಾಗುವುದು ಆಕೆಯಿಂದಲೇ. ಇದನ್ನೇ ಧರ್ಮದಲ್ಲಿ ಸಹಜೀವನ ಎನ್ನುವುದು. ಇಂಥಾ ಸ್ಥಾನವೆಂಥಾ ಮರ್ಯಾದೆಯದು, ಇದರಲ್ಲೆಂಥಾ ಐಕ್ಯಭಾವವಿದೆ? ಪಶುವತ್ತಾದ ಭೋಗ್ಯತ್ವವೆಲ್ಲಿದೆ?

(ii) ವಿಪ್ರಯೋಗ ಧರ್ಮ

ವಿಪ್ರಯೋಗವು ಕೆಲವುಕಾಲ ಮಾತ್ರವಾದುದೂ ಆಗಬಹುದು, ಶಾಶ್ವತವಾದುದೂ ಆಗಬಹುದು. ಪ್ರವಾಸಾದಿಗಳಿಂದಾಗುವುದು ಅಲ್ಪಕಾಲೀನವು, ಅದಕ್ಕೆ ಅಂತ್ಯವುಂಟು. ಅಧಿವೇದನಾದಿಯಿಂದಾಗುವುದು ಸಪತ್ನೀನಿಮಿತ್ತವಾದುದು, ಅದರಿಂದ ನೈರಂತರ್ಯಕ್ಕೆ ಭಂಗಬರುವುದು—ಆದರೂ ಮಧ್ಯೆ ಮಧ್ಯೆಯಾಗಲೀ ಕೊನೆಗಾಗಲೀ ಅದಕ್ಕೂ ಅಂತ್ಯವು ಸಂಭವಿಸಬಹುದು. ತ್ಯಾಗದಿಂದಲೂ ಮರಣದಿಂದಲೂ ಸಂಭವಿಸುವುದು ಶಾಶ್ವತವಾದುದು, ತ್ಯಾಗಸಂಭೂತವು ಆರಂಭದಲ್ಲಿ ಶಾಶ್ವತವಾಗಿ ಕಾಣುವುದು, ಅದೂ ಪಶ್ಚಾತ್ತಾಪಾದಿಗಳಿಂದ ಕೊನೆಮುಟ್ಟಬಹುದು. ಮರಣದಿಂದ ಪ್ರಾಪ್ತವಾಗುವುದಕ್ಕೆ ಅಂತ್ಯವೇ ಇಲ್ಲ. ಯಾವುದಾದರೂ ಕಾರ್ಯಕ್ಕಾಗಿ ಪತಿಯು ಪ್ರವಾಸಿಯಾಗಬೇಕಾದರೆ ತನ್ನ ವಿಪ್ರಯೋಗ ಕಾಲದಲ್ಲಿ ಪತ್ನಿಗೆ ಜೀವನಾರ್ಥವಾಗಿ ಧನಾದಿಸಂಗ್ರಹವನ್ನೋ ಅಥವಾ ಅನ್ನವಸ್ತ್ರಾದಿಗಳನ್ನು ಆರ್ಜಿಸುವ ವೃತ್ತಿಯನ್ನೋ ಕಲ್ಪಿಸಿ ಹೋಗಬೇಕು, ಇಲ್ಲದಿದ್ದರೆ ಅಭಾವದಿಂದ ಪೀಡಿತಳಾಗಿ ಶೀಲವಂತಳೇ ಆದರೂ ಗತ್ಯಂತರವಿಲ್ಲದೆ ಆಕೆಯು ಪರಪುರುಷರ ಕೈಗೆ ಸಿಕ್ಕಿ ಅವರ ಸಂಪರ್ಕಕ್ಕೆ ಈಡಾಗಬೇಕಾದೀತು.[1] ಪತಿಯು ಕಲ್ಪಿಸಿಟ್ಟುದರಿಂದಲೇ ಪತ್ನಿಯು ಜೀವಿಸುತ್ತಿರಬೇಕು, ಕಲ್ಪಿಸದಿದ್ದರೆ ನೂಲುವುದು ಮುಂತಾದ ಪರಾಶ್ರಯವಿಲ್ಲದ ಶುದ್ಧಶಿಲ್ಪದಿಂದ ಜೀವಿಸಬೇಕು.[2]

**ಅಧಿವೇದನ**ವೆಂದರೆ ಒಬ್ಬ ಪತ್ನಿಯಿದ್ದಹಾಗೆಯೇ ಮತ್ತೊಬ್ಬಳನ್ನು ಮದುವೆಯಾಗುವುದು.[3] ಮಾಡಿಕೊಳ್ಳುವವನು ಅಧಿವೇತ್ತನು, ಮೊದಲ ಹೆಂಡತಿಯು

1 ವಿಧಾಯ ವೃತ್ತಿಂ ಭಾರ್ಯಾಯಾಃ ಪ್ರವಸೇತ್ಕಾರ್ಯವಾನ್ನರಃ । ಅವೃತ್ತಿಕರ್ಷಿತಾ ಹಿ ಸ್ತ್ರೀಪ್ರದುಷ್ಯೇತ್ಸ್ಥಿತಿಮತ್ಯಪಿ ॥ಮ-ix-೭೪॥

2 ವಿಧಾಯ ಪ್ರೋಷಿತೇ ವೃತ್ತಿಂ ಜೀವೇನ್ನಿಯಮಮಾಸ್ಥಿತಾ । ಪ್ರೋಷಿತೇತ್ವವಿಧಾಯೈವ ಜೀವೇಚ್ಛಿಲ್ಪೈರಗರ್ಹಿತೈಃ ॥ಮ-ix-೭೫॥

3 ಅಧಿವೇದನಂ ಭಾರ್ಯಾಂತರಪರಿಗ್ರಹಃ ॥ಮಿತಾಕ್ಷರಾ-ಯಾ-1-೭೩॥ Supercession of wife.

ಅಧಿವಿನ್ನಳು. ಅಧಿವೇದನವೂ ಒಂದು ಪ್ರಕಾರದ ವಿಪ್ರಯೋಗವು. ವಿಪ್ರಯೋಗ ಪ್ರಕರಣದಲ್ಲಿ ತ್ಯಾಗವೆಂದರೆ ಧರ್ಮಕಾರ್ಯವಲ್ಲಿಯೂ ಉಪಭೋಗದಲ್ಲಿಯೂ ಬೇರೆ ಮಾಡುವುದು, ಮನೆಯಿಂದಾಚೆಗೆ ದಾಟಿಸಿಬಿಡುವುದಲ್ಲ.[4] ಅಧಿವೇದನದಲ್ಲಿ ತ್ಯಾಗವು ಉಪಭೋಗದಲ್ಲಿ ಮಾತ್ರವೇ, ಅದೂ ಅಪೂರ್ಣವಾದುದೇ, ಏಕೆಂದರೆ ಉಪಭೋಗವು ನಿಷಿದ್ಧವಲ್ಲ. ಪ್ರಬಲವಾದ ಪಾತಿತ್ಯಾದಿ ಮಹಾದೋಷದ ಅಭಾವದಲ್ಲಿ ಅಧಿವಿನ್ನಳಿಗೆ ಜ್ಯೇಷ್ಠತ್ವವೂ ಧರ್ಮಪತ್ನೀತ್ವವೂ ಉಳಿವೇ ಇರುವುದು, ಧರ್ಮಕಾರ್ಯದಲ್ಲಿ ಅವಳಿಗೆ ತ್ಯಾಗವಿಲ್ಲ.[5] ರಾಮಾಯಣದಲ್ಲಿ ಕೌಸಲ್ಯೆಯು ಅಧಿವಿನ್ನಳಾದರೂ ಅಶ್ವಮೇಧ ಪುತ್ರಕಾಮೇಷ್ಟಿಗಳಲ್ಲಿ ದಶರಥನೊಡನೆ ಸಹಕರಿಸಿದ್ದೇ ದೃಷ್ಟಾಂತ. ಧರ್ಮಶೀಲಳೂ ಸಂತಾನಸಂಪನ್ನಳೂ ಆದ ಪತ್ನಿಯ ಸದ್ಭಾವದಲ್ಲಿ ಮತ್ತೊಬ್ಬಳನ್ನು ಮದುವೆಯಾಗಬಾರದು.[6] ವಿವಾಹಕ್ಕೆ ಧರ್ಮಪಿತನೆನ್ನುವ ಶ್ವೇತಕೇತುವು ಪತಿಯನ್ನು ಅತಿಕ್ರಮಿಸಿ ವರ್ತಿಸುವ ಸ್ತ್ರೀಗೂ, ಸಾಧ್ವಿಯಾದ ಪತ್ನಿಯನ್ನತಿಕ್ರಮಿಸುವ ಪುರುಷನಿಗೂ ಭ್ರೂಣಹತ್ಯ ಪಾತಕವನ್ನು ವಿಧಿಸಿದ್ದಾನೆ.[7] ಇದು ಸಾಧಾರಣ ಧರ್ಮವು. ಪತ್ನಿಯು ಮದ್ಯಾಸಕ್ತಳೂ ದುರಾಚಾರಳೂ ಪ್ರತಿಕೂಲಳೂ ಅಪ್ರಿಯವಾದಿನಿಯೂ ದೀರ್ಘರೋಗಿಯೂ ಹಿಂಸಕಳೂ ವಂಚಕಳೂ ಧನನಾಶಕಳೂ ಬಂಜೆಯೂ ಸ್ತ್ರೀಪ್ರಜಳೂ (ಹೆಣ್ಣುಮಕ್ಕಳೇ ಆಗುವವಳೂ) ಪತಿಗೆ ಸರ್ವತ್ರವಾಗಿ ಅಹಿತವನ್ನಾಚರಿಸುವವಳೂ ಆದರೆ ಅಂಥಾ ಯಾವುದೊಂದು ದೋಷವಿದ್ದರೂ ಅಧಿವೇದನವನ್ನು ಮಾಡಿಕೊಳ್ಳಬಹುದೆಂದು ವಿಶೇಷ ವಚನಗಳಿವೆ.[8] ಮಾಡಿಕೊಂಡರೂ ಅಧಿವಿನ್ನಳಿಗೆ ಮೊದಲಿನಂತೆಯೇ ದಾನಮಾನಸತ್ಕಾರಗಳನ್ನು ಮಾಡಬೇಕು, ಮಾಡದಿರುವುದು ಮಹಾಪಾಪ

---

4 ತ್ಯಾಗಶ್ಚೋಪಭೋಗಧರ್ಮಕಾರ್ಯಯೋಃ ನ ತು ನಿಷ್ಕಾಸನಂ ಗೃಹಾತ್ತಸ್ಯಾಃ ॥ ಮಿತಾಕ್ಷರಾ-ಯಾ-i-೭೨॥

5 ಪ್ರಥಮಾ ಧರ್ಮಪತ್ನೀ ಸ್ಯಾತ್ ದ್ವಿತೀಯಾ ರತಿವರ್ಧನೀ ॥ . .ಧರ್ಮಪತ್ನೀ ಸಮಾಖ್ಯಾತಾ ನಿರ್ದೋಷಾ ಯದಿ ಸಾ ಭವೇತ್ ॥ದಕ್ಷಃ॥

6 ಧರ್ಮಪ್ರಜಾಸಂಪನ್ನೇಷು ದಾರೇಷು ನಾನ್ಯಾಂ ಕುರ್ವೀತ ॥ಆಪಸ್ತಂಭಃ॥ ದಾರಾ ಶಬ್ದವು ನಿತ್ಯಬಹುವಚನವಾದುದರಿಂದ ದಾರೇಷು ಅಂದರೆ ಒಬ್ಬ ಪತ್ನಿಯಿರುವಾಗ ಎಂದೇ ಅರ್ಥ; ಪುಂಭೂಮ್ನಿ ದಾರಾಃ ॥ಅಮರ॥

7 ವ್ಯುಚ್ಚರಂತ್ಯಾಃ ಪತಿಂ ನಾರ್ಯಾ ಅದ್ಯಪ್ರಭೃತಿ ಪಾತಕಂ । ಭ್ರೂಣಹತ್ಯಾ ಸಮಂ ಘೋರಂ ಭವಿಷ್ಯತ್ಯಸುಖಾವಹಂ ॥ ಭಾರ್ಯಾಂ ತಥಾ ವ್ಯುಚ್ಚರತಃ ಕೌಮಾರಬ್ರಹ್ಮಚಾರಿಣೀಂ । ಪತಿವ್ರತಾಮೇತದೇವ ಭವಿಷ್ಯತಿ ನ ಸಂಶಯಃ ॥ಮ. ಭಾ, ಆ. ಪ, ಅ. ೧೨೨॥

8 ಮದ್ಯಪಾಽಸಾಧುವೃತ್ತಾ ಚ ಪ್ರತಿಕೂಲಾ ಚ ಯಾ ಭವೇತ್ । ವ್ಯಾಧಿತಾ ವಾಧಿವೇತ್ತವ್ಯಾ ಹಿಂಸ್ರಾರ್ಥಘ್ನೀ ಚ ಸರ್ವದಾ ॥ಮ-ix-೮೦॥ ಸುರಾಪೀ ವ್ಯಾಧಿತಾ ಧೂರ್ತಾ ವಂಧ್ಯಾರ್ಥಘ್ನ್ಯಪ್ರಿಯಂವದಾ । ಸ್ತ್ರೀಪ್ರಸೂಶ್ಚಾಧಿವೇತ್ತವ್ಯಾ ಪುರುಷದ್ವೇಷಿಣೀ ತಥಾ ॥ ಯಾ-i-೭೩॥ ವ್ಯಾಧಿತಾ ದೀರ್ಘರೋಗಗ್ರಸ್ತಾ । ಧೂರ್ತಾ ವಿಸಂವಾದಿನೀ (ವಂಚಕೀ) । ವಂಧ್ಯಾ ನಿಷ್ಫಲಾ । ಅರ್ಥಘ್ನೀ ಅರ್ಥನಾಶಿನೀ । ಅಪ್ರಿಯಂವದಾ-ನಿಷ್ಠುರಭಾಷಿಣೀ । ಪುರುಷದ್ವೇಷಿಣೀ ಸರ್ವತ್ರಾಹಿತಕಾರಿಣೀ ॥ಮಿತಾಕ್ಷರಾ॥

ವಾಗುವುದು.[9] ಪೂಜ್ಯತ್ವವು ಸದ್ವೃತ್ತೆಳ ವಿಷಯವು, ಸುರಾಪಾನಾದಿ ಮಹಾದೋಷ ಗಳಿದ್ದರೆ ಧರ್ಮಪತ್ನೀತ್ವವಿಲ್ಲ.[10] ಅಧಿವೇಧನಕ್ಕೂ ಅವಧಿಯುಂಟು. ಬಂಜೆಯೆನ್ನ ಬೇಕಾದರೆ ಪ್ರಥಮಾರ್ತವದಿಂದ ಎಂಟನೇ ವರ್ಷದವರೆಗೂ, ಮೃತಪ್ರಜಳೆನ್ನುವುದಕ್ಕೆ ಹತ್ತನೇ ವರ್ಷದವರೆಗೂ, ಸ್ತ್ರೀಪ್ರಜಳೆನ್ನುವುದಕ್ಕೆ ಹನ್ನೊಂದರವರೆಗೂ, ಕಾದು ನೋಡಬೇಕು, ಅಪ್ರಿಯವಾದಿನಿಯೆನ್ನುವುದಕ್ಕೆ ಅವಧಿಯೇ ಬೇಕಿಲ್ಲ.[11] ದೀರ್ಘ ರೋಗಿಯು ಅನುಕೂಲಳೂ ಶೀಲವಂತಳೂ ಆಗಿದ್ದರೆ ಆಕೆಯ ಅನುಮತಿಯನ್ನು ಪಡೆದು ಬೇರೆ ಮದುವೆಯನ್ನು ಮಾಡಿಕೊಳ್ಳಬಹುದು, ಆದರೆ ಆಕೆಗೆ ಅಪಮಾನ ವಾಗಬಾರದು.[12] ಸಂಕ್ಷೇಪವೇನೆಂದರೆ ವಿವಾಹದ ಪ್ರಯೋಜನವು ಧರ್ಮವೂ ಸಂತಾನವೂ ಆದುದರಿಂದ ಪತ್ನಿಯಿಂದ ಅವು ಲಭಿಸದೇ ಇದ್ದರೆ ಮಾತ್ರ ದ್ವಿತೀಯ ವಿವಾಹವು ಉಕ್ತವಾಗಿದೆಯೇ[13] ಹೊರತು, ಕಾಮೋಪಭೋಗಕ್ಕಲ್ಲ.

ಪೂರ್ಣ ವಿಪ್ರಯೋಗವು ಮರಣದಿಂದಲೂ ಪೂರ್ಣ ತ್ಯಾಗದಿಂದಲೂ ಸಂಭವಿ ಸುವುದು. ಮರಣವು ದೈವಾಯತ್ತವಾದುದರಿಂದ ಅಪರಿಹಾರ್ಯವು ಅದು ಸಂಭವಿಸಿ ಆಕೆಯು ಅಪುತ್ರಳಾದರೆ ಪತಿಯ ಔರ್ಧ್ವದೈಹಿಕಗಳನ್ನೂ ಶ್ರಾದ್ಧಾದಿ ಗಳನ್ನೂ ಮಾಡಬೇಕು.[14] ಪೂರ್ಣ ತ್ಯಾಗವು ಪುರುಷಕಾರವು, ಅದಕ್ಕೆ ನಿಯಮ ಗಳಿವೆ. ಅದುಷ್ಟಳನ್ನು ತ್ಯಾಗಮಾಡಿದರೆ ರಾಜದಂಡಕ್ಕೊಳಗಾಗಬೇಕು.[15] ವಿಧೇಯಳೂ ದಕ್ಷಳೂ ಪುತ್ರಪ್ರಸವಿನಿಯೂ ಮಧುರಭಾಷಿಣಿಯೂ ಆದವಳನ್ನು ತ್ಯಜಿಸಿದರೆ ಪತಿಯ ಆಸ್ತಿಯ ಮೂರನೆಯ ಅಂಶವನ್ನೂ, ನಿರ್ಧನನಾದರೆ ಜೀವನಾಂಶ ವನ್ನೂ, ರಾಜನು (ಅಥವಾ ರಾಜನಿಯುಕ್ತನು) ಆಕೆಗೆ ಕೊಡಿಸಬೇಕು.[16] ಈ

---

9 ಅಧಿವಿನ್ನಾ ತು ಭರ್ತವ್ಯಾ ಮಹದೇನೋಽನ್ಯಥಾ ಭವೇತ್ ॥ಯಾ-i-೭೪॥

10 ಧರ್ಮಪತ್ನೀ ಸಮಾಖ್ಯಾತಾ ನಿರ್ದೋಷಾ ಯದಿ ಸಾ ಭವೇತ್॥ದಕ್ಷಃ॥ ಪೂಜ್ಯತ್ವಂ ಚಾಽವೃತ್ತಾವ್ಯತಿರಕ್ತಾಸು ದ್ರಷ್ಟವ್ಯಂ ॥ಮಾಧವೀಯೇ॥

11 ವಂಧ್ಯಾಽಷ್ಟಮೇಽಧಿವೇದ್ಯಾಬ್ದೇ ದಶಮೇ ತು ಮೃತಪ್ರಜಾ । ಏಕಾದಶೇ ಸ್ತ್ರೀ ಜನನೀ ಸದ್ಯಸ್ತ್ವಪ್ರಿಯವಾದಿನೀ ॥ಮ-ix.೮೧॥

12 ಯಾ ರೋಗಿಣೀ ಸ್ಯಾತ್ತು ಹಿತಾ ಸಂಪನ್ನಾ ಚೈವ ಶೀಲತಃ । ಸಾಽನುಜ್ಞಾಪ್ಯಾಧಿ ವೇತ್ತವ್ಯಾ ನಾವಮಾನ್ಯಾ ಚ ಕರ್ಹಿಚಿತ್ ॥ಮ-ix-೮೨॥

13 ಅಧಿವೇದನಂ ತು ದ್ವಿವಿಧಂ—ಧರ್ಮಾರ್ಥಂ ಕಾಮಾರ್ಥಂಚ । ತತ್ಪುತ್ರೋತ್ಪ ತ್ತ್ಯಾದಿ ಧರ್ಮಾರ್ಥೇ ಪೂರ್ವೋಕ್ತಾನಿ ಮದ್ಯಪೀತ್ಯಾದೀನಿ ನಿಮಿತ್ತಾನಿ ॥ಮಾಧವೀಯೇ॥

14 ಭರ್ತಾ ಭಾರ್ಯಾ ಪರಸ್ಪರಂ ॥

15 ಅದುಷ್ಟಾಂ ತು ತ್ಯಜನ್ ದಂಡ್ಯಃ (ದೂಷಯಂಸ್ತು) ಮೃಷಾಶತಮ್ ॥ಯಾ-i-೬೬॥ (ಹೊಸ ಕಾನೂನು ಪ್ರಕಾರ ತ್ಯಜಿಸಲೇ ಕೂಡದು).

16 ಆಜ್ಞಾಸಂಪಾದಿನೀಂ ದಕ್ಷಾಂ ವೀರಸೂಂ ಪ್ರಿಯವಾದಿನೀಂ । ತ್ಯಜನ್ ದಾಪ್ಯಸ್ತೃ ತೀಯಾಂಶಮದ್ರವ್ಯೋ ಭರಣಂ ಸ್ತ್ರಿಯಾಃ ॥ಯಾ-i-೭೬॥ ಈ ನಿಯಮವು ಅತ್ಯುಚ್ಚವೂ ಧೂರಗಾಮಿನಿಯೂ ಅಧುದು. ಇದೊಂದು ಪ್ರಬಲವಾದ ಶಿಕ್ಷೆ ಮತ್ತು ಸ್ವೇಚ್ಛಾಪ್ರವೃತ್ತಿಗೆ

ನಿಯಮವು ಪೂರ್ಣ ತ್ಯಾಗಕ್ಕೂ ಅಧಿವೇದನ ವಿಪ್ರಯೋಗಕ್ಕೂ ಸಹ ಅನ್ವಯಿಸುವುದು.

ದುಷ್ಟಳಲ್ಲದವಳನ್ನು ತ್ಯಾಗಮಾಡಬಾರದೆಂದು ಹೇಳಿದ್ದರಿಂದ, ದುಷ್ಟಳನ್ನು ತ್ಯಾಗಮಾಡಬಹುದೆಂದು ವ್ಯತಿರೇಕನ್ಯಾಯದಿಂದ ಸಿದ್ಧವಾಗುವುದು. ತ್ಯಾಗದೋಷವು ಸ್ತ್ರೀಗೆ ಕನ್ಯಾವಸ್ಥೆ[17] ಯಲ್ಲಿಯೂ ಪತ್ನ್ಯವಸ್ಥೆ[18] ಯಲ್ಲಿಯೂ ಪ್ರಾಪ್ತವಾಗಬಹುದು. ದೋಷವನ್ನು ಹೀಗೆ ವಿವರಿಸಿದ್ದಾರೆ:—ಅನ್ಯಪೂರ್ವಿಕತ್ವವೇ[19] ಆ ದೋಷವು. ಪುನರ್ಭೂ[20] ಸ್ವೈರಿಣಿ[21] ಎಂದಿಬ್ಬರು ಅನ್ಯಪೂರ್ವಿಕರು. ಪುನರ್ಭೂ ಎಂದರೆ ಮೊದಲು ಒಬ್ಬನನ್ನು ಮದುವೆಯಾಗಿ ಆಮೇಲೆ ಮತ್ತೊಬ್ಬನನ್ನು ಮದುವೆ ಮಾಡಿಕೊಂಡವಳು. ಅವಳು ಕ್ಷತಳೂ ಆಗಿರಬಹುದು ಅಕ್ಷತಳೂ ಆಗಿರಬಹುದು. ಕ್ಷತಳೆಂದರೆ ವಿವಾಹಕ್ಕೆ ಪೂರ್ವವೇ ಪುರುಷಸಂಬಂಧದಿಂದ ದೂಷಿತಳು. ಅಕ್ಷತಳೆಂದರೆ ಪುರುಷಸಂಬಂಧವಿಲ್ಲದೆ ಪೂರ್ವವಿವಾಹಸಂಸ್ಕಾರ ಮಾತ್ರದಿಂದ ದೂಷಿತಳು. ಸ್ವೈರಿಣಿಯೆಂದರೆ ವಿವಾಹವಾದಮೇಲೆ ಇನ್ನೂ ಕುಮಾರಿಯಾಗಿದ್ದಾಗಲೇ ಪತಿಯನ್ನು ತ್ಯಜಿಸಿ ಮತ್ತೊಬ್ಬನನ್ನು ಸೇರಿಕೊಂಡವಳು.[22] ಇಂಥಾ ಅನ್ಯಪೂರ್ವಿಕತ್ವವು ತ್ಯಾಗಾರ್ಹವಾದ ದೋಷವು. ತ್ಯಾಗದೋಷಗಳು ಇನ್ನೂ ಇವೆ—ಧರ್ಮಕ್ಕೆ ವಿಘ್ನ ಮಾಡುವುದೂ ಪತಿವ್ರತೆಯಲ್ಲದೇ ಇರುವುದೂ ಇಂಥಾ ದೋಷಗಳು (ಇತರ ತ್ಯಾಗದೋಷಗಳನ್ನು ಹಿಂದೆಯೇ ಹೇಳಿದೆ) ಧರ್ಮವನ್ನು ರಕ್ಷಿಸುವುದಕ್ಕಾಗಿ ಅಂಥಾವ

---

ಪ್ರತಿಬಂಧಕವು. ಅಧಿವಿನ್ನಳಿಗಾಶ್ವಾಸನೆಯು ಮತ್ತು ಹೊಸಬಳಿಗೆ ನಿವರ್ತನ ರೂಪದ ಪ್ರತಿಬಂಧಕವು. ಇದು ಪ್ರಚಾರದಲ್ಲಿರುವ ಮಿತಾಕ್ಷರದ ನ್ಯಾಯವು. ಯಾವ ನ್ಯಾಯಾಸ್ಥಾನವೂ ಗಮನಿಸದಿರುವುದು ಶೋಚನೀಯವು.

17 ಮದುವೆಯಾಗುವುದಕ್ಕೆ ಮೊದಲ ಅವಸ್ಥೆ—ಕನ್ಯಾವಸ್ಥೆ (Verginhood)

18 ಮದುವೆಯಾಗಿ ಪತ್ನೀತ್ವವು ಪ್ರಾಪ್ತವಾದ ಮೇಲಣ ಅವಸ್ಥೆ. (Married life)

19 ಪತಿಗಿಂತಲೂ ಮೊದಲೇ ಬೇರೊಬ್ಬನೊಡನೆ ಸಂಗಮಾಡಿದವಳು, ಅಥವಾ ಮದುವೆಯಾಗಿದ್ದವಳು.

20 ಎರಡನೇ ಆವೃತ್ತಿ ಮದುವೆ ಮಾಡಿಕೊಂಡವಳು. ಪುನರ್ಭೂ(ರ್ದಿಧಿಷೂ) ರೂಢಾದ್ವಿಃ ॥ಅಮರ॥

21 ಗಂಡನನ್ನು ಕನ್ಯಾವಸ್ಥೆಯಲ್ಲಿಯೇ ತ್ಯಜಿಸಿ ಬೇರೊಬ್ಬನ ಸಂಗಮಾಡಿದವಳು.

22 ಅನನ್ಯಪೂರ್ವಾ ಪರಿಣೇಯಾ ಇತ್ಯುಕ್ತ್ವಾ ಅನ್ಯಪೂರ್ವಾ ಕೀದೃಶೀತ್ಯಾಹ॥ ಅಕ್ಷತಾ ಚ ಕ್ಷತಾ ಚೈವ ಪುನರ್ಭೂಸ್ಸಂಸ್ಕೃತಾ ಪುನಃ । ಸ್ವೈರಿಣೀ ಯಾ ಪತಿಂ ಹಿತ್ವಾ ಸವರ್ಣಂ ಕಾಮತಶ್ಶ್ರಯೇತ್ ॥ಯಾ-i-೬೭॥ ಅನ್ಯಪೂರ್ವಾ ದ್ವಿವಿಧಾ ಪುನರ್ಭೂಸ್ಸ್ವೈರಿಣೀಚೇತಿ । ಪುನರ್ಭೂರಪಿದ್ವಿವಿಧಾಕ್ಷತಾಚಾಕ್ಷತಾಚ। ತತ್ರ ಕ್ಷತಾ ಸಂಸ್ಕಾರಾತ್ಪ್ರಾಗೇವ ಪುರುಷಸಂಬಂಧ ದೂಷಿತಾ । ಅಕ್ಷತಾ ಪುನಃ ಸಂಸ್ಕಾರದೂಷಿತಾ । ಯಾ ಪುನಃ ಕೌಮಾರೇ ಪತಿಂ ತ್ಯಕ್ತ್ವಾ ಕಾಮತಸ್ಸವರ್ಣಮಾಶ್ರಯತಿ ಸಾ ಸ್ವೈರಿಣೀ ॥ಮಿತಾಕ್ಷರಾ॥

ಳನ್ನು ತ್ಯಾಗಮಾಡಬಹುದು.[23] ವ್ಯಭಿಚಾರಿಣಿ[24] ಯನ್ನು ಧರ್ಮಕಾರ್ಯದಲ್ಲಿಯೂ ಉಪಭೋಗದಲ್ಲಿಯೂ ತ್ಯಜಿಸಿ, ಅವಳಿಗೆ ಕುಟುಂಬದಲ್ಲಿದ್ದ ಅಧಿಕಾರವನ್ನು ತಪ್ಪಿಸಿ, ಗಂಧಾದಿಗಳಿಂದಲೂ ಒಳ್ಳೆಯ ವಸ್ತ್ರಗಳಿಂದಲೂ ಆಭರಣಗಳಿಂದಲೂ ಅಲಂಕಾರ ಮಾಡಿಕೊಳ್ಳಲು ಬಿಡದೆ, ಮಂಚಾದಿಗಳಿಲ್ಲದೆ ನೆಲದಮೇಲೆ ಮಲಗುವಂತೆ ಮಾಡಿ, ಪ್ರಾಣಾಧಾರಕ್ಕೆ ಬೇಕಾದ ಅನ್ನವಸ್ತ್ರಾದಿಗಳನ್ನು ಕೊಟ್ಟು, ಮನೆಯಲ್ಲಿಯೇ ಇರಿಸಿ ಕೊಳ್ಳಬೇಕು, ಮನೆಯಿಂದಾಚೆಗೆ ದಾಟಿಸಬಾರದು;[25] ಶುದ್ಧಳಾಗುತ್ತಾಳೆಂದಲ್ಲ, ಪಶ್ಚಾತ್ತಾಪದಿಂದ ವೈರಾಗ್ಯವು ಹುಟ್ಟಿಯೋ ಅಥವಾ ವ್ಯಭಿಚಾರಕ್ಕೆ ಅವಕಾಶ ವಿಲ್ಲದೆಯೋ ಅಕಾರ್ಯವು ಪುನರಾವೃತ್ತಿಯಾಗದಿರಲೆಂದು ಮನೆಯಲ್ಲಿಯೇ ಇರಿಸಿ ಕೊಳ್ಳುವುದರ ಅಭಿಪ್ರಾಯವು. ಪರದಾರಗಾಮಿಯಾದ ಪುರುಷನಿಗೆ ಯಾವ ವ್ರತವೋ ಅದನ್ನೇ ಪರಪುರುಷಗಾಮಿಗೂ ವಿಧಿಸಿದೆ.[26]

ಇಂಥಾ ನಿಯಮಗಳನ್ನು ಮಾಡಿಟ್ಟು ಸ್ತ್ರೀಯರ ಸ್ಥಾನಮಾನಾದಿಗಳಿಗೂ ಸುಖಸಂತೋಷಗಳಿಗೂ ವಸ್ತ್ರಾಲಂಕಾರಾದಿಗಳಿಗೂ ಚ್ಯುತಿಯಾಗದಂತೆ ನಡೆಯ ಬೇಕೆಂದು ವಿಧಾಯಕ ಮಾಡಿದ್ದಾರೆ. ಅತ್ಯಾಚಾರ ದುರಾಚಾರಾದಿ ವೃತ್ತದೋಷ ದಿಂದ ದುಸ್ಸಹವಾದ ಸಂಕಟವೊದಗಿದರೂ ಕೂಡ ಅಂಥಾ ಸ್ತ್ರೀಯರನ್ನೂ ಮನೆ ಯಲ್ಲಿಯೇ ಅಥವಾ ಮನೆಯ ಸಮೀಪದಲ್ಲಿಯೇ ಇಟ್ಟುಕೊಂಡು ಅವರಿಗೆ ದೇಹ ಭರಣಕ್ಕೆ ಬೇಕಾದ ಅನ್ನವಸ್ತ್ರಗಳನ್ನು ಕೊಟ್ಟು ದುರಾಚಾರವು ನಡೆಯುತ್ತಲೇ ಇರದಂತೆ ರಕ್ಷಣೆ ಮಾಡಬೇಕೆಂದೂ ವಿಧಾಯಕಮಾಡಿದ್ದಾರೆ. ತ್ಯಾಗಕ್ಕೆ ಉಕ್ತವಾದ ಸಂದರ್ಭವೊದಗಿದರೆ ಮನೆಯಿಂದಾಚೆಗೆ ದಾಟಿಸಬಾರದೆಂದೂ ಉಪಭೋಗಸಂಬಂಧ ವನ್ನು ಮಾತ್ರ ತ್ಯಾಗಮಾಡಬೇಕೆಂದೂ ಇನ್ನೂ ಮೀರಿಬಂದು ಧರ್ಮಲೋಪ ವಾಗುವ ಸಂಭವವೊದಗಿದರೆ ಧರ್ಮಕಾರ್ಯದಲ್ಲಿಯೂ ತ್ಯಾಗಮಾಡಬೇಕು ಎಂದಿ ದ್ದಾರೆ. ಸಂಬಂಧವಿಚ್ಛಿತ್ತಿರೂಪದ ಸಂಪೂರ್ಣ ತ್ಯಾಗವನ್ನಾಗಲೀ ನಿಷ್ಕಾರಣ ವಾಗಿಯೂ ಸ್ವೇಚ್ಛೆಯಾಗಿಯೂ ತ್ಯಾಗಮಾಡಬಹುದೆಂದಾಗಲೀ, ತ್ಯಾಗಮಾಡಿದ ಮೇಲೆ ಭರಣಭಾರವಿಲ್ಲವೆಂದಾಗಲೀ, ಹೇಳಿಲ್ಲ. ಅಧಿವೇದನವು ಉಕ್ತವಾಗಿದ್ದರೆ ಅದಕ್ಕೆ ವಿಶೇಷ ಕಾರಣಗಳಿರಬೇಕೆಂದೂ ಧರ್ಮಪ್ರಯೋಜನಕ್ಕಾಗಿ ಮಾತ್ರ ನಡೆಯ

---

23 ಧರ್ಮವಿಘ್ನಕರೀಂ ಭಾರ್ಯಾಮಸತೀಂ (ಜಾತಿರೋಗಿಣೀಂ)। ತ್ಯಜೇದ್ಧರ್ಮಸ್ಯ ರಕ್ಷಾರ್ಥಂ (ತಥೈವಾಪ್ರಿಯವಾದಿನೀಂ) ॥ಬ್ರಹ್ಮಪುರಾಣೇ॥

24 ಪತಿಯು ಜತೆಯಲ್ಲಿದ್ದೂ ಪರಪುರುಷನ ಸಂಗಮಾಡುವವಳು. (adulteress).

25 ಹೃತಾಧಿಕಾರಾಂ ಮಲಿನಾಂ ಪಿಂಡಮಾತ್ರೋಪಜೀವಿನೀಂ। ಪರಿಭೂತಾಮಧಃ ಶಯ್ಯಾಂ ವಾಸಯೇದ್ವ್ಯಭಿಚಾರಿಣೀಂ ॥ಯಾ-i-೭೦॥ ಮಲಿನಾಂ ಅಂಜನಾಭ್ಯಂಜನಶುಭ್ರ ವಸ್ತ್ರಾಭರಣಶೂನ್ಯಾಂ ॥ಮಿತಾಕ್ಷರಾ॥

26 ವೈರಾಗ್ಯಜನನಾರ್ಥಂ, ನತುಶುದ್ಧ್ಯರ್ಥಂ। "ಯತ್ಪುಂಸಃ ಪರದಾರೇಷು ತಚ್ಚೈ ನಾಂ ಕಾರಯೇದ್ವ್ರತಂ" ಇತಿಪೃಥಕ್ಪ್ರಾಯಶ್ಚಿತ್ತೋಪದೇಶಾತ್ ॥ಮಿತಾಕ್ಷರಾ॥ The principle of "Don't kill body and soul together"

ಬಹುದೆಂದೂ ಕಾಮೋಪಭೋಗೇಚ್ಛೆಯಿಂದ ನಡೆಯತಕ್ಕದ್ದಲ್ಲವೆಂದೂ ಹೇಳಿದ್ದಾರೆ. ಅಂತೂ ಒಟ್ಟಿನಲ್ಲಿ ಪುರುಷನ ಮೇಲೆ ವಿಶೇಷ ಭಾರವನ್ನು ಹಾಕಿ ದುಷ್ಟಸ್ತ್ರೀಯರ ವಿಷಯದಲ್ಲಿಯೂ ದಾಕ್ಷಿಣ್ಯವನ್ನು ತೋರಿಸಿದ್ದಾರೆ. ಪುರುಷನಿಗೆ ಸ್ವೇಚ್ಛಾವಿಹಾರ ವನ್ನೂ ಕಾಮೋಪಭೋಗವನ್ನೂ ಹೇಳಿಲ್ಲ, ನಿಷೇಧ ಮಾಡಿದ್ದಾರೆ. ನಿಯಮೋ ಲ್ಲಂಘನವೂ ಅತ್ಯಾಚಾರವೂ ನಡೆದರೆ ಅದು ಪುರುಷಕಾರವೇ ವಿನಾ ಶಾಸ್ತ್ರಕಾರರ ಮತವಲ್ಲ.

## ೩. ಸ್ತ್ರೀಧರ್ಮ

ಸ್ತ್ರೀಧರ್ಮವನ್ನು ಪುರುಷರು ಬರೆಯುವುದೂ ಒಂದು ಕಷ್ಟದ ಪ್ರಸಂಗವೇ. ಯಾರದೇನು ತೋರ ಎಂಬ ಪ್ರವಾದವಿದ್ದಿರುವಾಗ ಸ್ತ್ರೀಧರ್ಮವನ್ನು ಸ್ತ್ರೀಯರೇ ಬರೆಯುವುದು ಚೆನ್ನು. ನಾವು ಬರೆಯದಿದ್ದರೆ ಧರ್ಮಸಂಗ್ರಹಕ್ಕೆ ಲೋಪವಾಗು ವುದು. ಇದರಮೇಲೆ ಉಕ್ತವಾದುದನ್ನೇ ಅನುವಾದ ಮಾಡುವುದೂ, ಸರ್ವರಿಗೂ ವಿದಿತವಾಗಿರುವ ಸದಾಚಾರಗಳನ್ನೇ ಪುನರಾವೃತ್ತಿ ಮಾಡುವುದೂ, ಮಾತ್ರವೇ ಸಂಗ್ರಹಕಾರನ ಕರ್ತವ್ಯವು. ಪುರುಷರಿಗುಕ್ತವಾದ ಧರ್ಮದಿಂದಲೇ ಸ್ತ್ರೀಧರ್ಮವೂ ಸೂಚಿತವಾಗಿದೆ. ಆದುದರಿಂದ ಇದನ್ನೂ ಬರೆಯಲೇಬೇಕು.

(1) ಸಂಯೋಗಧರ್ಮ—

ಋಗ್ವೇದದಲ್ಲಿ ಸ್ತ್ರೀಧರ್ಮವು ಉದಾತ್ತವಾಗಿ ಉಕ್ತವಾಗಿದೆ. ಆ ಮಂತ್ರಕ್ಕೆ ಸೂರ್ಯಾಸಾವಿತ್ರಿಯೆಂಬ ಬ್ರಹ್ಮವಾದಿನಿಯೇ ಋಷಿಯು. ಆಕೆಯ ಆರ್ಷವಾದುದ ರಿಂದ ಆ ನಲವತ್ತೇಳು ಋಕ್ಕುಗಳಿಗೆ ಸೂರ್ಯಾಸೂಕ್ತವೆಂದು ಹೆಸರು ಈ ಸೂಕ್ತದ ಮಂತ್ರಗಳೇ ವಿವಾಹದ ಪ್ರಧಾನ ಕರ್ಮಗಳಲ್ಲೆಲ್ಲ ಬಳಸಲ್ಪಡುತ್ತವೆ. ಈ ಸೂಕ್ತದ ಜತೆಗೆ ಕೆಲವು ಖಿಲಮಂತ್ರಗಳೂ ಸಪ್ತಪದಿಯಲ್ಲಿ ಬಳಸುವ ವಾಕ್ಯಗಳೂ ಉದಾತ್ತ ವಾಗಿಯೇ ಇವೆ. ಈ ಮಂತ್ರಗಳಿಂದ ವ್ಯಕ್ತವಾಗುವ ಸ್ತ್ರೀಯ ಧರ್ಮವೂ ಚಾರಿತ್ರವೂ ಹೀಗಿವೆ:—ಸ್ತ್ರೀಯು ಸೌಮ್ಯಳೂ ಸೌಮನಸ್ಯಳೂ ತೇಜಸ್ವಿನಿಯೂ ವರ್ಚಸ್ವಿನಿಯೂ ಯಶಸ್ವಿನಿಯೂ ಸುಮಂಗಲಿಯೂ ಸೌಭಾಗ್ಯವತಿಯೂ ಸದ್ವೃತ್ತಳೂ ಪತಿವ್ರತೆಯೂ ಧರ್ಮಪತ್ನಿಯೂ ಪತಿಗೆ ಅಹಿತವನ್ನಾಚರಿಸದವಳೂ ಪತಿಯೊಡನೆ ಏಕದೇಹನ್ಯಾಯದಿಂದ ನಡೆಯುವವಳೂ ದೇವತೆಗಳನ್ನಾರಾಧಿಸುವವಳೂ ಗುರು ಹಿರಿಯರನ್ನು ಸೇವಿಸುವವಳೂ ಕಿರಿಯರನ್ನು ಆದರಿಸಿ ಪೋಷಿಸುವವಳೂ ಭೃತ್ಯರ ವಿಷಯದಲ್ಲಿ ದಾಕ್ಷಿಣ್ಯದಿಂದ ನಡೆಯುವವಳೂ ಪಶುಗಳ ಮೇಲೆ ದಯಾವಂತಳೂ ಆಗಿರಬೇಕು. ತೌರಿನ ವ್ಯಾಮೋಹವೇ ಹೆಚ್ಚೆಂದು ಭಾವಿಸದೆ ಪತಿಕುಲದಲ್ಲಿ ಐಕ್ಯ ಭಾವವನ್ನು ಹೊಂದಿ ಅಲ್ಲೇ ಶಾಶ್ವತವಾಗಿ ಬಾಳಬೇಕೆಂಬ ಸ್ಥಿರಬುದ್ಧಿಯಿಂದ ಗೃಹ ಸ್ವಾಮಿನಿಯಂತೆ ಬಾಳಿ ಅತ್ತೆಮಾವ ಮುಂತಾದ ಹಿರಿಯರನ್ನೂ ಮೈದುನನಾದಿನಿ ಮುಂತಾದ ಕಿರಿಯರನ್ನೂ ಕಾಪಾಡಿ ಅವರೆಲ್ಲರಿಂದಲೂ ಕೊಂಡಾಡಿಸಿಕೊಂಡು

ಅಲ್ಲಿಯೇ ನೆಲೆಸಿ ಪತಿಯನ್ನಗಲದೆ ಪೂರ್ಣಾಯುಷ್ಯವನ್ನು ವ್ಯತೀತಮಾಡಬೇಕು. ಪುತ್ರಪೌತ್ರರೊಡನೆ ಸಂತೋಷವಾಗಿ ನಲಿಯುತ್ತಾ ಪತಿಯಿಂದ ಪೋಷ್ಯಳಾಗಿ ಸ್ಥಿರವಾಗಿರಬೇಕು. ಇಂದ್ರಾಣಿಯಂತೆ ಕುಟುಂಬಿನಿಯೂ ಅಧೀಶ್ವರಿಯೂ ಆಗಿಯೂ ಶ್ರೀಯಂತೆ ಸಂಪದಭ್ಯುದಯ ಯುತಳಾಗಿಯೂ ಗೌರಿಯಂತೆ ಸೌಭಾಗ್ಯವತಿಯೂ ಪತಿಯರ್ಧಾಂಗಿಯೂ ಆಗಿಯೂ ಅನಸೂಯೆ ಅರುಂಧತಿ ಮೈತ್ರಿಯರಂತೆ ಸಾಧ್ವಿ ಯಾಗಿಯೂ ಬಾಳಬೇಕು. ಹೀಗೆ ಆದರ್ಶದಾಂಪತ್ಯವನ್ನೂ ಗಾರ್ಹಸ್ಥ್ಯವನ್ನೂ ಪಾತಿವ್ರತ್ಯವನ್ನೂ ನಿರ್ವಹಿಸುತ್ತಾ ಹುಟ್ಟಿದ ಸೇರಿದ ಉಭಯ ಕುಲಗಳಿಗೂ ಆನಂದ ವಾಗುವಂತೆ ಬಾಳಬೇಕು. ಇದು ಯಾರಿಗೆ ಅಭೀಷ್ಟವಲ್ಲ? ಇದಕ್ಕಿಂತಲೂ ಇನ್ನೇನಾಗಬೇಕು? ಸಪ್ತಪದಿಯಲ್ಲಿ ಪತಿಯು ವಧುವನ್ನು ಕುರಿತು ಹೇಳುವುದೇ ನೆಂದರೆ—ನಮಗೆ ಅನ್ನಾದಿಗಳನ್ನಿತ್ತು ಪೋಷಿಸುವವಳಾಗಬೇಕು, ನನಗೆ ಬಲವಾಗಿರ ಬೇಕು, ನನ್ನ ಧನವನ್ನು ರಕ್ಷಿಸಬೇಕು, ನನಗೆ ಸುಖಪ್ರದಳಾಗಿರಬೇಕು, ಸಂತಾನವತಿ ಯಾಗಬೇಕು, ನನ್ನೊಡನೆ ಋತುಭೋಗಗಳನ್ನು[1] ಅನುಭವಿಸಬೇಕು, ನನಗೆ ಸಖಿ ಯಾಗಿರಬೇಕು, ಈ ಒಂದೊಂದು ಕೋರಿಕೆಗಳನ್ನೂ ಅನುಮೋದಿಸಿ ಒಂದೊಂದು ಹೆಜ್ಜೆಯನ್ನಿಡು ಎಂದು. ಅನ್ನದಾತಳೂ ಬಲವರ್ಧಕಳೂ ಧನಪೋಷಕಳೂ ಸುಖ ಭಾವಿನಿಯೂ ಸಂತಾನವತಿಯೂ ಭೋಗಾರ್ಹಳೂ ಸಖಿಯೂ (ಅಂದರೆ ಸಮಾನ ಸ್ಕಂಧಳೂ) ಆಗಿರುತ್ತೇನೆಂದು ಅನುಮೋದಿಸಿ ವಧುವೂ ಒಂದೊಂದು ಹೆಜ್ಜೆಯನ್ನಿಡು ವುದು. ಪೂರ್ವಪಕ್ಷಕಾರರು ಆರೋಪಿಸುವಂತೆ ದಾಸಿಯೂ ಭೋಗಿನಿಯೂ ವಿಕ್ರಯ್ಯವಸ್ತುವೂ ಆಗಿರಬೇಕೆಂದು ವರನೂ ಕೋರುವುದಿಲ್ಲ, ವಧುವೂ ಅಂಥಾ ಬಾಳ್ವಿಗೆ ಒಪ್ಪುವುದಿಲ್ಲ. ಉದಾತ್ತವಾದ ಈ ಸಮಭಾವವನ್ನೂ, ಐಕ್ಯಭಾವ ವನ್ನೂ, ಕೀಟಲೆಗೂ ಅಲ್ಲಗಳೆಯಬಾರದು.

**ಮನುವು** ಸ್ತ್ರೀಧರ್ಮವನ್ನು ಹೀಗೆ ಹೇಳಿದ್ದಾನೆ—ಸ್ತ್ರೀಯರು ಸ್ವತಂತ್ರಿಸಿ ಯಾವುದನ್ನೂ ಮಾಡಬಾರದು, ಯಾವುದನ್ನೂ ಎಂದರೆ ಎಲ್ಲವನ್ನೂ ಎಂದರ್ಥವಲ್ಲ, ಹಿರಿಯರು ಬೇಡವೆಂಬುವನ್ನು ಅಥವಾ ಅನುಮೋದಿಸದಂಥಾವುಗಳನ್ನು ಸ್ವತಂತ್ರಿಸಿ ಮಾಡಬಾರದೆಂದರ್ಥವು. ಬಾಲ್ಯದಲ್ಲಿ ತಂದೆಯ ವಶದಲ್ಲಿಯೂ ಯೌವನದಲ್ಲಿ ಪತಿಯ ವಶದಲ್ಲಿಯೂ ಪತಿಯು ಗತಿಸಿದರೆ ಆಮೇಲೆ ಪುತ್ರರ ವಶದಲ್ಲಿಯೂ ಇರಬೇಕು, ಸ್ವತಂತ್ರವಾಗಿರಬಾರದು. ತಂದೆ ಗಂಡ ಮಕ್ಕಳು ಮುಂತಾದವರನ್ನಗಲಿ ಬೇರೆ

1 ಋತುಶಬ್ದೇನ ತತ್ರಸ್ಥಾ ಭೋಗ್ಯಾ ಲಕ್ಷ್ಯಂತೇ ॥ ವಸಂತಾದಿ ಋತುಗಳ ಸುಖದ ಉಪಭೋಗವೇ ಲಕ್ಷ್ಯ. ಋತುಶಬ್ದಕ್ಕೆ ರಜೋದರ್ಶನವೆಂದರ್ಥಮಾಡಿ ತತ್ಪ್ರಯುಕ್ತವಾದ ಕಾಮೋಪಭೋಗವೇ ಲಕ್ಷ್ಯವೆಂದರೂ ಪತ್ನಿಯು ಭೋಗಿನಿಯೆಂದಪಾರ್ಥ ಮಾಡಬಾರದು. ಏಕೆಂದರೆ ಆ ಭೋಗವು ಉಭಯತ್ರರಿಗೂ ಲಭಿಸುವುದರಿಂದ ಪತ್ನಿಯನ್ನು ಮಾತ್ರ ಭೋಗಿನಿ ಯೆನ್ನುವುದು ಯುಕ್ತವೂ ಅಲ್ಲ, ಮತ್ತು ಪತ್ನಿಗೆ ತೋರುವ ಇತರ ಅಧಿಕಾರಾದಿಗಳಿಂದ ಈ ಪ್ರಕರಣದಲ್ಲಿ ಆ ಅರ್ಥಕ್ಕೆ ಅವಕಾಶವೂ ಇಲ್ಲ.

ಇದ್ದರೆ ಉಭಯ ಕುಲಕ್ಕೂ ಕಳಂಕವು ಪ್ರಾಪ್ತವಾಗುವುದು. ಸದಾ ಹೃಷ್ಟಳಾಗಿರಬೇಕು, ಗೃಹಕೃತ್ಯಗಳಲ್ಲಿ ದಕ್ಷಳಾಗಿರಬೇಕು, ಗೃಹೋಪಕರಣಗಳನ್ನು ಶುದ್ಧಿಮಾಡಿ ಯಥಾಸ್ಥಾನದಲ್ಲಿಡಬೇಕು, ವ್ಯಯದಲ್ಲಿ ಹಿಡಿತವಿರಬೇಕು, ತಂದೆಯಾಗಲೀ ತಂದೆಯ ಅನುಮತಿಯಿಂದ ಅಥವಾ ಅಭಾವದಲ್ಲಿ ಅಣ್ಣನಾಗಲೀ ಯಾರಿಗೆ ಕೊಟ್ಟು ಮದುವೆ ಮಾಡುವನೋ ಬದುಕಿರುವವರೆಗೂ ಅವನ ಶುಶ್ರೂಷೆಯನ್ನು ಮಾಡಬೇಕು, ಮರಣಾನಂತರ ಅವನ ಪಾರಲೌಕಿಕ ಕ್ರಿಯೆಗಳಿಗೆ ತೊಂದರೆ ಕೊಡಬಾರದು. ಸ್ತ್ರೀಗೆ ವಿವಾಹಸಂಸ್ಕಾರವನ್ನು ಮಾಡುವ ಪತಿಯಿಂದ ಇಹವೂ ಪರವೂ ಎರಡೂ ಲಭಿಸುವುದು. ಪತಿಯು ದುಶ್ಶೀಲನೂ ಕಾಮುಕನೂ ಗುಣಹೀನನೂ ಆದರೂ ಸಾಧ್ವಿಯಾದ ಪತ್ನಿಯು ಅವನನ್ನು ದೇವರೆಂದು ಭಾವಿಸಿ[2] ಸತತವಾಗಿ ಉಪಚರಿಸಬೇಕು.

---

2 ದುಶ್ಶೀಲನನ್ನೂ ಕಾಮುಕನನ್ನೂ ದೇವರೆನ್ನಬೇಕೆಂಬುದು ಮೀಮಾಂಸಕ್ಕೆ ಸ್ಥಾನವು. ದುಶ್ಶೀಲನು ದೇವರೇ, ಕಾಮುಕನು ಪೂಜ್ಯನೇ, ಸಾಧ್ವಿಯು ದುರಾಚಾರಿಗೆ ಪ್ರಿಯವಾದ ದುರ್ವರ್ತನಕ್ಕೆ ಸಹಾಯಕಳಾಗಬೇಕೇ, ಅಥವಾ ಸದಾಚಾರವಿಹಿತವಾದುದನ್ನೇ ಮಾಡಿದರೆ ಅದು ಅವನಿಗೆ ಪ್ರಿಯವಾಗುವುದೋ, ಅಂಥಾ ಅಪ್ರಿಯವನ್ನಾಚರಿಸಬಹುದೋ, ಇಂಥಾ ಧರ್ಮಸಂಕಟಗಳೊದಗುವುದರಿಂದ ನಿರ್ವಹಿಸುವುದೆಂತು ಎಂದು ಪೂರ್ವಪಕ್ಷ ಮಾಡಬಹುದು. ಪೂರ್ವಪಕ್ಷದಲ್ಲೆರಡು ಆಕ್ಷೇಪಗಳು ಅಡಕವಾಗಿವೆ—ದುರಾಚಾರಿಯನ್ನು ದೇವರೆಂದು ಭಾವಿಸುವುದು ಸಾಧ್ಯವೇ ಎಂಬುದೊಂದು, ದುರಾಚಾರಿಯನ್ನು ಸದಾಚಾರದಿಂದ ಒಲಿಸುವುದು ಸಾಧ್ಯವೆ ಎಂಬುದಿನ್ನೊಂದು. ಮೊದಲನೆಯ ಆಕ್ಷೇಪವು ಪತಿಯ ಮಾನ್ಯತ್ವಕ್ಕೂ ಪತ್ನಿಯ ಪಾತಿವ್ರತ್ಯಕ್ಕೂ ಸಂಬಂಧಪಟ್ಟ ವಿಚಾರವು. ಪಾತಿವ್ರತ್ಯವು ಸ್ತ್ರೀಗೆ ಸ್ವಧರ್ಮ, ಅದನ್ನು ಒಂದು ಪ್ರಕರಣವಾಗಿಯೇ ಮುಂದೆ ವಿಮರ್ಶಿಸಲಾಗುವುದು. 'ಪತಿಯ ಮಾನ್ಯತ್ವವನ್ನು ಮಾತ್ರ ವಿಮರ್ಶಿಸೋಣ. "ಮಂತ್ರಸಂಸ್ಕಾರಕೃತ್ಪತಿಃ"—ಮಂತ್ರಗಳಿಂದ ವಿವಾಹಸಂಸ್ಕಾರವನ್ನು ಮಾಡುವವನು ಪತಿಯು ಎಂದು ಮನುವಾಕ್ಯವಿದೆ.॥v-೧೫೩॥ ಸ್ತ್ರೀಗೆ ಜಾತಕರ್ಮಾದಿಗಳೆಲ್ಲವೂ ಅಮಂತ್ರಕವಾಗಿಯೇ ನಡೆಯುವುದು(ಮ-ii-೬೬), ವಿವಾಹವೊಂದೇ ಸಮಂತ್ರಕಸಂಸ್ಕಾರವು(ಮ-ii-೬೭). ವಿವಾಹವು ಸ್ತ್ರೀಗೆ ಉಪನಯನದಂತೆ. ಅಂಥಾ ಸಂಸ್ಕಾರವನ್ನು ಮಾಡುವ ಪತಿಯು ಆಚಾರ್ಯಸ್ಥಾನೀಯನು(ಯಾ-1-೩೪). ಆಚಾರ್ಯನು ದೇವರೆಂದೇ ಭಾವನೆ. "ಆಚಾರ್ಯದೇವೋಭವ" ಎಂದು ಶ್ರುತ್ಯನುಶಾಸನವೇ ಇದೆ(ತೈ. ಉ.). ಈರೀತಿಯಾಗಿ ಸಂಸ್ಕಾರಕರಣದಿಂದ ಪತಿಗೆ ದೇವತ್ವವು, ಕೃತಕವೂ ಔಪಚಾರಿಕವೂ ಅಲ್ಲ. ಆಚಾರ್ಯ ಪಿತೃ ಮಾತೃ ಜ್ಯೇಷ್ಠಭ್ರಾತೃಗಳಿಂದ ತೊಂದರೆಯು ಸಂಭವಿಸಿದರೂ ಅವರನ್ನು ಅಪಮಾನಮಾಡಬಾರದು(ಮ-ii-೨೨೫). ಮಾತಾಪಿತ್ರಾದಿಗಳಲ್ಲಿ ದೇವಭಾವನೆಯು ಗುಣೋತ್ಕರ್ಷದಿಂದಲ್ಲ, ಮಾತಾಪಿತ್ರಾದಿಸಂಬಂಧದ ಆಧಾರದಮೇಲೆಯೇ. ಆಚಾರ್ಯನಲ್ಲಿ ದೇವಭಾವನೆಯೂ ಅವನಿಂದ ಲಭಿಸುವ ಸಂಸ್ಕಾರದಿಂದಲೇ. ಪತಿಗೂ ಹಾಗೆಯೇ ದೇವತ್ವವು, ಗುಣಾವಗುಣಗಳ ವಿವೇಚನೆಗೇ ಅವಕಾಶವಿಲ್ಲ, ಪತಿಯಾದುದರಿಂದಲೇ ಪೂಜ್ಯತ್ವವು. ಎರಡನೆಯ ಆಕ್ಷೇಪವು ಶುಶ್ರೂಷೆಗೆ ಸಂಬಂಧಪಟ್ಟುದು. ದುರಾಚಾರಿಗೆ ದುರಾಚಾರದಲ್ಲಿ ಸಹಾಯಕಳಾಗಬೇಕೆಂದರ್ಥವೇ ಅಲ್ಲ. ಒಂದು ತಪ್ಪನ್ನು ಮತ್ತೊಂದರಿಂದ ಪುಷ್ಟೀಕರಿಸಬಾರದು. ಅನ್ನಾದ್ಯಾವಶ್ಯಕತೆಗಳನ್ನೊದಗಿಸಿ, ಧನಾದಿಗಳನ್ನು ರಕ್ಷಿಸಿ, ಭೃತ್ಯಾದಿಗಳನ್ನೂ ಪಶುಸಂಪತ್ತಿಯನ್ನೂ ಕಾಪಾಡುವುದು ಶುಶ್ರೂಷೆ. ದುರಾಚಾರಿಗೆ ದುರಾಚಾರವು ಪ್ರಿಯ

ಸ್ತ್ರೀಗೆ ಪತಿಶುಶ್ರೂಷೆಯೇ ಯಜ್ಞ, ವ್ರತೋಪವಾಸ, ಅದನ್ನು ಬಿಟ್ಟು ಬೇರೆ ಯಜ್ಞವೂ ಇಲ್ಲ, ನೇಮವೂ ಇಲ್ಲ, ಅದರಿಂದಲೇ ಅವಳಿಗೆ ಪುಣ್ಯಲೋಕ. ಆದ್ದರಿಂದ ಸರ್ವಥಾ ಪತಿಗೆ ಅಪ್ರಿಯವನ್ನಾಚರಿಸಬಾರದು. ಮನಸ್ಸನ್ನೂ ಮಾತನ್ನೂ ದೇಹ ವನ್ನೂ ಹಿಡಿತದಲ್ಲಿಟ್ಟುಕೊಂಡು ತ್ರಿಕರಣಾತ್ಮಕವಾಗಿ ವ್ಯಭಿಚಾರ ಮಾಡದೆ ಯಾರು ಪರಿಶುದ್ಧಳಾಗಿರುತ್ತಾಳೋ ಆಕೆಗೆ ಕೀರ್ತಿಯೂ ಪತಿಲೋಕವೂ ಸಿಗುವುವು. ವ್ಯಭಿಚಾರದಿಂದ ಧರ್ಮಭ್ರಷ್ಟಳಾಗುವುದರ ಜತೆಗೆ ನಿಂದ್ಯಳೂ ಪಾಪರೋಗಿಯೂ ಆಗಬೇಕಾಗುತ್ತದೆ; ಜನ್ಮಾಂತರದಲ್ಲಿ ನರಿಯಾಗಿ (ಅಂದರೆ ಅಧಮಯೋನಿಯಲ್ಲಿ) ಜನ್ಮವೆತ್ತಬೇಕಾಗುತ್ತದೆ.[3]

---

ವಾಗಿರಬಹುದು, ಆದರೆ ಹಿತವಲ್ಲ. ಹಿತವನ್ನೇ ಆಚರಿಸಬೇಕು, ಅದರಿಂದ ಘರ್ಷಣಾದಿಗಳಿಗೆ ಅವಕಾಶವಾಗದಂತೆ ಬುದ್ಧಿವಂತಿಕೆಯಿಂದ ವರ್ತಿಸಬೇಕು. "ಪ್ರೇಮ್ಣಾ ಹರಸ್ಯಾರ್ಧಹರಾಂ ಭವಿತ್ರೀಂ" ಎಂಬ ಕಾಳಿದಾಸೋಕ್ತಿಯಲ್ಲಿದ್ದು ಕಾಣುವ ಪ್ರೇಮದಿಂದ ಒಲಿಸಿಕೊಳ್ಳಲು ಸಾಧ್ಯ, ತಿರಸ್ಕಾರದಿಂದಲ್ಲ, ಎಂಬ ದಿವ್ಯಾಸ್ತ್ರವನ್ನು ಮರೆಯಬಾರದು. ಪತಿಯು ದುರಾಚಾರಿ ಯಾಗುವುದು ದುರದೃಷ್ಟವೇ, ಪ್ರಾಪ್ತವಾದರೆ ಅನುಭವಿಸಲೇಬೇಕು. ದುರಾಚಾರದಲ್ಲೊಂದು ಸೂಕ್ಷ್ಮವಿದೆ—ಪಾಪಿಯು ಪಾಪವನ್ನು ಗೋಪ್ಯವಾಗಿಯೇ ಮಾಡುವುದು, ಸದಾಚಾರಿಗಳ ಮುಂದೆ ತಾನೂ ಸದ್ವೃತ್ತದವನಂತೆ ವೇಷವನ್ನೂ ಹಾಕುತ್ತಾನೆ. ಈ ಮನೋಧರ್ಮವನ್ನರಿತು ಕ್ಷಾಂತಿಯಿಂದ ಕಂಡೂಕಾಣದಹಾಗೆ ನಡೆಯುವುದೇ ನೀತಿ, ಬೀದಿಗೆಳೆದು ರಂಪಮಾಡುವುದ ರಿಂದ ಅನರ್ಥವೇ ಆಗುವುದು. ಇನ್ನೂ ಒಂದು ಸೂಕ್ಷ್ಮವಿದೆ—ತನ್ನಂತೆ ತನ್ನ ಸ್ತ್ರೀಯೂ ದುರಾಚಾರಿಯಾದಾಳೆಂಬ ಭೀತಿಯೂ ಇರುತ್ತದೆ, ಅವಳು ಸಾಧ್ವಿಯಾಗಿದ್ದರೆ ತನ್ನನ್ನು ತಾನೇ ನಿಂದಿಸಿಕೊಂಡು ದುರಾಚಾರವನ್ನು ಬಿಡುವ ಸಂಭವವೂ ಇರುತ್ತದೆ. ಒಟ್ಟಿನಲ್ಲಿ ಸದ್ವರ್ತನವು ಸ್ವಧರ್ಮವಾದುದರಿಂದಲೂ, ಶ್ರೇಯಸ್ಕರವಾದುದರಿಂದಲೂ, ಪಾಲನೀಯವು.

3 ಸ್ತ್ರೀಣಾಂ ಧರ್ಮಾನ್ನಿಬೋಧತ ॥೧೪೬॥ ಬಾಲಯಾ ವಾ ಯುವತ್ಯಾ ವಾ ವೃದ್ಧಯಾ ವಾಽಪಿ ಯೋಷಿತಾ । ನ ಸ್ವಾತಂತ್ರ್ಯೇಣ ಕರ್ತವ್ಯಂ ಕಿಂಚಿತ್ಕಾರ್ಯಂ ಗೃಹೇಷ್ವಪಿ ॥೧೪೭॥ ಬಾಲ್ಯೇ ಪಿತುರ್ವಶೇ ತಿಷ್ಠೇತ್ಪಾಣಿಗ್ರಾಹಸ್ಯ ಯೌವನೇ । ಪುತ್ರಾಣಾಂ ಭರ್ತರಿ ಪ್ರೇತೇ ನ ಭಜೇತ್ ಸ್ತ್ರೀ ಸ್ವತಂತ್ರತಾಂ ॥೧೪೮॥ ಪಿತ್ರಾ ಭರ್ತ್ರಾ ಸುತೈರ್ವಾಪಿ ನೇಚ್ಛೇದ್ವಿರಹಮಾತ್ಮನಃ । ಏಷಾಂ ಹಿ ವಿರಹೇಣ ಸ್ತ್ರೀ ಗರ್ಹ್ಯೇ ಕುರ್ಯಾದುಭೇ ಕುಲೇ ॥೧೪೯॥ ಸದಾ ಪ್ರಹೃಷ್ಟಯಾ ಭಾವ್ಯಂ ಗೃಹಕಾರ್ಯೇಷು ದಕ್ಷಯಾ । ಸುಸಂಸ್ಕೃತೋಪಸ್ಕರಯಾ ವ್ಯಯೇ ಚಾಽಮುಕ್ತಹಸ್ತಯಾ ॥೧೫೦॥ ಯಸ್ಮೈ ದದ್ಯಾತ್ ಪಿತಾ ತ್ವೇನಾಂ ಭ್ರಾತಾ ವಾಽನುಮತೇ ಪಿತುಃ । ತಂ ಶುಶ್ರೂಷೇತ ಜೀವಂತಂ ಸಂಸ್ಥಿತಂ ಚ ನ ಲಂಘಯೇತ್ ॥೧೫೧॥ ಅನೃತಾವೃತುಕಾಲೇ ಚ ಮಂತ್ರಸಂಸ್ಕಾರಕೃತ್ಪತಿಃ । ಸುಖಸ್ಯ ನಿತ್ಯಂ ದಾತೇಹ ಪರಲೋಕೇ ಚ ಯೋಷಿತಃ ॥೧೫೩॥ ವಿಶೀಲಃ ಕಾಮವೃತ್ತೋ ವಾ ಗುಣೈರ್ವಾ ಪರಿವರ್ಜಿತಃ । ಉಪಚರ್ಯಃ ಸ್ತ್ರಿಯಾ ಸಾಧ್ವ್ಯಾ ಸತತಂ ದೇವವತ್ಪತಿಃ ॥೧೫೪॥ ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ ನಾಽಪ್ಯುಪೋಷಣಂ । ಪತಿಂ ಶುಶ್ರೂಷತೇ ಯೇನ ತೇನ ಸ್ವರ್ಗೇ ಮಹೀಯತೇ ॥೧೫೫॥ ಪಾಣಿಗ್ರಾಹಸ್ಯ ಸಾಧ್ವೀ ಸ್ತ್ರೀ ಜೀವತೋ ವಾ ಮೃತಸ್ಯ ವಾ । ಪತಿಲೋಕಮಭೀಪ್ಸಂತೀ ನಾಽಽಚರೇತ್ಕಿಂಚಿದಪ್ರಿಯಂ ॥೧೫೬॥ ಮ-v ॥ ˘ ಪತಿಂ ಯಾ ನಾಽಭಿಚರತಿ ಮನೋವಾಗ್ದೇಹಸಂಯುತಾ । ಸಾ ಭರ್ತೃಲೋಕಾನಾಪ್ನೋತಿ ಸದ್ಭಿಸ್ಸಾಧ್ವೀತಿ ಚೋಚ್ಯತೇ ॥೨೯॥

**ಯಾಜ್ಞವಲ್ಕ್ಯರು** ಸ್ತ್ರೀಧರ್ಮವನ್ನು ಮಿತವಾಗಿಯೂ ಉದಾತ್ತವಾಗಿಯೂ ಹೇಳಿದ್ದಾರೆ. ಸ್ತ್ರೀಯರು ತಮ್ಮ ತಮ್ಮ ಪತಿಗಳಿಗೆ ವಿಧೇಯರಾಗಿರಬೇಕು, ಅದವರಿಗೆ ಪರಮಧರ್ಮವು. ಪತಿಯು ಮಹಾಪಾತಕಗಳನ್ನು ಮಾಡಿ ಪತಿತನಾದರೆ ಅವನು ಪ್ರಾಯಶ್ಚಿತ್ತದಿಂದ ಶುದ್ಧನಾಗುವವರೆಗೂ ತಟಸ್ಥಳಾಗಿದ್ದು ಆಮೇಲೆ ಮೊದಲಿನಂತೆಯೇ ನಡೆದುಕೊಳ್ಳಬೇಕು. ಮನೆಯ ಉಪಕರಣಾದಿಗಳನ್ನು ಯಥಾಸ್ಥಾನದಲ್ಲಿಟ್ಟು ಜೋಪಾನಮಾಡಬೇಕು. ಸದಾ ಸಂತೋಷಚಿತ್ತಳಾಗಿರಬೇಕು. ಧನದ್ರವ್ಯಗಳನ್ನು ಅತಿಯಾಗಿ ವ್ಯಯಮಾಡಬಾರದು. ಅತ್ತೆ ಮಾವ ಮುಂತಾದ ಮಾನ್ಯರಿಗೆ ಕಾಲು ಮುಟ್ಟಿ ನಮಸ್ಕಾರಮಾಡಬೇಕು. ಪತಿಪರಾಯಣಳಾಗಿರಬೇಕು. ಇಷ್ಟೆಲ್ಲವನ್ನೂ ಹೇಳಿ **ಪತಿಗೆ ಪ್ರಿಯವನ್ನೂ ಹಿತವನ್ನೂ ಮಾಡುವುದರಲ್ಲಾಸಕ್ತಳೂ ಸದಾಚಾರಸಂಪನ್ನಳೂ ಜಿತೇಂದ್ರಿಯಳೂ ಸಹ ಆಗಿರಬೇಕೆಂದು ಸಂಗ್ರಹ ವಾಕ್ಯವನ್ನು** ಹೇಳಿದ್ದಾರೆ. ಹಾಗಿದ್ದರೆ ಇಹದಲ್ಲಿ ಕೀರ್ತಿಯೂ ಪರದಲ್ಲಿ ಗತಿಯೂ ಲಭಿಸುವುದು.[4] ಈ ಸಂಗ್ರಹವಾಕ್ಯವನ್ನು ಮಂತ್ರವೆಂದು ಸ್ಮೃತಿಯಲ್ಲಿಟ್ಟುಕೊಂಡು ಅದರಂತೆ ನಡೆದರೆ ಆಕೆಯೇ ಆದರ್ಶಸತಿಯು.

ವಿಷ್ಣುಸ್ಮೃತಿಯಲ್ಲಿ ಇನ್ನೂ ಕೆಲವು ನಿಯಮಗಳಿವೆ:—ಭರ್ತೃವು ಮಾಡುವ ವ್ರತನಿಯಮಗಳಲ್ಲಿ ಸಹಕರಿಸಬೇಕು. ಅತ್ತೆಮಾವಂದಿರನ್ನೂ ಗುರುಗಳನ್ನೂ ಅತಿಥಿಗಳನ್ನೂ ಪೂಜಿಸಬೇಕು. ವಶೀಕರಣಾದಿ ಮೂಲಕ್ರಿಯೆಗಳಲ್ಲಿ ಆಸಕ್ತಳಾಗಬಾರದು. ಮಂಗಳಾಚಾರಗಳಲ್ಲಿ ತತ್ಪರಳಾಗಿರಬೇಕು. ಮನೆಯ ಬಾಗಿಲಿನಲ್ಲಿಯೂ ಕಿಟಕಿಗಳ ಹತ್ತಿರವೂ ನಿಂತು ನೋಡುತ್ತಿರಬಾರದು. ಮುತ್ತೈದೆಯು ಉಪವಾಸವ್ರತವನ್ನು ಮಾಡಬಾರದು, ಮಾಡಿದರೆ ಪತಿಯ ಆಯಸ್ಸು ಕ್ಷೀಣವಾಗುವುದು ಮತ್ತು ಅವಳೂ ದುರ್ಗತಿಗೀಡಾಗುವಳು.[5]

---

ವ್ಯಭಿಚಾರಾತ್ತು ಭರ್ತುಸ್ಸ್ತ್ರೀ ಲೋಕೇ ಪ್ರಾಪ್ನೋತಿ ನಿಂದ್ಯತಾಂ । ಸೃಗಾಲಯೋನಿಂ ಪ್ರಾಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥೩೦॥ ಮ-ix॥

4 ಸ್ತ್ರೀಭಿರ್ಭರ್ತೃವಚಃ ಕಾರ್ಯಮೇಷಧರ್ಮಃ ಪರಸ್ತ್ರೀಯಾಃ । ಆಶುದ್ಧೇಸ್ಸಂಪ್ರತೀಕ್ಷ್ಯೋ ಹಿ ಮಹಾಪಾತಕದೂಷಿತಃ ॥೭೭॥ ಸಂಯತೋಪಸ್ಕರಾ ದಕ್ಷಾ ಹೃಷ್ಟಾ ವ್ಯಯಪರಾಙ್ಮುಖೀ । ಕುರ್ಯಾಚ್ಛ್ವಶುರಯೋಃ ಪಾದವಂದನಂ ಭರ್ತೃತತ್ಪರಾ ॥೮೩॥ ಪತಿಪ್ರಿಯಹಿತೇಯುಕ್ತಾ ಸ್ವಾಚಾರಾ ವಿಜಿತೇಂದ್ರಿಯಾ । ಸೇಹಕೀರ್ತಿಮವಾಪ್ನೋತಿ ಪ್ರೇತ್ಯ ಚಾನುತ್ತಮಾಂ ಗತಿಂ ॥೮೭॥ ಯಾ-i ॥ ಪ್ರಿಯಂ ಮನಸೋಽನುಕೂಲಮನವದ್ಯತ್ವೇನ, ಹಿತಂ ಆಯತ್ಯಾಂ ಯಚ್ಛ್ರೇಯಸ್ಕರಂ ॥ಮಿತಾಕ್ಷರಾ॥

5 ಅಥಸ್ತ್ರೀಣಾಂ ಧರ್ಮಾಃ ॥೧॥ ಭರ್ತುಸ್ಸಮಾನವ್ರತಚಾರಿತ್ವಂ ॥೨॥ ಶ್ವಶ್ರೂಶ್ವಶುರಗುರುದೇವತಾತಿಥಿಪೂಜನಂ ॥೩॥ ಮೂಲಕ್ರಿಯಾಸ್ವನಭಿರತಿಃ ॥೬॥ ಮಂಗಲಾಚಾರತತ್ಪರತಾ ॥೭॥ ದ್ವಾರದೇಶಗವಾಕ್ಷೇಷ್ವನವಸ್ಥಾನಂ ॥೧೧॥ ಪತ್ಯೌ ಜೀವತಿ ಯಾ ಯೋಷಿದುಪವಾಸವ್ರತಂ ಚರೇತ್ । ಆಯುಸ್ಸಾಹರತೇ ಭರ್ತುರ್ನರಕಂ ಚೈವ ಗಚ್ಛತಿ ॥೧೬॥ ವಿ-೨೫॥

ಶಂಖರು ಸ್ತ್ರೀಯರ ಮಂಗಳಾಚಾರವನ್ನು ಈರೀತಿಯಾಗಿ ಉದಹರಿಸಿದ್ದಾರೆ:– ಸ್ತ್ರೀಯರು ಹೇಳದೆ ಕೇಳದೆ ಮನೆಯಿಂದ ಹೊರಗೆ ಹೋಗಬಾರದು, ಮೇಲು ಹೊದ್ದಿಕೆಯನ್ನು ಹೊದಿಯದೆಯೂ ಹೋಗಬಾರದು,[6] ತ್ವರಿತವಾಗಿಯೂ ಹೋಗ ಬಾರದು. ವ್ಯಾಪಾರಿ ಸಂನ್ಯಾಸಿ ವೃದ್ಧ ವೈದ್ಯರು ವಿನಾ ಬೇರೆ ಪರಪುರುಷರೊಡನೆ ಅಭಿಮುಖವಾಗಿ ನಿಂತು ಸಂಭಾಷಣವನ್ನು ಮಾಡಬಾರದು. ನಾಭಿಯು ಕಾಣದ ಹಾಗೂ ಕಾಲಿನ ಹಿರಡೆಯವರೆಗೂ ಎದೆಯು ಮುಚ್ಚುವಂತೆಯೂ ಬಟ್ಟೆಯನ್ನುಡ ಬೇಕು. ವಸ್ತ್ರಾದಿಗಳಿಂದ ಬಾಯಿಯನ್ನು ಮುಚ್ಚದೆ(ಮರೆಮಾಡದೆ)ನಗಬಾರದು.[7] ಪತಿಯನ್ನೂ ಪತಿಯ ಬಂಧುಗಳನ್ನೂ ದ್ವೇಷಿಸಬಾರದು. ನಾಯಕಸಾನಿ ವಂಚಕಿ ಅಭಿಸಾರಿಕೆ[8] ವಿರಾಗಿಣಿ ನೋಟಗಳನ್ನು ನೋಡುವುದರಲ್ಲಿ ಆಸಕ್ತಳು, ಮಾಯಾ ಮಂತ್ರಗಳನ್ನು ಮಾಡುವವಳು, ಕುಹಕ ಮಾಡುವವಳು, ದುಶ್ಶೀಲಳು, ಮುಂತಾ ದವರ ಜತೆಯಲ್ಲಿ ನಿಲ್ಲಬಾರದು, ಅವರ ಸಂಸರ್ಗದಿಂದ ಕುಲಸ್ತ್ರೀಯರ ಚಾರಿತ್ರವು ದೂಷಿತವಾಗುವುದು.[9] ಈ ನಿಯಮಗಳ ಅಭಿಪ್ರಾಯವು ಸರ್ವರಿಗೂ ಜ್ಞಾತ ವಾದುದು.

(ii) ವಿಪ್ರಯೋಗಧರ್ಮ—

ವಿಪ್ರಯೋಗವು ಅಲ್ಪಕಾಲೀನವೂ ಶಾಶ್ವತವೂ ಆಗಬಹುದು. ಪತಿಯ ಪ್ರವಾಸಾದಿಗಳಿಂದಾಗುವುದು ಅಲ್ಪಕಾಲೀನವು; ಪತಿಯ ಮರಣದಿಂದಲೂ ಪತಿಯು

---

6 ಸ್ತ್ರೀಯರು ಮೇಲುಹೊದ್ದಿಕೆಯನ್ನು ಹೊದಿಯುವ ಆಚಾರವು ಔತ್ತರೀಯರಲ್ಲಿ ಪ್ರಚಾರದಲ್ಲಿದೆ. ನಮ್ಮಲ್ಲಿಯೂ ಶೂದ್ರರು ತಲೆಯಮೇಲೆ ಸೆರಗು ಹೊದಿಯುವುದರ ಮೂಲಕ ಪರ್ಯಾಯವಾಗಿ ಈ ಸಂಪ್ರದಾಯವನ್ನಿಟ್ಟುಕೊಂಡಿದ್ದಾರೆ; ಇತರರು ವಿವಾಹ ದೀಕ್ಷಾಕಾಲದಲ್ಲೀಸಂಪ್ರದಾಯವನ್ನು ಅನುಸರಿಸುತ್ತಾರೆ.

7 ನಗಬಾರದೆಂದಿರುವುದರಿಂದ ಉಪಲಕ್ಷಣದಿಂದ ಈ ನಿಯಮವು ಕೆಮ್ಮುವುದು ತೇಗು ವುದು ಆಯ್ಕಳಿಸುವುದು ಮುಂತಾದುವುಕ್ಕೂ ಅನ್ವಯಿಸುವುದು. "ನಾಸಂವೃತಮುಖೋ ಹಾಸ್ಯಕ್ಷವೋದ್ಗಾರವಿಜೃಂಭಣಂ" ಎಂದು ವಾಗ್ಭಟರು ಈ ನಿಯಮವನ್ನು ಸ್ತ್ರೀಪುರುಷರಿಬ್ಬ ರಿಗೂ ವಿಧಿಸಿದ್ದಾರೆ—(ಅ.ಸಂ-ದಿನಚರ್ಯ) ಈ ನಿಯಮವನ್ನು ಶೂದ್ರಸ್ತ್ರೀಯರು ಅನು ಷ್ಠಾನದಲ್ಲಿಟ್ಟುಕೊಂಡಿದ್ದಾರೆ.

8 ಕಾಂತಾರ್ಥಿನೀ ತು ಯಾ ಯಾತಿ ಸಂಕೇತಂ ಸಾಭಿಸಾರಿಕಾ ॥ಅಮರ॥ ಜಾರನ ಸಂಗಕ್ಕಾಗಿ ಸಂಕೇತಸ್ಥಾನಕ್ಕೆ ಹೋಗುವವಳು ಅಭಿಸಾರಿಕೆ. ಕಾಂತಶಬ್ದಕ್ಕೆ ಪ್ರಿಯನೆಂದು ಅರ್ಥಮಾಡುವುದು ಪ್ರಕರಣಕ್ಕೆ ಹೊಂದುವುದಿಲ್ಲ.

9 ನಾನುಕ್ತ್ವಾ ಗೃಹಾನ್ನಿರ್ಗಚ್ಛೇನ್ನಾನುತ್ತರೀಯಾ ನ ತ್ವರಿತಂ ವ್ರಜೇನ್ನ ಪರಪುರುಷ ಮಭಿಭಾಷೇತಾನ್ಯತ್ರ ವಣಿಕ್ಪ್ರವ್ರಜಿತವೃದ್ಧವೈದ್ಯೇಭ್ಯೋ ನ ನಾಭಿಂ ದರ್ಶಯೇದಾಗುಲ್ಫಾ ದ್ವಾಸಃ ಪರಿದಧ್ಯಾನ್ನಸ್ತನೌ ವಿವೃತೌ ಕುರ್ಯಾನ್ನಹಸೇದಪ್ರಾವೃತಾ ಭರ್ತಾರಂ ತದ್ಬಂಧೂ ನ್ವಾ ನದ್ವಿಷ್ಯಾನ್ನ ಗಣಿಕಾ ಧೂರ್ತಾಭಿಸಾರಿಕಾ ಪ್ರವ್ರಜಿತಾ ಪ್ರೇಕ್ಷಣಿಕಾ ಮಾಯಾಮೂಲ ಕುಹಕಕಾರಿಕಾ ದುಶ್ಶೀಲಾದಿಭಿಸ್ಸಹೈಕತ್ರ ತಿಷ್ಠೇತ್ ಸಂಸರ್ಗೇಣ ಹಿ ಕುಲಸ್ತ್ರೀಣಾಂ ಚರಿತ್ರಂ ದುಷ್ಯತಿ ॥ಶಂಖಃ॥

ನಷ್ಟನೂ ಪತಿತನೂ ಸಂನ್ಯಾಸಿಯೂ ಆಗುವುದರಿಂದ ಸಂಭವಿಸುವುದು ಶಾಶ್ವತವು. ಪಾತಿತ್ಯದಿಂದ ಸಂಭವಿಸುವ ವಿಪ್ರಯೋಗಕ್ಕೆ ಕೊನೆಯುಂಟು, ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಶುದ್ಧನಾದರೆ ಪುನಃ ಸಮಾಗಮಕ್ಕೆ ಅವಕಾಶವುಂಟು, ಇಲ್ಲದಿದ್ದರೆ ಅದಕ್ಕೂ ಕೊನೆಯಿಲ್ಲ. ಶಾಶ್ವತವಾದ ವಿಪ್ರಯೋಗವು ಸಂಭವಿಸಿದರೆ ಸ್ತ್ರೀಯು ಪುತ್ರರ ಅಥವಾ ಪುತ್ರಸ್ಥಾನೀಯರ (ಅಥವಾ ಹಿರಿಯ ರಕ್ತಸಂಬಂಧಿಗಳ) ಜತೆಯಲ್ಲಿರಬೇಕು, ಸ್ವತಂತ್ರಳಾಗಿ ಬೇರೆ ಇರಬಾರದು.[10] ಪತಿಯು ಮೃತನಾದಮೇಲೂ ಅವನ ಕುಲಕ್ಕೂ ಕೀರ್ತಿಗೂ ಪಾರಲೌಕಿಕಕ್ರಿಯೆಗೂ ಅಪೋಹವಾಗುವಂತೆ ವರ್ತಿಸಬಾರದು, ಅತಿಕ್ರಮಿಸಿದರೆ ಅವಳಿಗೆ ಪುಣ್ಯಲೋಕವಾಗುವುದಿಲ್ಲ, ಪತಿಯು ಮೃತನಾದರೆ ಸತಿಯು ಯಾರ ಹಂಗೂ ಇಲ್ಲದೆ ಕಂದಮೂಲಫಲಗಳನ್ನಾದರೂ ತಿಂದು ದೇಹವನ್ನು ಕೃಶಿಸಿದರೂ ಸರಿ, ಪರಪುರುಷನ ಹೆಸರನ್ನು ಕೂಡ ಎತ್ತಬಾರದು. ಬದುಕಿರುವವರೆಗೂ ಬ್ರಹ್ಮಚಾರಿಣಿಯಾಗಿ ನಿಯಮದಿಂದ ಇರಬೇಕು. ಇದೇ ಏಕಪತ್ನೀವ್ರತವು, ಇದರಿಂದಲೇ ದಿವ್ಯದೇಹದ ಪ್ರಾಪ್ತಿಯು.[11]

ಪತಿಯು ನಷ್ಟನಾದರೂ ಮೃತನಾದರೂ ಸಂನ್ಯಾಸಿಯಾದರೂ ನಪುಂಸಕನಾದರೂ ಪತಿತನಾದರೂ ಸ್ತ್ರೀಗೆ ದ್ವಿತೀಯ ವಿವಾಹಕ್ಕೆ ಅವಕಾಶವುಂಟೆಂದು ನಾರದರೂ ಪರಾಶರರೂ ಹೇಳಿದ್ದಾರೆ[12] ದ್ವಿತೀಯ ವಿವಾಹವು ಯುಗಾಂತರದ ಧರ್ಮ, ಕಲಿಯುಗದಲ್ಲಿ ನಿಷಿದ್ಧ, ಎಂದು ಆದಿಪುರಾಣದ ವಚನವಿದೆ[13] ಅದರ ಆಧಾರದ ಮೇಲೆ ಈ ಯುಗದಲ್ಲಿ ದ್ವಿತೀಯ ವಿವಾಹಕ್ಕೆ ಅವಕಾಶವಿಲ್ಲವೆಂದು ಅರ್ವಾ

---

10 ಪುತ್ರಾಣಾಂ ಭರ್ತರಿ ಪ್ರೇತೇ ನಭಜೇತ್ ಸ್ತ್ರೀ ಸ್ವತಂತ್ರತಾಂ ॥ (ಪುತ್ರಾಣಾಂ ವಶೇ ತಿಷ್ಠೇದಿತಿಪೂರ್ವೇಣಾನ್ವಯಃ) ಮ-v-೧೪೮॥

11 ಪಾಣಿಗ್ರಾಹಸ್ಯ ಸಾಧ್ವೀ ಸ್ತ್ರೀ ಜೀವತೋ ವಾ ಮೃತೋಪಿವಾ ।; ಪತಿಲೋಕಮಭೀಪ್ಸಂತೀನಾಚರೇತ್ಕಿಂಚಿದಪ್ರಿಯಂ ॥೧೫೬॥ ಕಾಮಂ ತು ಕ್ಷಪಯೇದ್ದೇಹಂ ಪುಷ್ಪಮೂಲಫಲೈಶ್ಶುಭೈಃ । ನ ತು ನಾಮಾಪಿಗೃಹ್ಣೀಯಾತ್ ಪತ್ಯೌ ಪ್ರೇತೇ ಪರಸ್ಯ ತು ॥೧೫೭॥ ಆಸೀತಾಮರಣಾತ್ಕ್ಷಾಂತಾ ನಿಯತಾ ಬ್ರಹ್ಮಚಾರಿಣೀ । ಯೋ ಧರ್ಮ ಏಕಪತ್ನೀನಾಂ ಕಾಂಕ್ಷಂತೀ ತಮನುತ್ತಮಂ ॥೧೫೮॥ ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ। ಸ್ವರ್ಗಂ ಗಚ್ಛತ್ಯಪುತ್ರಾಪಿ ॥೧೬೦॥ ಮ-v॥ ಮೃತೇ ಜೀವತಿ ವಾ ಪತ್ಯೌ ಯಾನಾನ್ಯಮುಪಗಚ್ಛತಿ । ಸೇಹಕೀರ್ತಿಮವಾಪ್ನೋತಿ ಮೋದತೇ ಚೋಮಯಾ ಸಹ ॥ಯಾ-i-೭೫॥

12 ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇ ಚ ಪತಿತೇ ಪತೌ । ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥ನಾರದಸ್ಮೃತಿ-xii-೯೭॥ ಪರಾಶರಸ್ಮೃತಿ-iv-೨೮॥

13 ಊಢಾಯಾಃ ಪುನರುದ್ವಾಹಂ ಜ್ಯೇಷ್ಠಾಂಶಂ ಗೋವಧಂ ತಥಾ । ಕಲೌ ಪಂಚ ನ ಕುರ್ವೀತ ಭ್ರಾತೃಜಾಯಾಂ ಕಮಂಡುಲಂ ॥(ಸ್ಮೃತಿಚಂದ್ರಿಕಾ—ಸಂಸ್ಕಾರಕಾಂಡ)॥ ದೇವರೇಣ ಸುತೋತ್ಪತ್ತಿಂ ಗೋಮೇಧಂ ಚ ಕಮಂಡುಲಂ । ಅಕ್ಷತಾಂ ಪೌರುಷಂ ಮೇಧಂ ಕಲೌ ಪಂಚವಿವರ್ಜಯೇತ್॥(ಸ್ಮೃತ್ಯಂತರೇತಿಚಂದ್ರಿಕಾಯಾಂ)॥ ದೇವರೇಣ ಸುತೋತ್ಪತ್ತಿರ್ದತ್ತಾ ಕನ್ಯಾ ನ ದೀಯತೇ ॥(ಆದಿಪುರಾಣೇತಿನಿರ್ಣಯಸಿಂಧೌ)॥

ಚೀನರ ಮತವು ಮನುಯಾಜ್ಞವಲ್ಕ್ಯಾದಿಗಳ ವಚನಗಳಲ್ಲಿ ದಿವ್ಯದೇಹವನ್ನೂ ಪತಿಲೋಕಾದಿ ಪುಣ್ಯಲೋಕವನ್ನೂ ಇಹದಲ್ಲಿ ಕೀರ್ತಿಯನ್ನೂ ಅಪೇಕ್ಷಿಸುವವಳು ಹಾಗೆಯೇ ಬ್ರಹ್ಮಚರ್ಯದಲ್ಲಿರಬೇಕಂದಿರುವುದರಿಂದ ಆ ವಚನಗಳು ಅರ್ಥವಾದವೆಂದೂ ವಿಧಿಯಲ್ಲವೆಂದೂ ವಿಚಾರಮಾಡಿ ದ್ವಿತೀಯ ವಿವಾಹವು ಸ್ತ್ರೀಗೆ ಐಚ್ಛಿಕವೆಂದೂ ಕೆಲವು ವಿಜ್ಞರು ಇತ್ಯರ್ಥಮಾಡಿದ್ದಾರೆ.[14] ಮತ್ತೆ ಕೆಲವು ವಿದ್ವಾಂಸರು "ಪತೌ" ಎಂಬುದರ ಮೇಲೆ ವ್ಯಾಖ್ಯಾನಮಾಡಿ ಮೂಲವಚನವೇ ದ್ವಿತೀಯ ವಿವಾಹಕ್ಕೆ ವಿರುದ್ಧವಾದುದೆಂದು ತೀರ್ಮಾನಕ್ಕೆ ಬಂದಿದ್ದಾರೆ, ಮೂಲವಚನದಲ್ಲಿ "ಪತಿರನ್ಯಃ" ಇನ್ನೊಬ್ಬ ಪತಿ ಎಂದಿರುವುದು ಆ ಅರ್ಥಕ್ಕೆ ಹೊಂದುವುದಿಲ್ಲ ಹೀಗೆ ಅನೇಕ ಮತಗಳಿರುವುದರಿಂದ ಈ ಪ್ರಸಂಗವು ಕುಲಾಚಾರ ಜಾತ್ಯಾಚಾರಗಳ ಮೇಲೆ ವ್ಯವಸ್ಥೆಯಾಗಬೇಕು.

ಪತಿಯು ಪ್ರವಾಸಿಯಾದಾಗ ಪತ್ನಿಯು ಪತಿಯ ಪ್ರತ್ಯಾಗಮನವನ್ನು ನಿರೀಕ್ಷಿಸುತ್ತಾ ಪತಿಪರಾಯಣಳಾಗಿರಬೇಕು. ಆಹಿತಾಗ್ನಿಯಾದರೆ ಅಗ್ನಿಯನ್ನು ಸಂರಕ್ಷಿಸಿಕೊಂಡು ಋತ್ವಿಜನ ಮೂಲಕ ಅಗ್ನಿಹೋತ್ರವನ್ನು ನಡೆಸುತ್ತಿರಬೇಕು.[15] ಪತಿಯು ವೃತ್ತಿಯನ್ನು ಕಲ್ಪಿಸಿಟ್ಟು ಹೋದರೆ ಆ ವೃತ್ತಿಯಿಂದ ಜೀವಿಸುತ್ತಿರಬೇಕು, ಕಲ್ಪಿಸದಿದ್ದರೆ ಶುದ್ಧವಾದ ಶಿಲ್ಪಾದಿವೃತ್ತಿಯಿಂದ ಜೀವಿಸಬೇಕು,[16] ಅಂಥಾ ವೃತ್ತಿಗೆ ಪರಪುರುಷರ ಸಂಬಂಧವಿರಕೂಡದು. ಧರ್ಮಕಾರ್ಯಾರ್ಥಿಯಾಗಿ ಪ್ರವಾಸಮಾಡಿದರೆ ಎಂಟು ವರ್ಷಗಳೂ, ವಿದ್ಯಾರ್ಥಿಯಾಗಿ ಅಥವಾ ಕೀರ್ತ್ಯರ್ಥಿಯಾಗಿ ಹೋಗಿದ್ದರೆ ಆರು ವರ್ಷಗಳೂ, ಕಾಮಾರ್ಥಿಯಾಗಿ ಹೋದರೆ ಮೂರು ವರ್ಷಗಳೂ ಪ್ರತ್ಯಾಗಮನವನ್ನು ನಿರೀಕ್ಷಿಸಬೇಕು.[17] ಆಮೇಲೂ ಬರದಿದ್ದರೆ ಪತಿಯು ನಷ್ಟನಾದನೆಂದು ತಿಳಿಯಬೇಕೇ ಬೇಡವೇ ಎಂಬ ಸಂದೇಹವು ವಿದ್ವಾಂಸರನ್ನೂ ಬಾಧಿಸುವ ಪ್ರಸಂಗವು. ಹಿಂತಿರುಗದಿದ್ದರೆ ಶಿಲ್ಪಾದಿಗಳಿಂದ ಜೀವಿಸಬೇಕು, ಅಥವಾ ಪತಿಯಿರುವ ಸ್ಥಾನವನ್ನು ಹುಡುಕಬಹುದು, ತಿಳಿದರೆ ಅಲ್ಲಿಗೇ ಹೋಗಬಹುದೆಂದು ಕೆಲವರ ತೀರ್ಮಾನ. ಅಥವಾ ನಾರದಪರಾಶರ ವಚನದಂತೆ ಬೇರೆ ಮದುವೆ ಮಾಡಿಕೊಳ್ಳಬೇಕೆಂದು ಕೆಲವರ ಅಭಿಪ್ರಾಯ. ದ್ವಿತೀಯ ವಿವಾಹವನ್ನು ಪ್ರತಿಭಟಿಸುವವರು ಸತ್ತರೂ ಪರಪುರುಷನ ಹೆಸರು ಹೇಳುವುದು ಅಧರ್ಮವಾಗಿರುವಾಗ ದ್ವಿತೀಯ ವಿವಾಹೆ

---

14 ಯತ್ತು ಮೃತಭರ್ತೃಕಾಣಾಂ ಬ್ರಹ್ಮಚರ್ಯವಚನಂ ತತ್ ಫಲಾತಿಶಯಕಾಮಾನಾಂ ನಾಸ್ತ್ಯನ್ಯಾಸಾಮಿತ್ಯವಿರೋಧಃ ॥ನಂದನಃ-ಮ-ix-೭೬॥

15 ನಿಕ್ಷಿಪ್ಯಾಗ್ನೀಂ ಸ್ವದಾರೇಷು ಪರಿಕಲ್ಪ್ಯರ್ತ್ವಿಜಂ ತಥಾ । ಪ್ರವಸೇತ್ಕಾರ್ಯವಾನ್ ವಿಪ್ರೋ ವೃಥೈವ ನ ಚಿರಂ ವಸೇತ್ ॥ಬೃಹಸ್ಪತಿಃ॥

16 ವಿಧಾಯ ಪ್ರೋಷಿತೇ ವೃತ್ತಿಂ ಜೀವೇನ್ನಿಯಮಮಾಸ್ಥಿತಾ । ಪ್ರೋಷಿತೇತ್ವವಿಧಾಯೈವ ಜೀವೇಚ್ಛಿಲ್ಪೈರಗರ್ಹಿತೈಃ ॥ಮ-ix ೭೫॥

17 ಪ್ರೋಷಿತೇ ಧರ್ಮಕಾರ್ಯಾರ್ಥಂ ಪ್ರತೀಕ್ಷ್ಯೋಽಷ್ಟೌ ನರಸ್ಸಮಾಃ । ವಿದ್ಯಾರ್ಥಂ ಷಡ್ಯಶೋರ್ಥಂ ವಾ ಕಾಮಾರ್ಥಂ ತ್ರೀಂಸ್ತು ವತ್ಸರಾನ್ ॥ಮ-ix-೭೬॥

ವೆಂಥಾದ್ದು, ಮಾಡಿಕೊಂಡರೆ ಆಮೇಲೆ ಪತಿಯು ಹಿಂತಿರುಗಿದರೇನುಗತಿ ಎಂದು ವಾದಿಸುತ್ತಾರೆ. ಸಮರ್ಥಿಸುವವರು ಪುನರ್ವಿವಾಹವಿಲ್ಲವೆನ್ನುವ ಪಕ್ಷಕ್ಕೆ ಕಾಲಾವಧಿ ಯನ್ನು ವಿಧಿಸಿದುದೇ ವ್ಯರ್ಥವಲ್ಲವೆ ಎಂದು ವಾದಿಸುತ್ತಾರೆ.[18] ಹೀಗಿರುವುದರಿಂದ "ಮಹಾಜನೋಯೇನಗತಸ್ಸಪಂಥಾಃ"[19] ಎಲ್ಲರೂ ಯಾವುದನ್ನು ಆಚರಿಸುತ್ತಾ ಬಂದಿದ್ದಾರೋ ಅದೇ ಸದಾಚಾರವೆಂದೇ ತೀರ್ಮಾನವು. ಪತಿಯು ಪ್ರವಾಸಿಯಾಗಿರುವಾಗ ಪತ್ನಿಯು ವಿಹಾರದಲ್ಲಿಯೂ ಅಲಂಕಾರಾದಿಯಲ್ಲಿಯೂ ದೇಹಸಂಸ್ಕಾರದಲ್ಲಿಯೂ ಸಮಾಜೋತ್ಸವಗಳಲ್ಲಿ ಭಾಗವಹಿಸುವುದರಲ್ಲಿಯೂ ಹಾಸ್ಯಾಲಾಪಗಳನ್ನು ಮಾಡುವುದರಲ್ಲಿಯೂ ಪರರ ಗೃಹಗಳಿಗೆ ಹೋಗುವುದರಲ್ಲಿಯೂ ಆಸಕ್ತಳಾಗಬಾರದು. ತಂದೆ ತಾಯಿ ಪುತ್ರ ಸಹೋದರ ಅತ್ತೆ ಮಾವ ಸೋದರಮಾವ ಮುಂತಾದ ಸಂಬಂಧಿಗಳ ಜತೆಯಲ್ಲಿರಬೇಕು.[20] ಬೇರೆ ಇದ್ದರೆ ನಿಂದೆಗೂ ಅಪವಾದಕ್ಕೂ ಗುರಿಯಾಗಬೇಕಾದೀತು.[21]

## ೪. ಪಾತಿವ್ರತ್ಯ

ಪಾತಿವ್ರತ್ಯವು ಸದಾಚಾರವೆಂದೂ ವ್ಯಭಿಚಾರವು ದುರಾಚಾರವೆಂದೂ ಸರ್ವರೂ ಒಪ್ಪುತ್ತಾರೆ. ದುರಾಚಾರಿಗಳಿಗೂ ಇದು ಗೊತ್ತು. ಅದರಿಂದಲೇ ಅವರು ದುರಾಚಾರವನ್ನು ಮುಚ್ಚಿಕೊಂಡು ಸದಾಚಾರಿಗಳಂತೆ ನಟಿಸುವುದು. ವಾದವೇನಿದ್ದರೂ ಪಾತಿವ್ರತ್ಯತತ್ತ್ವದ ವ್ಯಾಪ್ತಿಯಲ್ಲಿ ಮಾತ್ರವೇ. ಕೆಲವರು ಪಾತಿವ್ರತ್ಯವು ದಾಂಪತ್ಯಜೀವನದ ಅಂಗವೆಂದು ಅದಕ್ಕೂ ದಾಂಪತ್ಯಕ್ಕೂ ಅಂಗಾಂಗಿಭಾವವನ್ನು ಹೇಳಿ ಪಾತಿವ್ರತ್ಯ ನಿಯಮವು ವಿವಾಹಕ್ಕೆ ಪೂರ್ವವೂ ವಿವಾಹವಿಚ್ಛಿತ್ತಿಯ

---

18 ತದೂರ್ಧ್ವಂ ತು ಪತ್ಯುಸ್ಸಂನಿಕರ್ಷಮೇವ ಗಚ್ಛೇತ್ ॥ ಊರ್ಧ್ವಂ ಪತಿಸಕಾಶಂ ಗಚ್ಛೇದಿತಿ ವಸಿಷ್ಠವಚನಾತ್ ॥ ಸರ್ವಜ್ಞನಾರಾಯಣಃ, ಕುಲ್ಲೂಕಃ, ರಾಘವಾನಂದಶ್ಚ ॥ ಮ-ix-೭೬॥ ಪತಿರನ್ಯೋ ವಿಧೀಯತೇತ್ಯುಕ್ತಂ । ನ್ಯಾಸ್ಯಾಜ್ಞಾನೇ ಬ್ರಹ್ಮಚರ್ಯಮುಪನೇತುಂ ಶಕ್ಯತೇ-ನ ತು ನಾಮಾಪಿ ಗೃಹ್ಣೀಯಾತ್ಪತ್ಯೌ ಪ್ರೇತೇ ಪರಸ್ಯತ್ವಿತಿ ಸ್ತ್ರೀಧರ್ಮಃ । ಮೃತೇ ಭರ್ತರಿ ನಾಸ್ತಿ ವ್ಯಭಿಚಾರಃ ಕಿಮಂಗಪ್ರೋಷಿತೇ । ಯದಿ ಸಾ ಪುನರ್ಭೂರ್ಧರ್ಮೇಣಾನ್ಯೇನೋಢಾ ಭವೇತ್ತದಾ ಭರ್ತಾರ್ಯಭ್ಯಾಗತೇ ನ ಕಿಂಚಿದ್ದ್ಭ್ರಯಾತ್ಪುನರ್ಭವಸ್ಯೇಯಂ ಭಾರ್ಯೇತಿ ತದಯುಕ್ತಂ ॥ಮೇಧಾತಿಥಿಃ॥ ಊರ್ಧ್ವಂ ಭರ್ತ್ರಂತರಪರಿಗ್ರಹೇ ನ ದೋಷೋಽಸ್ತೀತ್ಯಭಿಪ್ರಾಯಃ ॥ನಂದನಃ॥ (See also Sir Henry Mayne's openion in his Hindu Law—Some one has removed Manu's texts here.)

19 ಯುಧಿಷ್ಠಿರವಾಕ್ಯ ॥ಮ.ಭಾ.॥

20 ಕ್ರೀಡಾಂ ಶರೀರಸಂಸ್ಕಾರಂ ಸಮಾಜೋತ್ಸವದರ್ಶನಂ । ಹಾಸ್ಯಂ ಪರಗೃಹೇ ಯಾನಂ ತ್ಯಜೇತ್ಪ್ರೋಷಿತಭರ್ತೃಕಾ ॥ಯಾ-i-೮೪॥

21 ಪಿತೃಮಾತೃಸುತಭ್ರಾತೃಶ್ವಶ್ರೂಶ್ವಶುರಮಾತುಲೈಃ। ಹೀನಾ ನ ಸ್ಯಾದ್ವಿನಾ ಭರ್ತ್ರಾ ಗರ್ಹಣೀಯಾನ್ಯಥಾ ಭವೇತ್ ॥ಯಾ-i-೮೬॥

ಅನಂತರವೂ ಪರಿಪಾಲ್ಯವಲ್ಲವೆನ್ನುತ್ತಾರೆ. ಮತ್ತೆ ಕೆಲವರು ಅದನ್ನು ಸಾಂಕೇತಿಕ ವೆನ್ನುತ್ತಾರೆ. ಇನ್ನು ಕೆಲವರು ಅದಕ್ಕೆ ಧರ್ಮತ್ವವನ್ನೇ ಒಪ್ಪದೆ ಪತಿಪತ್ನಿಯರ ಮಧ್ಯದ ಅನ್ಯೋನ್ಯನಿಬಂಧನವೆನ್ನುತ್ತಾರೆ. ಹೀಗೆ ಮತವೈವಿಧ್ಯವು ಅನೇಕ ವಾಗಿವೆ. ಅವೆಲ್ಲವೂ ಇಲ್ಲಿ ಪ್ರಕೃತವಲ್ಲ. ಸನಾತನಿಗಳಲ್ಲಿ ಪಾತಿವ್ರತ್ಯವು ಸ್ತ್ರೀಗೆ ಸದ್ಧರ್ಮ, ಸ್ವಧರ್ಮ. ಧರ್ಮವಾದುದರಿಂದ ಪರಿಪಾಲ್ಯವು. ಸ್ವಧರ್ಮವಾದುದ ರಿಂದ ಪರಿತ್ಯಾಜ್ಯವಲ್ಲ. ವ್ಯಭಿಚಾರವು ಅನಾಚಾರ ಮಾತ್ರವಲ್ಲ, ಪಾತಕ, ಪಾತಿತ್ಯ. ಪತಿಯು ದುರಾಚಾರಿಯಾದರೆ ಪತಿವ್ರತೆಯಾಗೇಕೆ ಇರಬೇಕೆಂಬ ವಾದವು ಸಾಧು ವಲ್ಲ. ಪಾತಿವ್ರತ್ಯವು ಆತ್ಮೋಪಕಾರವೋ ಪತಿಗುಪಕಾರವೋ ಎಂಬುದನ್ನು ವಿಮರ್ಶಿ ಸಿದರೆ ವಾದಕ್ಕೆ ಸಮಾಧಾನವು ಅಲ್ಲಿಯೇ ಇದೆ. ಪಾತಿವ್ರತ್ಯವು ಸದ್ಧರ್ಮ, ಸ್ವಧರ್ಮ, ಸ್ತ್ರೀಗೆ ಅವಶ್ಯವಾಗಿ ಅನುಷ್ಠೇಯವು. ಪತಿಗೆ ಪತ್ನಿಯು ಹೇಗೋ ಹಾಗೆಯೇ ಪತ್ನಿಗೆ ಪತಿಯೂ ಆತ್ಮಾರ್ಥವಾಗಿ ಪ್ರಿಯನು, ಪತಿಗಾಗಿ ಪತಿಯು ಪ್ರಿಯನಲ್ಲ.[1] ಪತಿಯನ್ನು ಸಂತುಷ್ಟಿಪಡಿಸಲು ಪ್ರೀತಿಸುವುದಲ್ಲ. ಪಾತಿವ್ರತ್ಯದಲ್ಲಿ ಸ್ವಸಂಶುದ್ಧಿ ಸ್ವಸಂತುಷ್ಟಿಯೇ ವಿನಾ ಪರೋಪಕಾರ ಲೇಶವೂ ಇಲ್ಲ. ಪಾತಿವ್ರತ್ಯದಿಂದ ತನಗೂ ಕುಲಕ್ಕೂ ಕೀರ್ತಿಯು ಲಭಿಸಿದರೆ ಅದು ಪರಿಣಾಮವೇ ವಿನಾ ಅದಕ್ಕಾಗಿ ಪಾತಿವ್ರತ್ಯದ ಅನು ಷ್ಠಾನವಲ್ಲ. ಅದರ ಆಂತರ್ಯವು ಆತ್ಮಸಂಯಮ, ಆತ್ಮಸಂಶುದ್ಧಿ, ಆತ್ಮಸಂತುಷ್ಟಿ, ಆತ್ಮೋದ್ಧಾರ, ಉಚ್ಚಜೀವನ, ಧರ್ಮಜೀವನ, ತ್ರಿಕರಣಶುದ್ಧಿ, ಇವುಗಳೇ ಅಲ್ಲದೆ ಜನರನ್ನೋಲಿಸುವ ಪ್ರಮೇಯವೇ ಅಲ್ಲ. ಈ ಆಂತರ್ಯವನ್ನರಿತರೆ ಪತಿಯ ಗುಣಾವಗುಣಗಳ ಪ್ರಶ್ನೆಯೇ ಏಳುವುದಿಲ್ಲ. ಈ ಅರ್ಥವನ್ನೇ ಮತ್ತೊಂದು ವಿಧ ವಾಗಿಯೂ ಸಮರ್ಥಿಸಬಹುದು. ಪಾತಿವ್ರತ್ಯವೆಂದರೇನು ? ಪತಿಯೊಬ್ಬನು ವಿನಾ ಮತ್ತೊಬ್ಬನನ್ನು ಮನಸಾ ವಾಚಾ ಕರ್ಮಣಾ ಕಾಮಿಸದಿರುವುದು. ಗಮ್ಯಾಗಮ್ಯ ವಿಚಾರವನ್ನು ನಿರ್ಧರಿಸುವುದು ಹೇಗೆ? ಪಶ್ವಾದಿಗಳಲ್ಲಿ ಜಾತಿಮಾತ್ರದಿಂದಲೇ ಇದರ ವ್ಯವಸ್ಥೆ. ಮಾನವರಲ್ಲಿ ಜನ್ಮದಿಂದಲೇ ಎಲ್ಲರೂ ಎಲ್ಲರಿಗೂ ಅಗಮ್ಯರೇ. ಪಿತಾ ಪುತ್ರಿ, ಮಾತಾಪುತ್ರ, ಸಹೋದರಸಹೋದರಿ, ಇತ್ಯಾದಿ ಪರಮಬಂಧುಗಳೇ ಪರಸ್ಪರ ಅಗಮ್ಯರೆಂದಮೇಲೆ ಮಿಕ್ಕವರ ವಿಷಯವನ್ನು ಹೇಳಬೇಕಾದುದೇ ಇಲ್ಲ. ಅಗಮ್ಯತ್ವವು ನೈಜವಾಗಿಯೇ ಪ್ರಾಪ್ತವಾದುದು. ಪತಿಪತ್ನೀ ಸಂಬಂಧವು ಸಂಸ್ಕಾರಜನ್ಯವಾದುದು, ಅದು ಪ್ರಾಪ್ತವಾದರೆ ಪತಿಯೊಬ್ಬನ ವಿಷಯದಲ್ಲಿ ಅಗಮ್ಯ ತ್ವವು ನಿವಾರಣೆಯಾಗಿ ಗಮ್ಯತ್ವವು ಪ್ರಾಪ್ತವಾಗುವುದು. "ಏನಾಪತ್ಯಾತನ್ವಂ ಸಂಸೃಜಸ್ವ" ಎಂಬ ಮಂತ್ರದಿಂದ ಸಂಸ್ಕಾರವು ನಡೆಯುತ್ತದೆ—ಈ ನಿನ್ನ ಪತಿ ಯೊಡನೆ ನಿನ್ನ ದೇಹದ ಸಂಯೋಗವಾಗಲಿ ಎಂದು ಮಂತ್ರಾರ್ಥವು. ಇದನ್ನು

1 ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ ನ ವಾ ಅರೇ ಜಾಯಾಯೈ ಕಾಮಾಯ ಜಾಯಾ ಪ್ರಿಯೋ ಭವತಿ ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ ॥ಬೃ.ಆ.ಉ.॥

ವಿವಾಹಪ್ರಕರಣದಲ್ಲಿ ವಿವರಿಸಿದೆ. ಈ ಶ್ರುತಿಯಂತೆ ದೇಹಸಂಗಕ್ಕೆ ಅವಕಾಶವಾಗುವುದು. ಹೀಗೆ ಪ್ರಾಪ್ತವಾದ ಗಮ್ಯತ್ವವು ಧರ್ಮಪ್ರಜಾಸಂಪದರ್ಥವಾದುದರಿಂದ ಧರ್ಮ್ಯವು, ಆಚರಣೀಯವು, ಶ್ರೇಯಸ್ಸಿಗೆ ಹೇತುವು. ಯಾವುದಾದರೂ ಧರ್ಮಕಾರ್ಯವನ್ನು ನಿಯಮವಾಗಿ ಆಚರಿಸುವುದೇ ವ್ರತವು. ವಿವಾಹಕ್ಕೆ ಪೂರ್ವಭಾವಿ ಕುಮಾರೀ ಅವಸ್ಥೆಯಲ್ಲಿಯೂ ಭರ್ತೃವಿಯೋಗಾನಂತರದಲ್ಲಿ ವಿಧವಾವಸ್ಥೆಯಲ್ಲಿಯೂ ಗಮ್ಯನೇ ಇಲ್ಲದಿರುವುದರಿಂದ ಆ ಅವಸ್ಥೆಗಳಲ್ಲಿ ಪುರುಷಸಂಗವೇ ವರ್ಜ್ಯವು. ಪತಿಯಿದ್ದಾಗ ಪತಿ ವಿನಾ ಮಿಕ್ಕವರೆಲ್ಲರೂ ಅಗಮ್ಯರಾದುದರಿಂದ ಅವರೊಡನೆ ಸಂಪರ್ಕವನ್ನು ಹೊಂದುವುದು ವ್ಯಭಿಚಾರ. ಇದೇ ಪಾತಿವ್ರತ್ಯದ ವ್ಯವಸ್ಥೆ. ಸ್ತ್ರೀಗೆ ದ್ವಿತೀಯ ವಿವಾಹವಾಗುವ ಸಂಪ್ರದಾಯದಲ್ಲಿಯೂ ವಿವಾಹದಿಂದಲೇ ಗಮ್ಯತ್ವವು, ಅನ್ಯಥಾ ಅಗಮ್ಯತ್ವವು. ಈ ಸಿದ್ಧಾಂತದಮೇಲೆಯೇ ಸರ್ವರಲ್ಲಿಯೂ ಧರ್ಮ, ಚಾರಿತ್ರ್ಯ, ದಾಯಭಾಗ, ಮುಂತಾದವುಗಳು ವ್ಯವಸ್ಥಿತವಾಗಿರುವುದು. ಪತಿಯ ವರ್ತನವು ಶಂಕನೀಯವಾಗಲೀ ನಿಂದ್ಯವಾಗಲೀ ಪತಿಯೆಂಬುದಕ್ಕೆ ಚ್ಯುತಿಯಿಲ್ಲ. ಪಾತಿವ್ರತ್ಯಕ್ಕೆ ಅಷ್ಟೇ ಸಾಕು. ಪತಿಯು ಕುಕರ್ಮಿಯೆಂದು ಅವನನ್ನು ಅನುಕರಿಸುವುದು ಸಾಧುವಲ್ಲ. ಶಾಸ್ತ್ರದಲ್ಲಿಯೂ ಲೋಕವೃತ್ತದಲ್ಲಿಯೂ ಅನಿಂದ್ಯಕರ್ಮಗಳ ಅನುಕರಣಕ್ಕೆ ಅನುಮತಿಯಿದೆಯೇ ವಿನಾ ನಿಂದ್ಯಕಾರ್ಯಗಳಿಗಿಲ್ಲ.[2] ಅದರಿಂದ ಪತಿಯ ಗುಣಾವಗುಣದ ವಿವೇಚನೆಯೇ ಪಾತಿವ್ರತ್ಯಪ್ರಸಂಗಕ್ಕೆ ಅಸಂಬದ್ಧವಾದುದು. ಪರೋಪಕಾರದಲ್ಲಿ ಪಾತ್ರಾಪಾತ್ರ ವಿಮರ್ಶೆ—ಅದನ್ನು ಆತ್ಮೋಪಕಾರ ವಿಚಾರಕ್ಕೆ ಮಿಶ್ರಮಾಡಬಾರದು. ಉದಾಹರಣೆಗಾಗಿ "ಮಾತೃದೇವೋ ಭವ ಪಿತೃದೇವೋ ಭವ"[3] ಮಾತಾಪಿತೃಗಳನ್ನು ದೇವರೆಂದು ಭಾವಿಸಿ ಸೇವಿಸಬೇಕು ಎಂಬ ಅನುಶಾಸನವನ್ನೇ ವಿಮರ್ಶಿಸೋಣ. ಮಾತಾಪಿತೃಗಳ ವಿಷಯದಲ್ಲಿ ದೇವತ್ವ ಭಾವನೆಯು ಮಾತೃತ್ವಪಿತೃತ್ವವನ್ನಾಶ್ರಯಿಸಿದುದು, ಅವರ ಗುಣಾವಗುಣವನ್ನಲ್ಲ. ದೋಷವನ್ನು ಪರಿಗಣಿಸಲು ಹೊರಟರೆ ಮಾನುಷಜನ್ಮವಾದುದರಿಂದ ಒಂದಲ್ಲ ನೂರಾರು ಸಿಗಬಹುದು, ಅವುಗಳಲ್ಲಿ ಕೇವಲ ಗರ್ಹ್ಯವಾದುವೂ ಇರಬಹುದು. ಅದರಿಂದ ಪೂಜ್ಯಭಾವನೆಗೆ ಲೋಪವಾಗುವುದು, ಪೂಜ್ಯತ್ವಕ್ಕೆ ವಿರೋಧ ಬಂದರೆ ಕರ್ತವ್ಯಲೋಪವಾಗುವುದು. ಹಾಗೆಯೇ ಸಾಂಪ್ರದಾಯಿಕ ದೃಷ್ಟಿಯಿಂದ ಸಂಸ್ಕಾರಜನ್ಯವಾದ ಪತಿಭಾವಕ್ಕೆ ನಿಂದ್ಯತ್ವಗರ್ಹ್ಯತ್ವಗಳ ವಿಚಾರವೇ ಏಳುವುದಿಲ್ಲ. ಇದನ್ನೇ ಮತ್ತೊಂದು ಪ್ರಕಾರದಲ್ಲಿಯೂ ಪುಷ್ಟೀಕರಿಸಬಹುದು. ಪರಪುರುಷ ಸಂಗವು ಧರ್ಮಕ್ಕೆ ವಿರುದ್ಧವಾದ ಕಾಮವು, ಅದು ಸೇವ್ಯವಲ್ಲ, ಪತನಹೇತುವು. ಪಾತಿವ್ರತ್ಯವು ಆತ್ಮಸಂಯಮ ವಿಧಾನವು, ಇಂದ್ರಿಯನಿಗ್ರಹ ನಿಯಮವು, ಅದರಿಂದ ಆಚರ

---

2 ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ನೋ ಇತರಾಣಿ ॥ ತೈ. ಉ.-ಶಿಕ್ಷಾ॥

3 ತೈ. ಉ.-ಶಿಕ್ಷಾ॥

ಣೀಯವು. ಪರಪುರುಷರೆಂದೂ ಪರರೇ, ಪರಸಂಗವೆಂದೂ ವ್ಯಭಿಚಾರವೇ, ಪತಿಯ ಸದ್ಭಾವದಲ್ಲಿ ವ್ಯಭಿಚಾರ, ಅಭಾವದಲ್ಲಲ್ಲ, ಎನ್ನುವ ಮಾತಲ್ಲ. ಇದರ ಮೇಲೆ ವಿಧಿಯಾದುದರಿಂದಲೂ ಶ್ರುತಿಸ್ಮೃತ್ಯುಕ್ತವಾದುದರಿಂದಲೂ ಮೀಮಾಂಸ್ಯವೇ ಅಲ್ಲ.[4] ಮಹಾಭಾಗಳೂ ಪತಿವ್ರತಾಶಿರೋಮಣಿಯೂ ಆದ ಅನಸೂಯಾದೇವಿಯು ಸೀತೆಗೆ ಹೇಳಿದ ಮಾತಿದು—"ಪತಿಯು ಹೇಗೇ ಇರಲಿ ಸ್ತ್ರೀಗೆ ಪ್ರಿಯನು. ಪತಿಯು ದುಶ್ಶೀಲನಾಗಲಿ, ಕಾಮವೃತ್ತನಾಗಲಿ ಸಾಧುಸ್ತ್ರೀಗೆ ಪರಮದೈವವು ಎಂದು".[5]

## ೫. ಸ್ತ್ರೀಸ್ವಾತಂತ್ರ್ಯ

ಸ್ತ್ರೀಯನ್ನು ರಕ್ಷಿಸುವ ಭಾರವು ಪುರುಷನದು. ಕುಮಾರಿಯಾಗಿರುವಾಗ ತಂದೆಯೂ, ಯುವತಿಯಾಗಿರುವಾಗ ಪತಿಯೂ, ವೃದ್ಧಳಾಗಿರುವಾಗ (ಪತಿಯ ಅನಂತರ) ಪುತ್ರರೂ ರಕ್ಷಿಸುತ್ತಾರೆ, ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ, ಎಂದು ಮನುವಚನವಿದೆ. ಕನ್ಯೆಯಾಗಿದ್ದಾಗ ತಂದೆಯೂ, ವಿವಾಹಿತಳಾದಮೇಲೆ ಪತಿಯೂ, ವೃದ್ಧಾಪ್ಯದಲ್ಲಿ ಪುತ್ರರೂ, ಈ ಯಾರೂ ಇಲ್ಲದಿದ್ದರೆ ಇತರ ಜ್ಞಾತಿಗಳೂ ರಕ್ಷಿಸಬೇಕು. ಯಾವ ಅವಸ್ಥೆಯಲ್ಲಿಯೂ ಸ್ತ್ರೀಗೆ ಸ್ವತಂತ್ರವಿಲ್ಲವೆಂದು ಯಾಜ್ಞವಲ್ಕ್ಯರೂ ಹೇಳಿದ್ದಾರೆ. ವಿಜ್ಞಾನೇಶ್ವರರು ಮಿತಾಕ್ಷರದಲ್ಲಿ ಉಭಯ ಕುಲದಲ್ಲಿ ಯಾರೂ ಇಲ್ಲದಿದ್ದರೆ ಸ್ತ್ರೀಗೆ ರಾಜನೇ ಪಾಲಿಸುವವನೂ ರಕ್ಷಕನೂ, ಎಂದು ಹೇಳಿದ್ದಾರೆ.[1] ಎಲ್ಲಾ ಸ್ಮೃತಿಕಾರರೂ ಇದನ್ನೇ ಅನುಮೋದಿಸಿದ್ದಾರೆ. "ನ ಸ್ತ್ರೀಸ್ವಾತಂತ್ರ್ಯಮರ್ಹತಿ" ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂಬುದು ಮನುವಚನದ ಒಂದು ತುಂಡು. ಈ ಒಂದು ತುಂಡನ್ನು ಮಾತ್ರ ಹಿಡಿದು ಕಡಿದು ಪೂರ್ವಪಕ್ಷಗಳು ಶಾಖೋಪಶಾಖವಾಗಿ ಪ್ರಸರಿಸಿ ವಿವಾದಕ್ಕೇ ಇಟ್ಟುಕೊಂಡಿದೆ. ಅಜ್ಞರು ಅಜ್ಞರೇ, ಅವರ ಮಾತು ಹಾಗಿರಲಿ. ಅವಹೇಳನಮಾಡುವವರಿಗೆ ಪರನಿಂದೆಯೇ ಪ್ರಕೃತ, ಅವರ ಮಾತೂ ಬೇಡ. ನಮ್ಮಲ್ಲಿಯೇ ವಿಜ್ಞರೂ ಈ ವಚನದ ತುಂಡಿಗೆ ಸ್ತ್ರೀಗೆ ಸ್ವಾತಂತ್ರ್ಯವೇ ಇಲ್ಲ, ಪಾರತಂತ್ರ್ಯವೇ ಶಾಶ್ವತ,[2] ಎಂಬರ್ಥವನ್ನು ಮಾಡಿರುವುದೀಗ ಶೋಚ

---

4 ತೇ ಸರ್ವಾರ್ಥೇಷ್ವಮೀಮಾಂಸ್ಯೇ । (ತೇ–ಶ್ರುತಿಸ್ಮೃತಯಃ) ॥ಮ-ii-೧೦॥

5 ನಗರಸ್ಥೋ ವನಸ್ಥೋ ವಾ ಪಾಪೋ ವಾ ಯದಿ ವಾ ಶುಭಃ । ಯಾಸಾಂ ಸ್ತ್ರೀಣಾಂ ಪ್ರಿಯೋ ಭರ್ತಾ ತಾಸಾಂ ಲೋಕಾ ಮಹೋದಯಾಃ॥೨೪॥ ದುಶ್ಶೀಲಃ ಕಾಮವೃತ್ತೋ ವಾ ಧನೈರ್ವಾ ಪರಿವರ್ಜಿತಃ । ಸ್ತ್ರೀಣಾಮಾರ್ಯಸ್ವಭಾವಾನಾಂ ಪರಮಂ ದೈವತಂ ಪತಿಃ ॥ವಾ. ರಾಮಾಯಣ-ಅಯೋ.ಕಾಂ-ಸ. ೧೧೭॥

1 ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ । ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ಮ-ix-೩॥ ರಕ್ಷೇತ್ಕನ್ಯಾಂ ಪಿತಾ ವಿನ್ನಾಂ ಪತಿಃ ಪುತ್ರಾಸ್ತು ವಾರ್ಧಕೇ । ಅಭಾವೇ ಜ್ಞಾತಯಸ್ತೇಷಾಂ ನ ಸ್ವಾತಂತ್ರ್ಯಂಕ್ವಚಿತ್‌ಸ್ತ್ರಿಯಾಃ ॥ಯಾ-i-೮೫॥ ಜ್ಞಾತೀನಾಮಭಾವೇ ರಾಜಾ । "ಪಕ್ಷದ್ವಯಾವಸಾನೇ ತು ರಾಜಾ ಭರ್ತಾ ಪ್ರಭುಸ್ತ್ರಿಯಾಃ" ಇತಿವಚನಾತ್ ॥ಮಿತಾಕ್ಷರಾ॥

2 Perpetual tutelage of woman.

ನೀಯವು. ಈ ಅತಿವಾದದಿಂದ ನಮ್ಮ ಸಮಾಜಕ್ಕೇ ಅಪವಾದವು ಪ್ರಾಪ್ತವಾಗಿದೆ, ಆದರಿಂದ ಈ ವಿಷಯವನ್ನು ಕೂಲಂಕಷವಾಗಿಯೇ ವಿಮರ್ಶಿಸಬೇಕು.

ನಮ್ಮ ಜನತೆಯಲ್ಲಿ ಸ್ತ್ರೀಯರಿಗೆ ಪ್ರಬಲವಾದ ಅನ್ಯಾಯವು ನಡೆದಿದೆ. ಧರ್ಮದ ಹೆಸರಿನಲ್ಲಿ ಅವರನ್ನು ಯಾವಜ್ಜೀವವೂ ಪಾರತಂತ್ರ್ಯದ ಶೃಂಖಲೆಯಿಂದ ಬಿಗಿದಿದ್ದಾರೆ. ಇತರ ನಾಗರಿಕ ಜನಾಂಗಗಳಲ್ಲಿ ಸ್ತ್ರೀಯರು ಸ್ವತಂತ್ರರಾಗಿದ್ದಾರೆ. ಅವರೆದುರಿಗೆ ನಾವು ತಲೆಯನ್ನೆತ್ತುವಹಾಗಿಲ್ಲ. ಸರ್ವಾವಸ್ಥೆಯಲ್ಲಿಯೂ ಸ್ತ್ರೀಯರು ಪುರುಷರ ಅಧೀನದಲ್ಲಿರಬೇಕು, ಸ್ವಾತಂತ್ರ್ಯಕ್ಕೆ ಅರ್ಹರೇ ಅಲ್ಲ. ಮನುವು ಪರಾಧೀನತೆಯನ್ನು ಬರೆದಿಟ್ಟನು, ಸ್ಮೃತಿಕಾರರೆಲ್ಲರೂ ಅದನ್ನೇ ಹಾಡಿದರು, ಪುರಾಣೇತಿಹಾಸಗಳಲ್ಲಿಯೂ ಅದೇ ರಾಗ, ಸಾಹಿತ್ಯದಲ್ಲಿಯೂ ಅದೇ ಕೀರ್ತನೆ. ಅರಿಯದ ಸ್ತ್ರೀಯರು ಅದಕ್ಕೆ ಮರುಳಾದರು. ಪುರುಷರನ್ನು ಹಿಡಿಯುವವರೇ ಇಲ್ಲ, ಅವರಾಡಿದಾಟವಾಯಿತು. ಕುಮಾರಿಯರನ್ನು ತೋರಿದವರಿಗೆ ಕೊಡಬಹುದು, ಹೆಣ್ಣಿಗೆ ಗಂಡನ್ನು ಒಪ್ಪುವ ಸ್ವತಂತ್ರವಿಲ್ಲ, ಸ್ವತಂತ್ರವೇನು—ಪ್ರಸಕ್ತಿಯೂ ಇಲ್ಲ. ಯಾವನೋ ಕತ್ತಿಗೆ ತಾಳಿಯನ್ನು ಕಟ್ಟಿದರೆ, ಅವನೇ ಪತಿ, ಸ್ವಾಮಿ, ದೇವರು, ಪತ್ನಿಯನ್ನು ಸೇವೆಗೂ ಕಾಮೋಪಭೋಗಕ್ಕೂ ಸೃಷ್ಟಿಸಿದ ಪ್ರಾಣಿಯೆಂದು ಭಾವಿಸುತ್ತಾನೆ. ಪತ್ನಿಯು ಅವನನ್ನೂ ಅವನ ಕಡೆಯವರನ್ನೂ ಆರಾಧಿಸಿ ಸೇವಿಸಿ ಅಪಚಾರಗಳನ್ನೆಲ್ಲ ಸಹಿಸಿಕೊಂಡು ಅವರ ಹಸಾದಕ್ಕೆ ಹಮ್ಮೈಸಿ ತನ್ನ ಯೋಗಕ್ಷೇಮವನ್ನೇ ಮರೆತು ಜನ್ಮವನ್ನು ಸಾರ್ಥಕಗೊಳಿಸಬೇಕು. ಪತಿಯಿದ್ದಾಗ ಈ ಗೋಳು, ಗತಿಸಿದ ಮೇಲಂತೂ ಗೋಳೇ ಗೋಳು—ಸುಖವಿಲ್ಲ, ಸೌಭಾಗ್ಯವಿಲ್ಲ, ಮಾನಮರ್ಯಾದೆಯಿಲ್ಲ. ಇದು ನರಜೀವನ, ಧರ್ಮಜೀವನ! ಪ್ರತ್ಯಕ್ಷವಾದ ಸೌಖ್ಯವನ್ನು ತ್ಯಜಿಸಿ ಪರೋಕ್ಷವೂ ಸಂಶಯಾತ್ಮಕವೂ ಆದ ಪಾರಲೌಕಿಕ ಮರುಮರೀಚಿಕೆಗೆ ಬಾಯಿಬಿಡುವುದೇನೂ ಬುದ್ಧಿವಂತಿಕೆಯಲ್ಲ. ಅಲ್ಲಿ ತಾನೇ ಏನು—ಭರ್ತೃಲೋಕ, ಭರ್ತೃಸಾನ್ನಿಧ್ಯ, ಭರ್ತೃಪರಾಧೀನತೆ, ಅಲ್ಲಿಯೂ ನಿಷ್ಕೃತಿಯಿಲ್ಲ. ಇತ್ಯಾದಿ ಪೂರ್ವಪಕ್ಷಗಳು ಪರದೇಶೀಯರು ಕಲಿಸಿದುದು, ನಮ್ಮವರು ಕಲಿತಾಡುವುದು.

ಅನ್ನುವ ಹಾಗೆ ದುರದೃಷ್ಟಕ್ಕೆ ದುಷ್ಟರೂ ಇದ್ದಾರೆ. ದುರಾಗತವನ್ನೂ ಮಾಡುತ್ತಾರೆ, ಧರ್ಮವಚನವನ್ನೂ ದುರುಪಯೋಗಪಡಿಸುತ್ತಾರೆ, ಕೈಗೆ ಸಿಕ್ಕಿದ ಹೆಣ್ಣನ್ನು ಹುರಿದೂ ಮುಕ್ಕುತ್ತಾರೆ. ದುರ್ವಿದಗ್ಧ ಪುರುಷರೂ ಇದ್ದಾರೆ, ಅಜ್ಞರೂ ಪಂಡಿತಮಾನಿನಿಯರೂ ಸ್ವಜಾತಿವೈರಿಗಳೂ ಆದ ಸ್ತ್ರೀಯರೂ ಇದ್ದಾರೆ. ಅವರನ್ನು ಉದ್ರೇಕಗೊಳಿಸುವ ಯುವಯುವತಿಯರೂ ದುರ್ವಿದಗ್ಧದುರ್ವಿನೀತರೂ ಪಿಶುನಪುರೋಭಾಗಿಗಳೂ ಇದ್ದಾರೆ. ನಮ್ಮಲ್ಲಿ ಮಾತ್ರವೇ ಅಲ್ಲ, ಎಲ್ಲಾ ಜನಾಂಗಗಳಲ್ಲಿಯೂ ಇದ್ದಾರೆ. ಅಂಥಾವರ ಸಂಖ್ಯೆ ಅತ್ಯಲ್ಪ. ತನ್ಮಯವಾಗಿದ್ದರೆ "ನಗ್ನಕ್ಷಪಣಕೇ ದೇಶೇ ರಜಕಃ ಕಿಂಕರಿಷ್ಯತಿ"—ನಗ್ನರೇ ಇರುವ ದೇಶದಲ್ಲಿ ಅಗಸನಿಗೇನು ಕೆಲಸವೆಂದು ಧರ್ಮಪ್ರಸಕ್ತಿಗೇ ಹೋಗಬೇಕಾದುದಿರಲಿಲ್ಲ. ಲೋಕದಲ್ಲಿ ಅಲಕ್ಷಣ

ವಿಲಕ್ಷಣಗಳೇ ಕಣ್ಣಿಗೆ ಕಾಣಿಸುವುದು. ಗಗನದಲ್ಲಿ ತೊಳಗುವ ಅನಂತ ತಾರೆಗಳಲ್ಲ–ಉಲ್ಕಾಪಾತವೇ ದೃಷ್ಟಿಯನ್ನು ಸೆಳೆಯುವುದು. ಸಂತುಷ್ಟಸಾತ್ವಿಕಜೀವನಗಳು ಅನಂತವಾಗಿದ್ದರೂ, ದುಷ್ಟರ ದೌಷ್ಟ್ಯವೇ ಹೃದಯವನ್ನು ಕಲಕುವುದು. ಅದನ್ನೇ ಪ್ರಧಾನವಾಗಿಟ್ಟುಕೊಂಡು ಜನ ಜನಾಂಗವನ್ನೇ ನಿಂದಿಸುವುದು ನ್ಯಾಯವಲ್ಲ. ಸ್ತ್ರೀರತ್ನಳಾದ ಸೀತಾದೇವಿಯು "ಪೃಥಕ್‌ಸ್ತ್ರೀಣಾಂ ಪ್ರಚಾರೇಣ ಜಾತಿಂ ತ್ವಂ ಪರಿ ಶಂಕಸೇ"—ವಿಲಕ್ಷಣ ಸ್ತ್ರೀಯರ ಪ್ರಚಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಸ್ತ್ರೀ ಜಾತಿಯ ಮೇಲೆಯೇ ನೀನು ಶಂಕೆಪಡುತ್ತಿದ್ದೀಯೆ, ಎಂದು ನುಡಿದ ನ್ಯಾಯವೇ ಹಲವು ದುಷ್ಟರ ದುಸ್ಸ್ವಭಾವದ ಆಧಾರದಮೇಲೆ ಪುರುಷಜಾತಿಯನ್ನೇ ನಿಂದಿಸ ಬಾರದು ಎಂಬುದಕ್ಕೂ ಅನ್ವಯಿಸುತ್ತದೆ. ಇಷ್ಟಕ್ಕೂ ದುಷ್ಟಪುರುಷರು ಮಾತ್ರವಲ್ಲ, ದುಷ್ಟ ಸ್ತ್ರೀಯರೂ ಇದ್ದಾರೆ—ಎರಡು ಕೈ ಸೇರಿದರೇ ಚಪ್ಪಾಳೆ. ಒಬ್ಬರನ್ನೇ ನಿಂದಿಸ ಬಾರದು. ಇದರ ಮೇಲೋ ಸ್ತ್ರೀಯರು ಜಾತಿಯನ್ನು ನಿಂದಿಸುತ್ತಾರೆಯೇ ವಿನಾ ತಮ್ಮ ಪತಿಗಳನ್ನು ವೈಯಕ್ತಿಕವಾಗಿ ನಿಂದಿಸುವವರು ಅಪೂರ್ವ. ತಾಯಿತಂದೆಗಳಿಗೆ ಗಂಡುಮಕ್ಕಳ·ಮೇಲೆ ವಿಶ್ವಾಸವು ತಪ್ಪುವುದು ಸೊಸೆಯು ಬಂದಮೇಲೆಯೇ, ಅತ್ತೆ ಮಾವಂದಿರು ಕೆಟ್ಟವರಾಗುವುದು ಮಗಳು ಗಂಡನ ಮನೆಯನ್ನು ಸೇರಿದಮೇಲೆಯೇ. ಇದರ ಅಂತರ್ಯವನ್ನು ಸೂಕ್ಷ್ಮಪ್ರಕೃತಿಯ ಸ್ತ್ರೀಯರೇ ಇತ್ಯರ್ಥಮಾಡಬೇಕು.

ಮೊದಲೀಆಕ್ಷೇಪಗಳನ್ನು ಒಂದೊಂದಾಗಿ ವಿಮರ್ಶಿಸೋಣ. (1) **ಕನ್ಯೆಯ ಆಪ್ತರು ವರನನ್ನಾರಿಸುವುದು ನಿಜ.** ಹೆಣ್ಣಿಗೆ ಮಾತ್ರವೇ ಅಲ್ಲ, ಗಂಡಿಗೂ ಹೆಣ್ಣನ್ನು ಆರಿಸುತ್ತಾರೆ. ಹೆಣ್ಣು ಚಿಕ್ಕದು, ಅನುಭವವಿಲ್ಲ, ರೂಪಕ್ಕೂ ವೇಷಕ್ಕೂ ಮೋಸಕ್ಕೂ ಮರುಳಾದೀತು, ನಾವು ಅನುಭವಸ್ಥರು, ಸಂಸಾರದಲ್ಲಿ ನುರುಗಿದವರು, ಹುಡುಗಿಗೆ ಆಪ್ತರು, ಅವಳ ಪುರೋಭಿವೃದ್ಧಿಗೆ ಬಾಧ್ಯರು, ಎಂದು ಆರಿಸುತ್ತಾರೆ—ಅನಾಮಧೇಯನನ್ನೇ ಆರಿಸುತ್ತೇವೆಂದಾರಿಸುವುದಿಲ್ಲ, ಅದರಲ್ಲಿ ಸ್ವಕಾರ್ಯವೇನೂ ಇಲ್ಲ. ಯೋಗ್ಯ ಅನುರೂಪ ಸಂಭಾವಿತ ಎಂದಾರಿಸುತ್ತಾರೆ, ಮಾನವವ್ಯಾಪಾರವಾದುದ ರಿಂದ ತ್ರುಟಿಯೂ ಸಂಭವಿಸಬಹುದು. ಹೆಣ್ಣೇ ಆರಿಸಿದರೂ ತ್ರುಟಿಯಾಗುವುದಿಲ್ಲ ವೇನು—ಮತ್ತೂ ಹೆಚ್ಚು. ಹೆಣ್ಣೇ ವರಿಸುವ ಸಂಪ್ರದಾಯದ ಜನಾಂಗಗಳಲ್ಲಿಯೂ ವರಿಸಿದಮೇಲೆ ತಂದೆತಾಯಿಗಳ ಅನುಮತಿ ಕೇಳುವ ಪದ್ಧತಿಯೂ ಇದೆ, ವಿವಾಹ ವಿಚ್ಛೇದದ ಚಿತ್ರವಿಚಿತ್ರ ವ್ಯವಹಾರಗಳೂ ನಡೆಯುತ್ತಲೇ ಇವೆ. ದೂರಕ್ಕೆ ಬೆಟ್ಟವು ನುಣ್ಣಗೇ ಕಾಣುವುದು, ಕಂಡುದೆಲ್ಲವೂ ನಿಜವಲ್ಲ. ಶ್ರೀಮಂತನೇ ಬೇಕು, ಶ್ರುತ ವಂತನೇ ಬೇಕು, ರೂಪವಂತನೇ ಬೇಕು, ಸಂಭಾವಿತನೇ ಬೇಕು, ಸೌಮ್ಯ ನಾಗಿಯೂ ಇರಬೇಕು, ಹೃಷ್ಟಪುಷ್ಟನೂ ಆಗಿರಬೇಕು—ಎಲ್ಲಾ ಸೌಭಾಗ್ಯವೂ ಇರಬೇಕು. ಇದ್ದು ಸಿಕ್ಕಿದರೆ ಯಾರೂ ಬೇಡವೆನ್ನುವುದಿಲ್ಲ. ಆದರೆ, ಕನ್ಯಾ ದಾತನೂ ಕುಬೇರನಲ್ಲ—ಕನ್ಯೆಯೂ ಮಹಾಲಕ್ಷ್ಮಿಯಲ್ಲ, ದಾತನೂ ಇಂದ್ರೋ ಪೇಂದ್ರನಲ್ಲ—ಕನ್ಯೆಯೂ ಇಂದಿರೇಂದ್ರಾಣಿಯಲ್ಲ, ದಾತನೂ ಸರ್ವಜ್ಞನಲ್ಲ—

ಕನ್ಯೆಯೂ ಸರಸ್ವತಿಯಲ್ಲ, ದಾತನೂ ಮನ್ಮಥನಲ್ಲ—ಕನ್ಯೆಯೂ ರತಿಯಲ್ಲ. ಅಂತಸ್ತಿಗೆ ಅನುರೂಪನು ದೊರೆಯುವುದೇ ದುರ್ಲಭವಾಗಿರುವಾಗ ಸರ್ವೋತ್ತಮನು ಸಿಗುವುದು ಹೇಗೆ, ಸಿಕ್ಕಿದರೂ ಏತಕ್ಕೆ ಒಪ್ಪುತ್ತಾನೆ ? ಇದರ ಮೇಲೆ ಬೇಕಾದವರು ಬೇಕಾದವರನ್ನಾರಿಸಿಕೊಳ್ಳಿ ಎಂದು ವರರು ನಿಂತಿರುವುದಿಲ್ಲ. ವರನಿಗೂ ಇಷ್ಟಳಾದ ವಧುವೇ ಬೇಕು. ವರನ ಮಾತಾಪಿತೃಗಳಿಗೂ ಇಷ್ಟಳೂ ದಕ್ಷಳೂ ಆದ ಸೊಸೆಯೇ ಬೇಕು. ಅವರೂ ಆಲೋಚಿಸಿ ತಮ್ಮ ಇಷ್ಟಾನಿಷ್ಟಗಳ ಆಧಾರದ ಮೇಲೆ ಒಪ್ಪಬೇಕು. ಎಲ್ಲವೂನಡೆದು ಒಮ್ಮತಕ್ಕೆ ಬಂದರೇ ಒಪ್ಪಂದ. ಬೇಕೆನ್ನುವುದು ಸಹಜವೇ—ಮನೋರಥಕ್ಕೆ ಅಡ್ಡಿ ಆತಂಕವೇ ಇಲ್ಲ, ಆದರೆ ಬಂಡಿಯು ಬಂಡಿಯ ಮಾರ್ಗದಲ್ಲಿ ನಡೆಯಬೇಕು (2) **ಕನ್ಯಾದಾನ ಮಾಡುತ್ತಾರೆ ನಿಜ.** ಅದೊಂದು ವಿಧ್ಯುಕ್ತವಾದ ಕರ್ಮವೆಂದು ಮಾಡುತ್ತಾರೆ, ವಿವಾಹಸಂಸ್ಕಾರದಿಂದ ಪತಿಪತ್ನೀತ್ವವು ಭದ್ರವಾಗ ಬೇಕೆಂದು ಮಾಡುತ್ತಾರೆ. ದಾನವೆಂದರೆ ಇತರ ದಾನದ ಹಾಗೆ ತಮ್ಮದನ್ನು ಕೊಟ್ಟು ತಾವು ನಿವೃತ್ತರಾಗುವುದಲ್ಲ, ದಾನಶಬ್ದಕ್ಕೆ ಕೊಡುವುದೆಂದಷ್ಟೇ ಅರ್ಥವು. ನಮ್ಮ ಹಂಗು ಹರಿಯಿತು, ನೀನೇನುಬೇಕಾದರೂ ಮಾಡಿಕೋ, ಇಟ್ಟುಕೊಂಡಾದರೂ ಇಟ್ಟುಕೋ, ಬಿಟ್ಟಾದರೂ ಬಿಡು, ಎಂದು ಕೊಡುವುದಿಲ್ಲ. ಧರ್ಮದಲ್ಲಿಯೂ ಅರ್ಥದಲ್ಲಿಯೂ ಕಾಮದಲ್ಲಿಯೂ ಇವಳನ್ನು ಅತಿಕ್ರಮಿಸಿ ನಡೆಯಬಾರದು ಎಂದು ವಿಧಾಯಕ ಮಾಡಿ[3] ಹಾಗೆಯೇ ವರನಿಂದ ಪ್ರತಿಜ್ಞೆಯನ್ನು ಮಾಡಿಸಿಕೊಂಡೇ[4] ಕೊಡುತ್ತಾರೆ, ಸ್ನೇಹದಿಂದ ಪಾಲಿಸು ಎಂದೇ ಒಪ್ಪಿಸುತ್ತಾರೆ. ಎಷ್ಟು ಮಮತೆಯಿಂದ ಸಾಕಿದರೂ ಹೆಣ್ಣನ್ನು ಪರನಿಗೆ ಕೊಡಲೇಬೇಕೆಂದು ಕೊಡುತ್ತಾರೆ[5] ಅಳುತ್ತಲೇ ಕೊಡುತ್ತಾರೆ, ಅಳುತ್ತಲೇ ಒಪ್ಪಿಸುತ್ತಾರೆ, ಅಳುತ್ತಲೇ ಕಳುಹಿಸುತ್ತಾರೆ, ಅತ್ತಾಳೆಂದು ಆಗಾಗ ಕರೆತಂದು ತೌರೂ ಕಾಣಿಸುತ್ತಾರೆ. ಹುಡುಗಿಯೂ ನಗು ನಗುತ್ತಲೇ ಮದುವೆ ಮಾಡಿಕೊಳ್ಳುತ್ತಾಳೆ, ಗಂಡನ ಜತೆಯಲ್ಲಿ ಹೋಗುವುದಕ್ಕೆ ಸಂಭ್ರಮವೂ ಪಡುತ್ತಾಳೆ, ಬಿಟ್ಟು ಹೋಗಬೇಕಲ್ಲ ಎಂದಳುತ್ತಾಳೆ. ಪತಿಗೆ ನಿರಂಕುಶ ಪ್ರಭುತ್ವವಿಲ್ಲ, ವಿಕ್ರಯದಿಂದಾಗಲೀ ತ್ಯಾಗದ ಮೂಲಕವಾಗಲೀ ಪತ್ನಿಯನ್ನು ಬಿಡುವುದಕ್ಕಿಲ್ಲ,[6] ಅದರಮೇಲೂ ಅತಿಕ್ರಮಿಸಿ ನಡೆದರೆ ರಾಜದಂಡಾದಿಗಳಿಗೆ

---

3 ಕನ್ಯಾದಾತ–"ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಿತವ್ಯಾ"—ವರ–"ನಾತಿಚರಾಮಿ"

4 ಅಷ್ಟವರ್ಷಾ ಭವೇತ್ಕನ್ಯಾ ಪುತ್ರವತ್ಪಾಲಿತಾ ಮಯಾ । ಇದಾನೀಂ ತವ ಸೇವಾಯ ದತ್ತಾ ಸ್ನೇಹೇನ ಪಾಲಯ ॥ ಎಂದು ಹೆಣ್ಣೊಪ್ಪಿಸುವಾಗ ಹೇಳುವುದು. ಸೇವಾಯ–ಸೇವೆಗೆ ಎಂದಿರುವುದು ವಿನಯದ ಮಾತು, ಅಧಿಕಾರಿಗಳು ಪ್ರಜಾಸೇವೆ ಅನ್ನುವುದಿಲ್ಲವೆ ಅಂಥಾ ಸೇವೆ ಎಂಬ ಮಾತು.

5 ಅರ್ಥೋ ಹಿ ಕನ್ಯಾ ಪರಕೀಯ ಏವ ॥ಕಣ್ವವಾಕ್ಯ—ಶಾಕುಂತಲ॥

6 ನನಿಷ್ಕ್ರಯವಿಸರ್ಗಾಭ್ಯಾಂ ಭರ್ತುರ್ಭಾರ್ಯಾ ವಿಮುಚ್ಯತೇ । ಏವಂ ಧರ್ಮಂ ವಿಜಾನೀಮಃ ಪ್ರಾಕ್ಪ್ರಜಾಪತಿನಿರ್ಮಿತಂ ॥ಮ–ix–೪೬॥

ಗುರಿಯಾಗಬೇಕಾಗುತ್ತೆಂದು[7] ಧೈರ್ಯವಾಗಿಯೂ ಇರುತ್ತಾರೆ, ಪ್ರಚಾರದಲ್ಲಿರುವ ಕಾನೂನಿನ ಭದ್ರತೆಯನ್ನೂ ಅರಿತಿರುತ್ತಾರೆ, ದನದಂತೆ ಕ್ರೀತಳೂ ದತ್ತಳೂ ಆದಳೆಂದು ಯಾರೂ ಯಾವ ಕನ್ನಿಕೆಯೂ ಭಾವಿಸುವುದಿಲ್ಲ. (3) **ಪತಿಯನ್ನು ಪತಿ ಸ್ವಾಮಿ ದೇವರು ಅನ್ನುವ ಮಾತು**—ಪತಿಯೆಂಬುದು ಸಂಬಂಧದ ಹೆಸರು–ಗಂಡನು ಪತಿಯಾದರೆ ಹೆಂಡತಿಯು ಪತ್ನಿಯಾಗುತ್ತಾಳೆ. ಸ್ವಾಮಿ ಎಂಬುದು ವಿನಯದ, ಸೌಜನ್ಯದ ಮಾತು—ಸ್ವಾಮಿಯೆಂದ ಮಾತ್ರಕ್ಕೇ ಪ್ರಭುವೂ ಆಗುವುದಿಲ್ಲ, ಸ್ವಾಮಿ ಎಂದವರು ಭೃತ್ಯರೂ ಆಗುವುದಿಲ್ಲ. ದೇವರೆಂಬುದೊಂದು ಭಾವನೆಯು, ಮರ್ಯಾದೆಯ ಮಾತು, ಗುರುದೇವ ಅಂದಹಾಗೆ ಗೌರವವನ್ನು ಸೂಚಿಸುವ ಮಾತು. ದೇವರೆಂಬುದೂ ಸಾಮಾನ್ಯವಾಗಿ ಭವ್ಯವಸ್ತುವಿನ ಭಾವನೆಯೇ ತಾನೆ, ಹಾಗೆ ನೋಡಿದರೆ ಮಕ್ಕಳನ್ನೂ ದೇವರು ಅನ್ನುವುದಿಲ್ಲವೇನು? (4) **ಕಾಮೋಪಭೋಗದ ವಸ್ತುವೆಂದು ಭಾವಿಸುತ್ತಾನೆಂ**ಬ ಆಕ್ಷೇಪದಲ್ಲಿ ತಿರುಳಿಲ್ಲ—ಅದು ಕಾಕಾಕ್ಷಿಗೋಲಕ ನ್ಯಾಯದ್ದು.[8] ಉಪಭೋಗವು ಉಭಯಾತ್ಮಕವಾದುದು, ಏಕದೇಶೀಯವಾದುದಲ್ಲ. ಹೆಣ್ಣು ರೂಪಯೌವನಶಾಲಿಯನ್ನೇ ಅಪೇಕ್ಷಿಸುವುದಕ್ಕೂ ಅದೇ ಆಕ್ಷೇಪವನ್ನು ತಿರುಗಿಸಬಹುದು—ಅದು ಬೇಡ. ಸುಮ್ಮನೆ ಧರ್ಮಶಾಸ್ತ್ರಕಾರರನ್ನು ಹಳಿಯಬಾರದು. ಧರ್ಮಜೀವನವನ್ನೇ ಪ್ರಧಾನವಾಗಿಯೂ, ಧರ್ಮಕ್ಕೆ ವಿರುದ್ಧವಾದ ಕಾಮವನ್ನು ನಿಂದ್ಯವಾಗಿಯೂ, ಪ್ರತಿಪಾದಿಸುವ ಶಾಸ್ತ್ರಕಾರರು ಸ್ತ್ರೀಯನ್ನು ಪತ್ನಿ[9] ಧರ್ಮಪತ್ನಿ[10] ಸಹಧರ್ಮಿಣಿ[11] ದ್ವಿತೀಯೆ[12] ಜಾಯೆ[13] ಎಂದಿರುವರೇ ಹೊರತು ಕಾಮೋಪಭೋಗದ ಸಾಮಗ್ರಿಯೆಂದೆಲ್ಲಿಯೂ ಹೇಳಿಲ್ಲ. (5) ಮಿಕ್ಕುದು **ಪತಿಯ ಬಂಧುಗಳ ವಿಷಯವಾದ ಆಕ್ಷೇಪ**—ಪತಿಗೆ ಬಂಧು

---

7 ನ ಮಾತಾ ನ ಪಿತಾ ನ ಸ್ತ್ರೀ ನ ಪುತ್ರಸ್ತ್ಯಾಗಮರ್ಹತಿ । ತ್ಯಜನ್ನಪತಿತಾನೇತಾನ್ ರಾಜ್ಞಾ ದಂಡ್ಯಶ್ಶತಾನಿ ಷಟ್ ॥ಮ-viii-೩೮೯॥

8 ಕಾಗೆಯ ಕಣ್ಣುಗುಡ್ಡೆಯು ಬೇಕಾದ ಕಡೆಗೆ ತಿರುಗಬಹುದು, ಎಂಬಂತೆ ಇಷ್ಟವನ್ನು ಸಾಧಿಸಲು ಬೇಕಾದ ಕಡೆಗೆ ತಿರುಗಿಸಿ ಆಡುವ ವಾದವು.

9 ಪತ್ಯುರನಯಾ ಸಹ ಯಜ್ಞಯೋಗಸ್ಸಂಬಂಧ್ಯತ ಇತಿ ಪತ್ನೀ—ಪತಿಗೆ ಯಜ್ಞ ಮಾಡುವ ಯೋಗವು ಈಕೆಯಿಂದ ಪ್ರಾಪ್ತವಾಗುವುದರಿಂದ ಪತ್ನಿ ಎನ್ನುವುದು.

10 ಧರ್ಮಕಾರ್ಯದಲ್ಲಿ ಜತೆಯಲ್ಲಿರುವವಳು ಧರ್ಮಪತ್ನಿ.

11 ಪತ್ಯಾ ಭರ್ತ್ರಾ ಸಹ ಧರ್ಮಃ ದಾನಯಜ್ಞಾದಿರಸ್ಯಾ ಇತಿ ಸಹಧರ್ಮಿಣೀ—ಪತಿಯೊಡನೆ ಈಕೆಗೂ ದಾನಯಜ್ಞಾದಿ ಧರ್ಮಗಳು ನಡೆಯುವುದರಿಂದ ಸಹಧರ್ಮಿಣಿ.

12 ಯಜ್ಞಾಧಿಕಾರಫಲಭಾಗಿನೋಃ ಜಾಯಾಪತ್ಯೋಃ ಅನ್ಯತರತ್ವೇನೇತಿ ದ್ವಿತೀಯಾ—ಪತಿಪತ್ನಿಯರಲ್ಲೊಬ್ಬೊಬ್ಬರೂ ಯಜ್ಞಾಧಿಕಾರಕ್ಕೂ ಯಜ್ಞಫಲಭಾಗಕ್ಕೂ ಅರ್ಹರಾದುದರಿಂದ ದ್ವಿತೀಯೆ.

13 ಜಾಯತೇ ಅಸ್ಯಾಂ ಪತಿಃ ಪುತ್ರರೂಪೇಣೇತಿ ಜಾಯಾ—ಈಕೆಯಲ್ಲಿ ಪತಿಯು ಪುತ್ರರೂಪದಲ್ಲಿ ತಾನೇ ಜನಿಸುತ್ತಾನಾದುದರಿಂದ ಜಾಯೆ.

ಗಳಿರುತ್ತಾರೆ, ಅವರು ಮೊದಲಿನಿಂದಲೂ ಬಂದವರು, ಸಾಕಿಸಲಹಿದವರೂ ಇರುತ್ತಾರೆ, ಆಪ್ತೇಷ್ಟರೂ ಇರುತ್ತಾರೆ. ಹೊಸದಾಗಿ ಬಂದವರು ಇದ್ದವರನ್ನು ಹೊಂದಿಕೊಂಡಿರಬೇಕು, ಹೊಸ ನೀರು ಹಳೆಯದನ್ನು ಕೊಚ್ಚಿಹಾಕಬಾರದು, ಅದರ ಜತೆಗೆ ಬೆರೆದುಕೊಳ್ಳಬೇಕು. ಬಂದವಳು ನಾನು ನನ್ನ ಕಣ್ಣಿನ ಬೊಂಬೆ ಎನ್ನಬಹುದು, ಪತಿಗದು ಸಾಧ್ಯವಿಲ್ಲ. ಕಿರುಕುಳ ಕೊಡುತ್ತಾರೆಂದರೆ ಭಿನ್ನಭಾವನೆ ಹುಟ್ಟಿ ವಿವಾದವೆದ್ದರೆ ಅದು ಅತಟವಾಗಿಯೇ ಪ್ರವರ್ತಿಸುವುದು. ಅದಕ್ಕೆ ಅವಕಾಶ ಕೊಡದಹಾಗೆ ನಡೆದುಕೊಳ್ಳುವುದು ತಮ್ಮ ಕೈಯಲ್ಲಿರುವಾಗ ಮತ್ತೊಬ್ಬರನ್ನು ದೂರಬಾರದು. ಈ ತತ್ತ್ವವನ್ನೇ ನಮ್ಮ ರಾಷ್ಟ್ರಪಿತನೂ ಪ್ರೀತಿಸಿದರೆ ಪ್ರೀತಿ ಎಂದು ಅನೇಕ ವಿಧವಾಗಿ ಬೋಧಿಸಿರುವುದು. ಸಹಜೀವನದ, ಸಂಸ್ಕೃಷ್ಟಜೀವನದ, ಅಂತರ್ಯವೇ ಸಹನೆ, ಕ್ಷಾಂತಿ. ಇಷ್ಟಕ್ಕೂ ಬಂದ ಸ್ತ್ರೀಯರೆಲ್ಲರೂ ಪರಿಪೂರ್ಣತ್ವದ ಪ್ರತಿಮೆಗಳಲ್ಲ—ಅಂಥಾ ದುರಭಿಮಾನವಿರಬಾರದು, ಆತ್ಮಶೋಧನೆಯೂ ಅವಶ್ಯವೇ.

ಇನ್ನು **ಸ್ವಾತಂತ್ರ್ಯದ ಮೀಮಾಂಸವನ್ನು** ಮಾಡೋಣ. ನಮ್ಮಲ್ಲಿಯೂ ಕಷ್ಟವೋ ಕಾರ್ಪಣ್ಯವೋ ಲಭ್ಯವಾದುದೇ ಅಹೋಭಾಗ್ಯವೆಂದು, ಅರುಂಧತಿಯು ಮಿಣುಕುವಂತೆ, ಇದ್ದೀರಾ ಎಂದರೆ ಇದ್ದೇವೆ, ಎನ್ನುತ್ತಾ ಅನ್ಯೋನ್ಯವಾಗಿ ಜೀವನವನ್ನು ನಡೆಸುತ್ತಾ ಇರುವ ಮಹಾಭಾಗೆಯರೂ ಅನಂತವಾಗಿಯೇ ಇದ್ದಾರೆ. ಆಕ್ಷೇಪಕಾರರು ಅವರನ್ನು ಗಣನೆಗೇ ತೆಗೆದುಕೊಳ್ಳುವುದಿಲ್ಲ; ಎಲ್ಲೋ ಅಲ್ಲೊಬ್ಬ ಇಲ್ಲೊಬ್ಬ ದುಷ್ಟನ ಕೈಗೆ ಸಿಕ್ಕಿ ನರಳುವ ಹೆಣ್ಣಿನ ಬಾಳ್ವೆಗೆ ಮರುಗಿ ಜಾತಿಯನ್ನೇ ದೂರುತ್ತಾರೆ. ವಿಶೇಷದಿಂದ ಸಾಮಾನ್ಯವನ್ನೂ, ವ್ಯಕ್ತಿಯಿಂದ ಜಾತಿಯನ್ನೂ, ತರ್ಕಿಸುವುದು[14] ವಾದದಲ್ಲಿ ದೋಷ.[15] ಏನಾದರೂ ಆಗಲಿ ಪ್ರವಾದವೆದ್ದಿರುವುದರಿಂದ ಮೀಮಾಂಸಮಾಡಬೇಕು. "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ—ಅಂದರೆ ಯಾವ ಸ್ವಾತಂತ್ರ್ಯವನ್ನು ನಿಷೇಧಮಾಡಿದ್ದಾರೆ, ಯಾವ ಪ್ರಕರಣದಲ್ಲಿ ಈ ಮಾತಿನ ತುಂಡು ಪ್ರಯೋಗವಾಗಿದೆ, ಎಂಬುದನ್ನೂ ವಿಚಾರ ಮಾಡಬೇಕು. ಮೂರನೇ ಅಧ್ಯಾಯದಲ್ಲಿ 56–57ನೇ ಶ್ಲೋಕಗಳಲ್ಲಿ ಸ್ತ್ರೀಯರಿಗೆ ಮಾನ್ಯತ್ವವನ್ನೂ ಪೂಜ್ಯತ್ವವನ್ನೂ ವಿಧಿಸಿದ ಮನುವೇ ಸ್ತ್ರೀಯರನ್ನು ಇಷ್ಟು ನಿಕೃಷ್ಟವಾಗಿ ಪರಿಗಣಿಸಿಯಾನೇ ಎಂಬುದನ್ನೂ ಸ್ಮೃತಿಯಲ್ಲಿಡಬೇಕು. ಈ ಮಾತಿನ ತುಂಡಿಗೆ ಅದೇ ಸಂಸ್ಕೃತಿಯ ವಿಜ್ಞರೇನು ವ್ಯಾಖ್ಯಾನ ಮಾಡಿದ್ದಾರೆ ಎಂಬುದನ್ನೂ ತಿಳಿಯಬೇಕು.

ಈ ವಚನವು ಮನುಧರ್ಮಶಾಸ್ತ್ರದ ಒಂಭತ್ತನೇ ಅಧ್ಯಾಯದ ಮೂರನೇ ಶ್ಲೋಕದ ಕೊನೆಯ ಪಾದ. ಧರ್ಮಮಾರ್ಗದಲ್ಲಿ ನಡೆಯುವ ಸ್ತ್ರೀಪುರುಷರು

---

14 To infer the general from the particular, the genus from the species.

15 Fallacy—ಹೇತ್ವಾಭಾಸ.

ಅನೂಚಾನವಾಗಿ ಆಚರಿಸುತ್ತಿರುವ ಶಾಶ್ವತ ಸಂಯೋಗವಿಪ್ರಯೋಗಧರ್ಮಗಳನ್ನು ಹೇಳುತ್ತೇನೆಂದು ಅಧ್ಯಾಯವು ಆರಂಭವಾಗುತ್ತದೆ.[16] ಎರಡನೆಯ ಶ್ಲೋಕದಲ್ಲಿ ರೂಪ ರಸಾದಿಗಳಲ್ಲಿ ಆಸಕ್ತರಾದ ಸ್ತ್ರೀಯರನ್ನು ಅವರ ಆಪ್ತರಾದ ಪುರುಷರು ರಾತ್ರಿ ಹಗಲು ಕಾದು ಅಂಥಾ ಆಸಕ್ತಿಯಲ್ಲಿ ಸ್ವತಂತ್ರರಾಗಿ ಪ್ರವರ್ತಿಸುವುದಕ್ಕೆ ಬಿಡದೆ ರಕ್ಷಿಸಿ ವಶ ದಲ್ಲಿರಿಸಿಕೊಳ್ಳಬೇಕು ಎಂದಿದೆ.[17] ಇದರಲ್ಲಿ ನಿಷಿದ್ಧವಾಗಿರುವುದು ವಿಷಯಾಸಕ್ತಿ[18] ಯಲ್ಲಿ ಮನಸ್ಸೇ ಪ್ರವರ್ತಿಸುವ ಸ್ವಾತಂತ್ರ್ಯವು ಮಾತ್ರವೇ. ಅಂದರೆ ಮನಸ್ಸೇ ನಡೆದು ಕೈಬಿಟ್ಟುಹೋಗಬಾರದೆಂದಭಿಪ್ರಾಯ, ಎಲ್ಲಾ ಪ್ರಕಾರದ ಸ್ವಾತಂತ್ರ್ಯವೂ ನಿಷೇಧಿಸಲ್ಪಟ್ಟಿಲ್ಲ ಎಂಬುದು ಸ್ಪಷ್ಟವಾಗಿದೆ. ಅಂಥಾ ಆಪ್ತರನ್ನು ಮೂರನೆಯ ಶ್ಲೋಕದಲ್ಲಿ ನಿರ್ದೇಶಿಸಿದೆ.—ಬಾಲ್ಯದಲ್ಲಿ ತಂದೆ, ಯೌವನದಲ್ಲಿ ಪತಿ, ವಾರ್ಧಿಕ್ಯದಲ್ಲಿ ಪುತ್ರರು ಎಂದು.[19] ಅಷ್ಟೇ ಹೇಳಿದ್ದರೂ ಸಾಕಾಗುತ್ತಿತ್ತು, ವಿಷಯವು ಪ್ರಮುಖ ವಾದುದರಿಂದ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂದು ಮತ್ತೊಂದಾವೃತ್ತಿ ಹೇಳಿರು ವುದು ಒಂದೇ ಪ್ರಕರಣದಲ್ಲಿ ಒಂದೇ ವಿಷಯವನ್ನೇ ಹೇಳುವಾಗ ಒಂದೇ ಮಾತು ಆವೃತ್ತಿಯಾದರೆ, ವಿಶೇಷ ವಚನದ ವಿಶೇಷ ಸಂದರ್ಭದ ಅಭಾವದಲ್ಲಿ ಹಿಂದಿನ ಮಾತಿಗೆ ಮಾಡಿದ ಅರ್ಥವನ್ನೇ ಮುಂದಿನ ಮಾತಿಗೂ ಮಾಡಬೇಕೆಂಬುದು ಮೀಮಾಂಸದ ನಿಯಮವು ಹಿಂದಣ ಶ್ಲೋಕದಲ್ಲಿ ಸ್ವಾತಂತ್ರ್ಯ ಶಬ್ದಕ್ಕೆ ವಿಷಯಾ ಸಕ್ತಿಯಲ್ಲಿ ಮನಸ್ಸೇ ಪ್ರವರ್ತಿಸುವ ಸ್ವಾತಂತ್ರ್ಯವೆಂದರ್ಥಮಾಡಿ ಮುಂದಣ ಶ್ಲೋಕ ದಲ್ಲಿ ಪ್ರಯೋಗಿಸುವ ಸ್ವಾತಂತ್ರ್ಯಶಬ್ದಕ್ಕೂ ಅದೇ ಅರ್ಥವನ್ನೇ ಮಾಡಬೇಕೇ ವಿನಾ ಪೂರ್ವಶಬ್ದಕ್ಕೆ ಏಕದೇಶ ಸ್ವಾತಂತ್ರ್ಯವೆಂದೂ ಪರಶಬ್ದಕ್ಕೆ ಸರ್ವಸ್ವಾತಂತ್ರ್ಯ ವೆಂದೂ ಅರ್ಥಮಾಡಬಾರದು "ರಕ್ಷತಿ"[20] ಎಂದು ರಕ್ಷಣಾರ್ಥದ ಕ್ರಿಯಾಪದವನ್ನು ಪ್ರಯೋಗಿಸಿರುವುದರಿಂದಲೂ ಇದೇ ಅರ್ಥವು ಸ್ಪಷ್ಟವಾಗುತ್ತದೆ. ರಕ್ಷಣಶಬ್ದಕ್ಕೆ ಪಾಲಿಸುವುದು, ಕಾಪಾಡುವುದು, ಅಪಾಯವಾಗದಂತೆ ನೋಡಿಕೊಳ್ಳುವುದು, ಸಂಭವಿಸಿದರೆ ನಿವಾರಿಸುವುದು, ಕೆಡದಂತೆ ನೋಡಿಕೊಳ್ಳುವುದು, ಎಂದರ್ಥ. ತಾಯಿಯು ಮಕ್ಕಳನ್ನು ರಕ್ಷಿಸುತ್ತಾಳೆ ಎಂದರೆ ಪರಿಪಾಲಿಸುತ್ತಾಳೆ ಎಂದರ್ಥ.

---

16 ಪುರುಷಸ್ಯ ಸ್ತ್ರಿಯಾಶ್ಚೈವ ಧರ್ಮೇ ವರ್ತ್ಮನಿ ತಿಷ್ಠತೋಃ। ಸಂಯೋಗೇ ವಿಪ್ರಯೋಗೇ ಚ ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್ ॥ಮ-ix-೧॥

17 ಅಸ್ವತಂತ್ರಾಃ ಸ್ತ್ರಿಯಃ ಕಾರ್ಯಾಃ ಪುರುಷೈಸ್ವೈರ್ದಿವಾನಿಶಂ। ವಿಷಯೇಷು ಚ ಸಜ್ಜಂತ್ಯಸ್ಸಂಸ್ಥಾಪ್ಯಾ ಆತ್ಮನೋ ವಶೇ ॥ಮ-ix-೨॥

18 ಶಬ್ದಸ್ಪರ್ಶರೂಪರಸಗಂಧಗಳು—ಶ್ರೋತ್ರತ್ವಕ್ಚಕ್ಷುರ್ಜಿಹ್ವಾಘ್ರಾಣಗಳೆಂಬ ಪಂಚ ಜ್ಞಾನೇಂದ್ರಿಯಗಳ ವಿಷಯಗಳು ವಚನಾದಾನಗತಿವಿಸರ್ಗಾನಂದಗಳು—ವಾಕ್ಪಾಣಿ ಪಾದಪಾಯೂಪಸ್ಥಗಳೆಂಬ ಪಂಚಕರ್ಮೇಂದ್ರಿಯಗಳ ವಿಷಯಗಳು.

19 ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ। ರಕ್ಷಂತಿ ಸ್ಥವಿರೇ ಪುತ್ರಾಃ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ಮ-ix-೩॥

20 "ರಕ್ಷ"ಪಾಲನೇ ಎಂಬ ಧಾತುವಿನಿಂದ ರಕ್ಷತಿ, ರಕ್ಷಣ, ಶಬ್ದಗಳು ಹುಟ್ಟಿರುವುದು.

ರಾಜನು ಪ್ರಜೆಗಳನ್ನು ರಕ್ಷಿಸುತ್ತಾನೆ ಎಂದರೆ ಕಾಪಾಡುತ್ತಾನೆಂದರ್ಥ. ರಾಜಭಟರು ನಗರವನ್ನು ರಕ್ಷಿಸುತ್ತಾರೆಂದರೆ ಅಪಾಯವಾಗದಂತೆ ನೋಡಿಕೊಳ್ಳುತ್ತಾರೆಂದರ್ಥ. ಸೈನ್ಯವು ರಾಷ್ಟ್ರವನ್ನು ಶತ್ರುವಿನಿಂದ ಸಂರಕ್ಷಿಸಿತು ಎಂದರೆ ಶತ್ರುವಿನಿಂದ ಪ್ರಾಪ್ತವಾದ ಅಪಾಯವನ್ನು ನಿವಾರಿಸಿತೆಂದರ್ಥ. ಹಾಗೆಯೇ ಕೆಡಿಸದಹಾಗೆ ಮೊಸರನ್ನು ರಕ್ಷಿಸು ಎಂದರೆ ಮೊಸರು ಕೆಡದಂತೆ ನೋಡಿಕೋ ಎಂದರ್ಥ. ತಾಯಿಯು ಮಕ್ಕಳ, ರಾಜನು ಪ್ರಜೆಗಳ, ರಾಜಭಟರು ನಾಗರಿಕರ, ಸೈನ್ಯವು ರಾಷ್ಟ್ರದ, ಮೊಸರನ್ನು ಕಾಯುವವನು ಮೊಸರಿನವನ, ವಿಷಯದಲ್ಲಿ ಸರ್ವಸ್ವಾತಂತ್ರ್ಯವನ್ನೂ ಅಪಹರಿಸುತ್ತಾನೆಂದರ್ಥವಲ್ಲ. ಆತ್ಮರಕ್ಷಣೆ, ಕುಟುಂಬರಕ್ಷಣೆ, ಧನಧಾನ್ಯರಕ್ಷಣೆ, ಕ್ಷೇತ್ರರಕ್ಷಣೆ, ಗೋರಕ್ಷಣೆ ಮುಂತಾದವುಗಳಲ್ಲಿ ರಕ್ಷಣೆಯೆಂದರೆ ಪಾಲನೆ, ಪೋಷಣೆ, ಶೇಖರಣೆ, ಅನರ್ಥನಿವಾರಣೆ, ಅನಪಾಯಕ್ರಿಯೆ, ವಿಪತ್ಪ್ರತೀಕಾರ, ಅಪಘಾತಪ್ರತೀಘಾತವೆಂದೇ ಅರ್ಥ, ಅಸ್ವಾತಂತ್ರ್ಯಕರಣವೆಂದಲ್ಲ. ರಕ್ಷಣಶಬ್ದಕ್ಕೆ ಅಸ್ವಾತಂತ್ರ್ಯಕರಣವೆಂಬರ್ಥದಲ್ಲೆಲ್ಲಿಯೂ ಪ್ರಯೋಗವಿಲ್ಲ. ಮನುವೂ ಇದೇ ಅರ್ಥವನ್ನೇ ಮುಂದಣ ಶ್ಲೋಕಗಳಲ್ಲಿಯೂ ಪುಷ್ಟೀಕರಿಸಿದ್ದಾನೆ. ಐದನೆಯ ಶ್ಲೋಕದಲ್ಲಿ ಸೂಕ್ಷ್ಮಪ್ರಸಂಗಗಳಿಂದಲೂ ಕೂಡ ಸ್ತ್ರೀಯರನ್ನು ರಕ್ಷಿಸಬೇಕು, ರಕ್ಷಿಸದಿದ್ದರೆ ಸ್ತ್ರೀಯರು ಉಭಯಕುಲಕ್ಕೂ ಕಳಂಕರೂಪದ ವ್ಯಸನವನ್ನು ತಂದೊಡ್ಡಬಹುದು,[21] ರಕ್ಷಿಸಿಕೊಂಡರೆ ತನ್ನ ಸಂತಾನವನ್ನೂ ಚರಿತ್ರವನ್ನೂ ಕುಲವನ್ನೂ ಆತ್ಮವನ್ನೂ ಧನವನ್ನೂ ಧರ್ಮವನ್ನೂ ಸಹ ರಕ್ಷಿಸಿಕೊಂಡಂತಾಗುವುದು[22] ಎಂದೇಳನೆಯ ಶ್ಲೋಕದಲ್ಲಿ ಹೇಳಿದ್ದಾನೆ. ಆದುದರಿಂದ ಶುದ್ಧಸಂತಾನದ ಪ್ರಾಪ್ತಿಗೋಸ್ಕರವಾಗಿ ಪ್ರಯತ್ನಪಟ್ಟು ಸ್ತ್ರೀಯನ್ನು ರಕ್ಷಿಸಿಕೊಳ್ಳಬೇಕು,[23] ಎಂದು ಒಂಭತ್ತನೇ ಶ್ಲೋಕದಲ್ಲಿ ನುಡಿದಿದ್ದಾನೆ. ಈ ವಚನಗಳು ಪ್ರತ್ಯೇಕವಾಗಿಯೂ ಸಮಷ್ಟಿಯಾಗಿಯೂ ರಕ್ಷಣವೆಂದರೆ ಸ್ತ್ರೀಯು ದೂಷಿತಳಾಗದಂತೆ ಕಾಪಾಡಿಕೊಳ್ಳುವುದು ಎಂಬರ್ಥವನ್ನೇ ವ್ಯಕ್ತಪಡಿಸಿವೆ, ಸ್ತ್ರೀಯ ಸರ್ವಸ್ವಾತಂತ್ರ್ಯಾಪಹಾರದ ಪ್ರಸಕ್ತಿಯೇ ಇಲ್ಲ. ಯಾಜ್ಞವಲ್ಕ್ಯರು ವಂಶವು ಶಾಶ್ವತವಾಗಿ ಬೆಳೆಯುವುದಕ್ಕೂ ಸ್ವರ್ಗಾದಿ ಪುಣ್ಯಲೋಕಗಳು ಪ್ರಾಪ್ತವಾಗುವುದಕ್ಕೂ ಪುತ್ರಪೌತ್ರಪ್ರಪೌತ್ರರು ಅವಶ್ಯವಾದುದರಿಂದಲೇ ಸ್ತ್ರೀಯರನ್ನು ಸೇವಿಸುವುದೂ, ಸುರಕ್ಷಿತವಾಗಿ ಇಟ್ಟುಕೊಳ್ಳುವುದೂ, ಆಗತ್ಯವೆಂದು ಸ್ಪಷ್ಟವಾಗಿಯೇ ಹೇಳಿದ್ದಾರೆ.[24]

---

21 ಸೂಕ್ಷ್ಮೇಭ್ಯೋಽಪಿ ಪ್ರಸಂಗೇಭ್ಯೋ ಸ್ತ್ರಿಯೋರಕ್ಷ್ಯಾ ವಿಶೇಷತಃ । ದ್ವಯೋರ್ಹಿ ಕುಲಯೋಃಶೋಕಮಾವಹೇಯುರರಕ್ಷಿತಾಃ ॥ಮ-ix-೫॥

22 ಸ್ವಾಂ ಪ್ರಸೂತಿಂ ಚರಿತ್ರಂ ಚ ಕುಲಮಾತ್ಮಾನಮೇವ ಚ । ಸ್ವಂ ಚ ಧರ್ಮಂ ಪ್ರಯತ್ನೇನ ಜಾಯಾಂ ರಕ್ಷನ್ ಹಿ ರಕ್ಷತಿ ॥ಮ-ix-೭॥

23 ತಸ್ಮಾತ್ಪ್ರಜಾ ವಿಶುದ್ಧ್ಯರ್ಥಂ ಸ್ತ್ರಿಯಂ ರಕ್ಷೇತ್ಪ್ರಯತ್ನತಃ ॥ಮ-ix-೯॥

24 ಲೋಕಾನನ್ತ್ಯಂ ದಿವಃ ಪ್ರಾಪ್ತಿಃ ಪುತ್ರಪೌತ್ರಪ್ರಪೌತ್ರಕೈಃ । ಯಸ್ಮಾತ್ತಸ್ಮಾತ್ಸ್ತ್ರಿಯಸ್ಸೇವ್ಯಾಃ ಕರ್ತವ್ಯಾಶ್ಚ ಸುರಕ್ಷಿತಾಃ ॥ಯಾ-i-೭೮॥

ಸ್ತ್ರೀಯರು ಕೆಡಬೇಕಾದರೆ ಎರಡು ವಿಧವಾದ ಕಾರಣಗಳು—ಒಂದು ಪರಾಯತ್ತ, ಇನ್ನೊಂದು ಆತ್ಮಾಯತ್ತ. **ಪರಾಯತ್ತ**ದಿಂದ ಪಾರಾಗಬೇಕಾದರೆ ಬಲವೂ ಶೌರ್ಯವೂ ವೀರ್ಯವೂ ಧೈರ್ಯವೂ ಸ್ಥೈರ್ಯವೂ ತೇಜಸ್ಸೂ ಓಜಸ್ಸೂ ಸಾಹಸವೂ ಮನೋದಾರ್ಢ್ಯವೂ ಎಲ್ಲವೂ ಬೇಕು. ಅಂಥಾ ಮಹಾಮಹಿಮೆಯು ಜಾನಕೀದೇವಿಗಿತ್ತು. ಅಸಹಾಯಶೂರಳಾಗಿ ರಾವಣನಂಥಾವನನ್ನೆದುರಿಸಿ ಪಾತಿವ್ರತ್ಯವನ್ನು ರಕ್ಷಿಸಿಕೊಂಡುಳಿದಳು. ರಾಜಾಸ್ಥಾನದ ಮಹಾಮಹಿಳೆಯರು ಅಷ್ಟಿಲ್ಲದಿದ್ದರೆ ಧೈರ್ಯಸ್ಥೈರ್ಯದಿಂದ ಅಗ್ನಿಪ್ರವೇಶವನ್ನೇ ಮಾಡಿ ಅಪಘಾತದಿಂದ ಪಾರಾದರು—ಬದುಕುಳಿಯಲಿಲ್ಲ. ಅಂಥಾ ದಿವ್ಯತೇಜಸ್ಸು ಎಲ್ಲೋ ಕೆಲವರಿಗಿರುತ್ತೆಂದರೆ ಸಾಮಾನ್ಯರಿಗೆ ಇರುವುದಿಲ್ಲ. ಏನಿಲ್ಲವೆಂದರೂ ರಕ್ಷಣಕಾರ್ಯದಲ್ಲಿ ಸ್ತ್ರೀಯರಿಗಿಂತಲೂ ಪುರುಷರೇ ಸಮರ್ಥರು, ಏಕೆಂದರೆ ಸ್ತ್ರೀಯರಿಗೆ ಚಾರಿತ್ರರಕ್ಷಣವೂ ಆಘಾತಪ್ರತೀಕಾರವೂ ಎರಡೂ ಜತೆಯಲ್ಲಿ ನಡೆಯಬೇಕಾದರೆ ಪುರುಷನಿಗೆ ಪ್ರತೀಕಾರವೊಂದೇ ಕೆಲಸ, ಹಾಗೂ ಒಬ್ಬಳಿಗಿಂತಲೂ ಇಬ್ಬರು ಮೇಲು. ಸ್ತ್ರೀಯರೂ ಸಾಹಸವನ್ನು ಮಾಡಬೇಕು, ಮಾಡುತ್ತಾರೆ, ಮಾಡಲಿ. ಪುರುಷರೂ ಕೂಡ ಆಪ್ತರೂ ಸಮರ್ಥರೂ ಹೌದು, ರಕ್ಷಣಕಾರ್ಯವು ಅವರಿಗೆ ಪ್ರಿಯವೂ ಹಿತವೂ ಆದುದು, ಸಮೀಚೀನವಾಗಿ ನಡೆಸುತ್ತಾರೆಂದು ರಕ್ಷಿಸಿಕೊಳ್ಳುವ ಭಾರವನ್ನು ಅವರಮೇಲೆ ಹೇರಿರುವುದು.

**ಆತ್ಮಾಯತ್ತ**ವೆಂದರೆ ತಾವಾಗಿ ತಾವು ಚಾಪಲ್ಯಕ್ಕೊಳಗಾಗುವುದು. ಅಂಥಾ ಸಂದರ್ಭದಲ್ಲಿ ಹಿತವಂತರೇ ಕಾಯಬೇಕು. ತಾವಾಗಿ ಕೆಡುವವರನ್ನು ನಿಮ್ಮನ್ನು ನೀವೇ ರಕ್ಷಿಸಿಕೊಳ್ಳಿ ಅಥವಾ ಕೆಟ್ಟುಹೋಗಿ ಎನ್ನುವ ಮಾತಲ್ಲ. ಅಂಥಾವರನ್ನು ಬಲಾತ್ಕಾರದಿಂದ ನಿವಾರಿಸುವುದೂ ದುಸ್ಸಾಧ್ಯವೇ, ಉಪಾಯವಾಗಿ ರಕ್ಷಿಸಿಕೊಳ್ಳಬೇಕು. ಮನುವು ಮುಂದುವರಿಯುತ್ತಾ ಅದೇ ಪ್ರಕರಣದಲ್ಲಿದನ್ನೂ ಸ್ಪಷ್ಟೀಕರಿಸಿದ್ದಾನೆ:—"ಬಲಪ್ರಯೋಗದಿಂದ ಸ್ತ್ರೀಯರನ್ನು ರಕ್ಷಿಸುವುದಕ್ಕೆ ಯಾರಿಗೂ ಸಾಧ್ಯವಲ್ಲ, ಉಪಾಯವಾಗಿ, ಪ್ರಕಾರಾಂತರವಾಗಿ, ರಕ್ಷಿಸಿಕೊಳ್ಳಬಹುದು. ಹಣದ ವ್ಯಯವನ್ನೂ ಸಂಗ್ರಹವನ್ನೂ ಶೌಚ ಧರ್ಮ ಅನ್ನೋಪಚಾರಾದಿಗಳನ್ನೂ ಪತಿಯ ಯೋಗಕ್ಷೇಮ ನಿರ್ವಹಣೆಯನ್ನೂ ಅವಳಿಗೆ ಒಪ್ಪಿಸಿಬಿಡುವುದೂ ಮುಂತಾದವುಗಳೇ ಉಪಾಯಗಳು."[25] ಆದರಿಂದ ನಾನೂ ಗಣ್ಯಳು, ಮನೆಗೆ ಯಜಮಾನಿತಿ, ಮನೆಯೂ ಮನೆಯ ಮಾನವೂ ನನ್ನದು, ಎಂಬಭಿಮಾನವು ಜನಿಸಿ, ನಾನು ಶುದ್ಧವಾಗಿರಬೇಕು, ಧರ್ಮವಾಗಿ ಬಾಳಬೇಕು, ಎಂಬ ಸದ್ಬುದ್ಧಿಯೂ ಹುಟ್ಟುತ್ತದೆ, ಸಂಸಾರದ ಆತಂಕದಲ್ಲಿ ದುರಾಲೋಚನೆಗೂ ಪಾಪಾಚರಣೆಗೂ ಅವಕಾಶವಿರುವುದಿಲ್ಲ. ಪತಿಯ ವಿಷಯದಲ್ಲಿಯೂ ಯೋಗ್ಯ ಸಂಭಾವಿತ ಉಪಕಾರಿಯೆಂಬ

25 ನ ಕಶ್ಚಿದ್ಯೋಷಿತಶ್ಶಕ್ತಃ ಪ್ರಸಹ್ಯ ಪರಿರಕ್ಷಿತುಂ । ಏತೈರುಪಾಯಯೋಗೈಸ್ತು ಶಕ್ಯಾಸ್ತಾಃ ಪರಿರಕ್ಷಿತುಂ ॥೧೦॥ ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವ ನಿಯೋಜಯೇತ್ । ಶೌಚೇ ಧರ್ಮೇಽನ್ನಪಕ್ತ್ಯಾಂ ಚ ಪಾರಿಣಾಹಸ್ಯ ವೇಕ್ಷಣೇ ॥೧೧॥ ಮ.೯॥

ಭಾವನೆಯೂ ಆಗುತ್ತದೆ. ಅದು ಬಿಟ್ಟು ಮನೆಯಲ್ಲಿ ಕೂಡಿ ಭದ್ರಪಡಿಸುತ್ತೇನೆಂದರೆ ಸಾಧ್ಯವಲ್ಲ, ತಮ್ಮನ್ನು ತಾವೇ ಯಾರು ರಕ್ಷಿಸಿಕೊಳ್ಳುತ್ತಾರೋ ಆ ಸ್ತ್ರೀಯರೇ ಸುರಕ್ಷಿತರು[26] ಎಂದೂ ಮನುವು ಹೇಳಿದ್ದಾನೆ. ಬಲಪ್ರಯೋಗದಲ್ಲಿ ಸೂಕ್ಷ್ಮವೂ ಇದೆ. ಅದರಿಂದ ಸ್ತ್ರೀಯರ ಸೂಕ್ಷ್ಮಪ್ರಕೃತಿಗೆ ನೋವಾಗುತ್ತದೆ. ನೋಡಿದವರಿಗೆ ಅವರ ಮೇಲೆ ಸಂದೇಹವು ಹುಟ್ಟಿ ಅಪವಾದಕ್ಕೆ ಗುರಿಯಾಗುತ್ತಾರೆ—ಈ ಎರಡು ಪರಿಸ್ಥಿತಿಯೂ ಕಾರ್ಯಸಾಧನೆಗೆ ಪ್ರತಿಬಂಧಕಗಳು. ನೊಂದ ಸ್ತ್ರೀಯು ತಿರುಗಿ ಬಿದ್ದು ಪುರುಷನ ಪ್ರಯತ್ನವನ್ನೇ ವ್ಯರ್ಥಮಾಡಿದರೂ ಆಯಿತು, ಅಥವಾ ಅಪವಾದವು ಬಂತೇ ಬಂತಲ್ಲ ಎಂದು ಅಕಾರ್ಯಕ್ಕೇ ಬಿದ್ದರೂ ಆಯಿತು. ಅಂಥಾವರನ್ನು ಪ್ರೋತ್ಸಾಹಿಸುವ ದುಷ್ಟರಿಗೂ ಕಡಿಮೆಯಿಲ್ಲ. ಆದಕಾರಣ ವಿಷಯ ಪರಾಙ್ಮುಖತ್ವಕ್ಕೆ ದಾರಿಯನ್ನು ಕಲ್ಪಿಸಬೇಕೇ ವಿನಾ ವಿಷಯಧ್ಯಾನವೇ ಸದಾ ಇರುವಂಥಾ ಬಲೋದ್ಬಂಧದ ಕೆಲಸವನ್ನು ಮಾಡಬಾರದು. ಬಲಪ್ರಯೋಗದಿಂದ ತಾತ್ಕಾಲಿಕವಾಗಿ ಕರ್ಮೇಂದ್ರಿಯಗಳನ್ನು ಚಲಿಸದಂತೆ ಮಾಡಬಹುದು, ಅಂತಃಕರಣದ ಶುದ್ಧಿಯಾಗುವುದಿಲ್ಲ, ಆ ಶುದ್ಧಿಯೇ ನಿಜವಾದ ಶುದ್ಧಿಯು. ಈ ಪ್ರಕರಣದ ಕೊನೆಯಲ್ಲಿ ನಾರಿಯರು ಕೆಡುವುದಕ್ಕೆ ಹೇತುಭೂತವಾದ ಆರು ಪ್ರಕಾರವನ್ನೂ ಮನುವು ಹೇಳಿದ್ದಾನೆ:—ಮದ್ಯಪಾನ, ದುರ್ಜನಸಂಸರ್ಗ, ಪತಿಯನ್ನಗಲಿರುವುದು, ಸುಮ್ಮಸುಮ್ಮನೆ ಅಲೆಯುವುದು, ಅಕಾಲದಲ್ಲಿ ಅತಿಯಾಗಿ ಮಲಗುವುದು, ಪರಗೃಹೆದಲ್ಲಿ ವಾಸಮಾಡುವುದು, ಈ ಆರೂ ನಾರೀಸಂದೂಷಣಗಳು[27] ಎಂದು. ಹೀಗೆ ಈ ಹದಿಮೂರು ಶ್ಲೋಕಗಳಲ್ಲಿ ನಾರೀರಕ್ಷಣ ಕ್ರಮವನ್ನೂ ಪ್ರಯೋಜನವನ್ನೂ ಹೇಳಿರುವುದನ್ನು ನೋಡಿದರೆ ನಿಷಿದ್ಧವಾದ ಸ್ವಾತಂತ್ರ್ಯವು ದುರ್ವ್ಯಾಪಾರದಲ್ಲಿ ಪ್ರವರ್ತಿಸುವ ಲಕ್ಷಣದ್ದೆಂದು ಸ್ಪಷ್ಟವಾಗುವುದು.

ವ್ಯಾಖ್ಯಾನಕಾರರೂ ಇದೇ ಅರ್ಥವನ್ನು ಮಾಡಿದ್ದಾರೆ. ಮೇಧಾತಿಥಿಗಳು ರಕ್ಷಣವೆಂದರೆ ಅನರ್ಥನಿವಾರಣೆಯೆಂದೂ ಅನರ್ಥವೆಂದರೆ ಅನಾಚಾರ, ವೃತ್ತಾತಿಕ್ರಮವೆಂದೂ, ಸ್ವಾತಂತ್ರ್ಯಕ್ಕರ್ಹಳಲ್ಲವೆಂದರೆ ಸರ್ವಕ್ರಿಯಾ ವಿಷಯವಾದ ಸ್ವಾತಂತ್ರ್ಯವು ನಿಷಿದ್ಧವಾಗಿಲ್ಲವೆಂದೂ, ಸ್ಪಷ್ಟಮಾಡಿದ್ದಾರೆ.[28] ಸರ್ವಜ್ಞ ನಾರಾಯಣನು ಪಿತನು ರಕ್ಷಿಸುತ್ತಾನೆಂದರೆ ಕನ್ಯಾದೂಷಣದಿಂದ ರಕ್ಷಿಸುತ್ತಾನೆಂದು

---

26 ಅರಕ್ಷಿತಾ ಗೃಹೇ ರುದ್ಧಾಃ ಪುರುಷೈರಾಪ್ತಕಾರಿಭಿಃ । ಆತ್ಮಾನಮಾತ್ಮನಾ ಯಾಸ್ತು ರಕ್ಷೇಯುಸ್ತಾಸ್ಸುರಕ್ಷಿತಾಃ ॥ಮ-ix-೧೨॥

27 ಪಾನಂ ದುರ್ಜನಸಂಸರ್ಗಃ ಪತ್ಯಾ ಚ ವಿರಹೋಽಟನಂ। ಸ್ವಪ್ನೋಽನ್ಯಗೇಹವಾಸಶ್ಚ ನಾರೀಸಂದೂಷಣಾನಿ ಷಟ್ ॥ಮ-ix-೧೩॥

28 ರಕ್ಷಾ ನಾಮ ಅನರ್ಥಪ್ರತೀಘಾತಃ, ಅನರ್ಥಸ್ತು ಅನಾಚಾರವೃತ್ತಾತಿಕ್ರಮೇಣ । ನ ಸ್ತ್ರೀ ಸ್ವಾತಂತ್ರ್ಯಮರ್ಹತೀತ್ಯುಚ್ಯತೇ । ನ್ಯಾನೇನ ಸರ್ವಕ್ರಿಯಾವಿಷಯಮಸ್ವಾತಂತ್ರ್ಯಂ ವಿಧೀಯತೇ ॥ಮ-ix-೩-ಮೇಧಾತಿಥಿಃ॥

ಅರ್ಥಮಾಡಿದ್ದಾನೆ [29] ಕುಲ್ಲೂಕನು ರಕ್ಷಣವೆಂದರೆ ಸಂಕರಕ್ಕೆ ಅವಕಾಶವಾಗದಹಾಗೆ ವಿಶುದ್ಧ ಸಂತಾನವನ್ನು ಪಡೆಯುವುದು ಎಂದಿದ್ದಾನೆ.[30] ವಿಜ್ಞಾನೇಶ್ವರರು ಯಾಜ್ಞವಲ್ಕ್ಯರ ವಚನಕ್ಕೆ ರಕ್ಷಿಸಬೇಕು ಎಂದರೆ ಅಕಾರ್ಯಕರಣದಿಂದ ರಕ್ಷಿಸಬೇಕು ಎಂದು ಅರ್ಥಮಾಡಿದ್ದಾರೆ [31] ಹೀಗೆ ಎಲ್ಲಾ ವ್ಯಾಖ್ಯಾನಕಾರರದೂ ಏಕವಾಕ್ಯವಾಗಿದೆ. ಇಂಥಾ ಹೇಯವಾದ ಸ್ವಾತಂತ್ರ್ಯವು ಯಾವ ಕುಲಸ್ತ್ರೀಗೂ ಅಭೀಷ್ಟವಲ್ಲ. ಸ್ತ್ರೀಯರಿಗೇ ಏತಕ್ಕೆ ಇಷ್ಟು ನಿರ್ಬಂಧವೆಂದು ಕೇಳಬಹುದು—ಅದಕ್ಕೆ ಧಾರ್ಮಿಕವೂ ಲೌಕಿಕವೂ ಎರಡು ಕಾರಣಗಳು. ಧಾರ್ಮಿಕವನ್ನು ವಿಮರ್ಶಿಸಿದುದಾಯಿತು. ಲೌಕಿಕವೂ ಸೂಚಿತವಾಗಿದೆ—ವಿಪರೀತ ಪರಿಣಾಮವೇ ಅದು. ಕುಲಕ್ಕೂ ಕುಲಖ್ಯಾತಿಗೂ ಕುಂದಕವಾಗುವಂಥಾದ್ದು. ರಕ್ಷಣೀಯವು ಅಮೂಲ್ಯವಾದುದಾದರೆ ಅದಕ್ಕೆ ಅಷ್ಟ ದಿಗ್ಬಂಧಗಳಾಗುವುದು ಸಹಜವೇ. ಪುರುಷನಿಗೂ ಅಕಾರ್ಯದ ಸ್ವಾತಂತ್ರ್ಯವು ವಿಧಾಯಕವಾಗಿಲ್ಲ, ನಿಷಿದ್ಧವಾಗಿಯೇ ಇದೆ. ಹೆಚ್ಚು ಮಾತು ಬೇಕಿಲ್ಲ. ಅವರವರೇ ಯುಕ್ತಾಽಯುಕ್ತವನ್ನರಿಯುವ ವಿಷಯ. ಸ್ತ್ರೀಯರು ಕುಲಸ್ತ್ರೀಯರಾಗಿ ಬಾಳುವುದೇ ಸ್ವಾತಂತ್ರ್ಯವೆಂಬುದು ಸಂಗ್ರಹವು.



29 ಪಿತಾ ರಕ್ಷತಿ ಕನ್ಯಾದೂಷಣಾದೇಃ ॥ ಮ-ix-೩-ಸರ್ವಜ್ಞನಾರಾಯಣಃ॥

30 ರಕ್ಷಣಮಸಂಕೀರ್ಣವಿಶುದ್ಧಾಪತ್ಯೋತ್ಪಾದನೇನ ಸ್ವಸಂತತಿಂ ॥ ಮ-ix-೩॥ ಕುಲ್ಲೂಕಃ॥

31 ಪಾಣಿಗ್ರಹಣಾತ್ಪ್ರಾಕ್ ಪಿತಾ ಕನ್ಯಾಮಕಾರ್ಯಕರಣಾದ್ರಕ್ಷೇತ್। ತತ ಊರ್ಧ್ವಂ ಭರ್ತಾ । ತದಭಾವೇ ಪುತ್ರಾ ಇತ್ಯಾದಿ ॥ ಮಿತಾಕ್ಷರಾ॥ ರಕ್ಷೇತ್ಕನ್ಯಾಂ ಪಿತಾ ವಿನ್ನಾಂ ಪತಿಃ ಪುತ್ರಾಶ್ಚವಾರ್ಧಕೇ । ಅಭಾವೇ ಜ್ಞಾತಯಸ್ತೇಷಾಂ ನಸ್ವಾತಂತ್ರ್ಯಂ ಕ್ವಚಿತ್ಸ್ತ್ರಿಯಾಃ ॥ ಯಾ-i-೮೫॥

# ೯ನೆಯ ಪ್ರಕರಣ—ನಿತ್ಯಕರ್ಮ

## ೧. ಸ್ನಾನ

ಸ್ನಾನದಿಂದ ದೇಹವು ನಿರ್ಮಲವಾಗುವುದೂ ಜಡತ್ವವು ಪರಿಹಾರವಾಗುವುದೂ ಮನಸ್ಸಿಗೆ ಆಹ್ಲಾದವಾಗುವುದೂ ಎಲ್ಲರಿಗೂ ಗೊತ್ತು. ಅದಕ್ಕೇ ಎಲ್ಲರೂ ಸ್ನಾನ ವನ್ನು ಮಾಡುತ್ತಾರೆ, ಪಶುಪಕ್ಷಿಗಳೂ ಸಹ ಮಾಡುತ್ತವೆ. ರೋಗಾದಿಗಳಿಂದ ಅಥವಾ ಅವಕಾಶವಿಲ್ಲದೆ ಅಡ್ಡಿಬಂದರೆ ವಿನಾ ಯಾರೂ ಸ್ನಾನದ ವಿಷಯದಲ್ಲಿ ತಾತ್ಸಾರ ಮಾಡುವುದಿಲ್ಲ. ಶಾಸ್ತ್ರದೃಷ್ಟಿಯಲ್ಲಿ ಸ್ನಾನದ ಫಲವು ಪ್ರತ್ಯಕ್ಷ ಪರೋಕ್ಷವೆಂದೆರಡು ಪ್ರಕಾರದವು.[1] ಆಯುರ್ವೇದದಲ್ಲಿ ಸ್ನಾನದಿಂದ ಜೀರ್ಣಶಕ್ತಿಯೂ ದೇಹದಾರ್ಢ್ಯವೂ ಬಲವೂ ಓಜಸ್ಸೂ ಆಯುಷ್ಯವೂ ವೃದ್ಧಿಯಾಗುವುವು, ಕೊಳೆಯೂ ಬೆವರೂ ಉರಿಯೂ ಕಡಿತವೂ ಹೋಗುವುವು, ಆಯಾಸವೂ ಜಡತ್ವವೂ ಪಾಪವೂ ಸಹ ಪರಿಹಾರವಾಗುವುವು, ಎಂದು ಹೇಳಿದೆ.[2] ಪಾಪನಾಶವೊಂದು ವಿನಾ ಮಿಕ್ಕವೆಲ್ಲವೂ ಪ್ರತ್ಯಕ್ಷಫಲಗಳೇ. ದಕ್ಷರು ಆಯುರ್ವೇದೋಕ್ತವಾದ ನೈರ್ಮಲ್ಯ ಬಲಪ್ರಾಪ್ತಿ ಆಯುಷ್ಯಾಭಿವೃದ್ಧಿಗಳ ಜತೆಗೆ ಒಳ್ಳೆಯ ರೂಪವೂ ತೇಜಸ್ಸೂ ತಪಸ್ಸೂ ಆರೋಗ್ಯವೂ ಮೇಧಾಶಕ್ತಿಯೂ ಬರುವುವು, ದುರಾಸೆಯೂ ದುಸ್ಸ್ವಪ್ನವೂ ನಾಶವಾಗುವುವು, ಮನಸ್ಸಿಗೆ ಶಾಂತಿಯೊದಗುವುದು, ದುಃಖಶೋಕಗಳು ನಾಶವಾಗುವುವು, ಮಾನವೂ ಜ್ಞಾನವೂ ಪ್ರಾಪ್ತಿಯಾಗುವುವು ಎಂದಿದ್ದಾರೆ[3] ಇವೂ ವಿಶೇಷವಾಗಿ ಪ್ರತ್ಯಕ್ಷಗಳೇ. ಸ್ನಾನಮಾಡಿಯೇ ಕರ್ಮಗಳನ್ನು ಮಾಡಬೇಕು, ಎಂದೂ ವಚನಗಳಿವೆ.[4] ಆದ್ದರಿಂದ ಅವಶ್ಯವಾಗಿ ಸ್ನಾನವನ್ನು ಮಾಡಲೇಬೇಕು.

ಕಾಲಭೇದದಿಂದ ಸ್ನಾನವು ಪ್ರಾತಸ್ಸ್ನಾನ, ಮಾಧ್ಯಾಹ್ನಿಕಸ್ನಾನ, ಸಾಯಂ ಕಾಲಸ್ನಾನವೆಂದು ಮೂರು ವಿಧ. ಪ್ರಾತಸ್ಸ್ನಾನವು ಸರ್ವರಿಗೂ, ಪ್ರಾತರ್ಮ

---

1 ಪ್ರಾತಸ್ಸ್ನಾನಂ ಪ್ರಶಂಸಂತಿ ದೃಷ್ಟಾದೃಷ್ಟಫಲಂ ಹಿ ತತ್ ॥ದಕ್ಷಃ॥

2 ದೀಪನಂ ವೃಷಮಾಯುಷ್ಯಂ ಸ್ನಾನಮೋಜೋಬಲಪ್ರದಂ । ಕಂಡೂಮಲಶ್ರಮ ಸ್ವೇದತಂದ್ರಾತೃಡ್ದಾಹಪಾಪ್ಮಜಿತ್ ॥ಅ. ಸಂ-ದಿನಚರ್ಯಾ॥ ಓಜಸ್ಸು-Vitality॥ ಮಲನಾಶ ವನ್ನು ಹೇಳಿ ಬೆವರು ಹೋಗುವುದೆಂದು ಮತ್ತೆ ಹೇಳಿರುವುದು ರೋಮಕೂಪಗಳಲ್ಲಿ ಶೇಖರ ವಾದುದನ್ನು ಚೆನ್ನಾಗಿ ಹೋಗಲಾಡಿಸಬೇಕೆಂದು ಒತ್ತಿ ಹೇಳುವ ಮಾತು.

3 ಗುಣಾ ದಶ ಸ್ನಾನಪರಸ್ಯ ಸಾಧೋ ರೂಪಂ ಚ ತೇಜಶ್ಚ ಬಲಂ ಚ ಶೌಚಂ । ಆಯು ಷ್ಯಮಾರೋಗ್ಯಮಲೋಲುಪತ್ವಂ ದುಸ್ಸ್ವಪ್ನಘಾತಶ್ಚ ತಪಶ್ಚ ಮೇಧಾಃ ॥ ಮನಃಪ್ರಸಾದ ಜನನಂ ರೂಪಸೌಭಾಗ್ಯವರ್ಧನಂ । ದುಃಖಶೋಕಾಪಹಂ ಸ್ನಾನಂ ಮಾನದಂ ಜ್ಞಾನದಂ ತಥಾ ॥ದಕ್ಷಃ॥

4 ಅಸ್ನಾತ್ವಾನಾಚರೇತ್ಕರ್ಮ ॥ವ್ಯಾಸಃ॥

ಧ್ಯಾಹ್ನಸ್ನಾನಗಳು ಗೃಹಸ್ಥವಾನಪ್ರಸ್ಥರಿಗೂ, ಮೂರೂ ಯತಿಗಳಿಗೂ, ಉಕ್ತವಾಗಿವೆ.[5] ಜಲಭೇದದಿಂದ ಶೀತೋದಕಸ್ನಾನ ಉಷ್ಣೋದಕಸ್ನಾನವೆಂದೆರಡು ವಿಧ. ಉಷ್ಣೋದಕಸ್ನಾನವು ಅಶಕ್ತರಿಗೂ ರೋಗಿಗಳಿಗೂ ಸುವಾಸಿನಿಯರಿಗೂ ಹೇಳಿದೆ. ಮಿಕ್ಕವರಿಗೆ ಶೀತೋದಕಸ್ನಾನವೇ ವಿಹಿತವಾದುದು.[6] ಉಷ್ಣೋದಕಸ್ನಾನದಿಂದ ದೇಹದ ಕೆಳಭಾಗಕ್ಕೆ ಬಲವು ಬರುವುದಾದರೂ ಉತ್ತಮಾಂಗದ ಕಣ್ಣುಕೇಶಗಳ ಬಲವು ಕ್ಷೀಣವಾಗುತ್ತದೆ ಎಂದು ಆಯುರ್ವೇದದಲ್ಲಿ ಹೇಳಿದೆ.[7] ಸ್ನಾನಮಾಡುವ ಪ್ರಕಾರದಿಂದ ಅವಗಾಹನಸ್ನಾನ ಸೇಚನಸ್ನಾನವೆಂದೆರಡು ವಿಧ. ಮುಳುಗಿ ಮಾಡುವುದು ಅವಗಾಹನವು, ಮೈಮೇಲೆ ನೀರು ಸುರಿದುಕೊಳ್ಳುವುದು ಸೇಚನವು. ಸ್ನಾನಮಾಡುವಾಗ ನೆನೆಯುವ ದೇಹ ಭಾಗದ ದೃಷ್ಟಿಯಿಂದ, ಶಿರಸ್ನಾನ, ಕಂಠಸ್ನಾನ, ಕಟಿಸ್ನಾನವೆಂದು ಮೂರು ವಿಧ. ಶಿರಸ್ಸಿನಿಂದ ಹಿಡಿದು ಸರ್ವಾಂಗಕ್ಕೂ ಮಾಡುವುದು ಶಿರಸ್ಸ್ನಾನವು, ಇದು ಸಾಮಾನ್ಯವಾಗಿ ಎಲ್ಲರಿಗೂ ಹೇಳಿದೆ. ಶಿರಸ್ಸನ್ನು ಬಿಟ್ಟು ಕಂಠದಿಂದ ಹಿಡಿದು ಕಾಲಿನವರೆಗೂ ಮಾಡುವುದು ಕಂಠಸ್ನಾನವು. ಇದು ಅಶಕ್ತರಿಗೂ ಸುವಾಸಿನಿಯರಿಗೂ ಉಕ್ತವಾಗಿದೆ.[8] ಸ್ನಾನವಾದಮೇಲೆ ಲಘುಶಂಕಾದಿಗಳೂ ವಾಯುಸ್ಖಲನಾದಿಗಳೂ ಸಂಭವಿಸಿದರೆ, ನಡುವಿನಿಂದ ಕೆಳಭಾಗವನ್ನು ಮಾತ್ರ ತೊಳೆಯುವುದು ಕಟಿಸ್ನಾನವು ಕಂಠಸ್ನಾನವನ್ನು ಮಾಡುವುದಕ್ಕೂ ಅಶಕ್ತರಾದವರು ಒದ್ದೆಯ ಬಟ್ಟೆಯಿಂದ ಮೈ ಒರೆಸಿ ಕೊಳೆಯನ್ನು ನಿವಾರಿಸುವುದಕ್ಕೆ ದೈವಿಕ ಅಥವಾ ಕಾಪಿಲಸ್ನಾನವೆನ್ನುತ್ತಾರೆ[9] ಆಗಾಗ ಎಣ್ಣೆ ಹಚ್ಚಿಕೊಂಡು ಸೀಗೇಕಾಯಿಯಿಂದ ಉಜ್ಜಿ ಬಿಸಿನೀರಿನಲ್ಲಿ ಸ್ನಾನಮಾಡುವುದು ಮಲಾಪಕರ್ಷಣಸ್ನಾನ(ಅಭ್ಯಂಗ)ವು. ಅದರಿಂದ ವಾಯುನಾಶಕವೂ ಪುಷ್ಟಿಯೂ ಆಯಾಸಪರಿಹಾರವೂ ಮೈನುಟ್ಟು ಏಟುತಗಲಿ ಆಗುವ ನೋವಿನ ಪರಿಹಾರವೂ ಮುಂತಾದ ಅನೇಕ ಪ್ರಯೋಜನಗಳುಂಟು.[10] ಪ್ರಾತಸ್ಸ್ನಾನವು ಅದರಲ್ಲಿಯೂ ಅವಗಾಹನಸ್ನಾನವು

5 ಪ್ರಾತರ್ಮಧ್ಯಾಹ್ನಯೋಸ್ಸ್ನಾನಂ ವಾನಪ್ರಸ್ಥಗೃಹಸ್ಥಯೋಃ । ಯತೇಸ್ತ್ರಿಷವಣಸ್ನಾನಂ ಸಕೃಚ್ಚ ಬ್ರಹ್ಮಚಾರಿಣಃ ॥ದಕ್ಷಃ॥

6 ಆದಿತ್ಯಕಿರಣೈಃ ಪೂತಂ ಪುನಃಪೂತಂ ಚ ವಹ್ನಿನಾ । ಆಮ್ನಾತಮಾತುರಸ್ನಾನೇ ಪ್ರಶಸ್ತಂ ಸ್ಯಾಚ್ಛೃತೋದಕಂ ॥ಯಮಃ॥

7 ಉಷ್ಣಾಂಬುನಾಧಃಕಾಯಸ್ಯ ಪರಿಷೇಕೋ ಬಲಾವಹಃ । ತೇನೈವ ಚೋತ್ತಮಾಂಗಸ್ಯ ಬಲಹೃತ್ಕೇಶ ಚಕ್ಷುಷಾಂ ॥ಅ.ಸಂ-ದಿನಚರ್ಯಾ॥

8 ಅಶಿರಸ್ಕಂ ಭವೇತ್ ಸ್ನಾನಂ ಸ್ನಾನಾಶಕ್ತೌ ತು ಕರ್ಮಿಣಾಂ ॥ಜಾಬಾಲಿಃ॥

9 ಆರ್ದ್ರೇಣ ವಾಸಸಾ ವಾಪಿ ಮಾರ್ಜನಂ ದೈವಿಕಂ ವಿದುಃ ॥ಜಾಬಾಲಿಃ॥

10 ಮಲಾಪಕರ್ಷಣಂ ನಾಮ ಸ್ನಾನಮಭ್ಯಂಗಪೂರ್ವಕಂ । ಮಲಾಪಕರ್ಷಣಾರ್ಥಾಯ ಪ್ರವೃತ್ತಿಸ್ತಸ್ಯ ಕೀರ್ತಿತಾ ॥ಶಂಖಃ॥ ಅಭ್ಯಂಗೋ ವಾತಹಾ ಪುಷ್ಟಿಸ್ವಪ್ನದಾರ್ಢ್ಯಬೃಹತ್ತ್ವಕೃತ್ । ದಗ್ಧಭಗ್ನಕ್ಷತರುಜಾಕ್ಲಮಶ್ರಮಜರಾಪಹಃ ॥ಅ.ಸಂ-ದಿನಚರ್ಯಾ॥

ಪ್ರಶಸ್ತವು.[11] ರಾತ್ರಿಯಲ್ಲಿಯೂ[12] ಭೋಜನವಾದಮೇಲೂ[13] ಅಜೀರ್ಣದಲ್ಲಿಯೂ[14] ಅಸ್ವಸ್ಥತೆಯಲ್ಲಿಯೂ[15] ಸ್ನಾನವು ವರ್ಜ್ಯವು. ಚಂದ್ರಗ್ರಹಣಾದಿ ನಿಮಿತ್ತವಾಗಿ ಮಾತ್ರ ರಾತ್ರಿಸ್ನಾನವು ಉಕ್ತವಾಗಿದೆ[16] ಅಂತೂ ಸರ್ವಪ್ರಯತ್ನದಿಂದಲೂ ಸ್ನಾನವನ್ನು ಮಾಡಲೇಬೇಕು.

ಶುದ್ಧಿಪ್ರಕರಣದಲ್ಲಿ ಜಲಶುದ್ಧಿಯನ್ನು ವಿಸ್ತಾರವಾಗಿ ಹೇಳಿದೆ ಅಂಥಾ ಶುದ್ಧಜಲವೇ ಸ್ನಾನಕ್ಕೂ ಪ್ರಶಸ್ತವು. ಕೆಲವು ನಿಯಮಗಳನ್ನು ಮಾತ್ರ ಇಲ್ಲಿ ಸೂಚಿಸಿದೆ. ನದಿಯಲ್ಲಿಯೂ ಪುಷ್ಕರಿಣಿಯಲ್ಲಿಯೂ ಸರೋವರದಲ್ಲಿಯೂ ಕೆರೆಯಲ್ಲಿಯೂ ಗರ್ತದಲ್ಲಿಯೂ ಪ್ರಸ್ರವಣದಲ್ಲಿಯೂ ಸ್ನಾನವನ್ನು ಮಾಡಬೇಕು.[17] ಹರಿಯುತ್ತಾ ಸಾಕ್ಷಾತ್ತಾಗಿಯಾಗಲೀ ಪರಂಪರೆಯಾಗಿಯಾಗಲೀ ಸಮುದ್ರಕ್ಕೆ ಸೇರುವುದು ನದಿಯು.[18] ತಾನಾಗಿ ನಿರ್ಮಿತವಾದ ಪುಷ್ಕರಿಣಿ ಮುಂತಾದವು ದೇವಖಾತವು.[19] ಒಂದು ಸಾವಿರದ ಎಂಟು ಧನುಸ್ಸಿನ ಅಳತೆಗಿಂತಲೂ ಕಡಿಮೆ ದೂರ ಹರಿಯುವುದು ಗರ್ತವು.[20] ಪರ್ವತ ಮುಂತಾದ ಎತ್ತರವಾದ ಪ್ರದೇಶದಿಂದ ಜಿನುಗಿ ಹರಿದುಬರುವ ನೀರು ಪ್ರಸ್ರವಣವು.[21] ನದಿಯ ಪ್ರಧಾನಧಾರೆಯಿಂದ ಬೇರ್ಪಟ್ಟ ಜಲದಲ್ಲಿಯೂ, ನದಿಯಿಂದ ಹರಿದುಬರುವ ಕಾಲುವೆ ಮುಂತಾದವುಗಳಲ್ಲಿಯೂ, ಪ್ರಧಾನಧಾರೆಯಲ್ಲಿಯೇ ಆದರೂ ಮುಂದಕ್ಕೆ ಹೋಗಿ ಹಿಂತಿರುಗಿ ಬರುವ ಜಲದಲ್ಲಿಯೂ ಸ್ನಾನವನ್ನು ಮಾಡಬಾರದು.[22] ಮಳೆಗಾಲದ ಆದಿಯಲ್ಲಿ ಬರುವ ನದೀ ನೀರು ಸ್ನಾನಕ್ಕೆ ಯೋಗ್ಯವಲ್ಲ; ಆ ಕಾಲದಲ್ಲಿ ಇಂದ್ರದತ್ತವಾದ ಬ್ರಹ್ಮಹತ್ಯಾಂಶದಿಂದ ನದಿಗಳು

---

11 ಪ್ರಾತಸ್ಸ್ನಾನಂ ಪ್ರಶಂಸಂತಿ ದೃಷ್ಟಾದೃಷ್ಟಫಲಂ ಹಿ ತತ್ । ಸರ್ವಮರ್ಹತಿ ಶುದ್ಧಾತ್ಮಾ ಪ್ರಾತಸ್ಸ್ನಾಯೀ ಜಪಾದಿಕಂ ॥ದಕ್ಷಃ॥ "ನದೀಷು ಇತ್ಯಾದಿ" ಮುಂದೆ ಹೇಳುವುದರಿಂದ ಅವಗಾಹನಸ್ನಾನವು ಪ್ರಶಸ್ತವೆಂದಹಾಗಾಯಿತು.

12 ನ ಮಹಾನಿಶಿ ॥ಮ-iv-೧೨೯॥ ನ ರಾತ್ರೌ ॥ವಿ-೬೪-೬॥ ಮಹಾನಿಶಾತ್ರವಿಜ್ಞೇಯಾ ಮಧ್ಯಸ್ಥಂ ಪ್ರಹರದ್ವಯಂ । ತತ್ರ ಸ್ನಾನಂ ನ ಕುರ್ವೀತ ॥ದೇವಲಃ॥ ರಾತ್ರಿಯ ೨ನೇ ಮೂರನೇ ಜಾವಗಳು ಮಹಾರಾತ್ರಿ ॥

13 ನ ಸ್ನಾನಮಾಚರೇದ್ಭುಕ್ತ್ವಾ ॥ಮ-iv-೧೨೯॥ 14 ನಾಜೀರ್ಣೇ ॥ವಿ-೬೪-೩॥

15 ನಾತುರಃ ॥ವಿ ೬೪-೪॥ 16 (ನ ರಾತ್ರೌ) ರಾಹುದರ್ಶನವರ್ಜಂ ॥ವಿ-೬೪-೭॥

17 ನದೀಷು ದೇವಖಾತೇಷು ತಟಾಗೇಷು ಸರಸ್ಸು ಚ । ಸ್ನಾನಂ ಸಮಾಚರೇನ್ನಿತ್ಯಂ ಗರ್ತಪ್ರಸ್ರವಣೇಷು ಚ ॥ಮ-iv-೨೦೩॥

18 ಸಾಕ್ಷಾತ್ಪರಂಪರಯಾ ವಾ ಸಮುದ್ರಗಾಸ್ಸ್ರವಂತೋ ನದ್ಯಃ ॥ಮಿತಾ-ಯಾ-i-[೧೫೯॥

19 ದೇವಖಾತಂ ದೇವನಿರ್ಮಿತಂ ಪುಷ್ಕರಾದಿ ॥ಮಿತಾ-ಯಾ-i-೧೫೯॥

20 ಧನುಸ್ಸಹಸ್ರಾಣ್ಯಷ್ಟೌ ಚ ಗತಿರ್ಯಾಸಾಂ ನ ವಿದ್ಯತೇ । ನ ತಾ ನದೀಶಬ್ದವಹಾಃ ಗರ್ತಾಸ್ತಾಃ ಪರಿಕೀರ್ತಿತಾಃ ॥ಕಾತ್ಯಾಯನಃ॥

21 ಪರ್ವತಾದ್ಯುಚ್ಚಪ್ರದೇಶಾತ್ಸ್ರುತಮುದಕಂ ಪ್ರಸ್ರವಣಂ ॥ಮಿತಾ-ಯಾ-i-೧೫೯॥

22 ನದ್ಯಾ ಯಚ್ಚ ಪರಿಭ್ರಷ್ಟಂ ನದ್ಯಾ ಯಚ್ಚ ವಿನಿಸ್ಸೃತಂ। ಗತಪ್ರತ್ಯಾಗತಂ ಯಚ್ಚ ತತ್ತೋಯಂ ಪರಿವರ್ಜಯೇತ್ ॥ವ್ಯಾಸಃ॥

ರಜಸ್ವಲೆಯಾಗುತ್ತವೆ ಎಂದು ವಚನವೂ ಇದೆ,[23] ಆಗ ನದಿಯ ನೀರು ಬದಿಯಾಗಿಯೂ ಕೊಳಕಾಗಿಯೂ ಇರುವುದೂ ಪ್ರತ್ಯಕ್ಷವೇ. ನದ್ಯಾದಿಗಳು ಎಲ್ಲಾ ಕಡೆಯಲ್ಲಿಯೂ ಇರುವುದಿಲ್ಲ, ಇಲ್ಲದ ಸ್ಥಳದಲ್ಲಿ ಬಾವಿ ಮುಂತಾದವುಗಳಿಂದ ನೀರನ್ನೆತ್ತಿ ತಂದು ನೆಲದ ಮೇಲೆ ಸ್ನಾನಮಾಡಬೇಕು,[24] ಬಾವಿ ಕೊಳಗಳಲ್ಲಿಯೇ ಮಾಡಬಾರದು. ಮತ್ತೊಬ್ಬರು ಕುಡಿಯುವುದಕ್ಕೆ ಉಪಯೋಗಿಸುವ ನೀರಿನಲ್ಲಿ ಸ್ನಾನವನ್ನು ಮಾಡಲೇಬಾರದು[25] ಮತ್ತೊಬ್ಬರಿಗೆ ಸೇರಿದ ನೀರಿನಲ್ಲಿಯೂ ಸ್ನಾನಮಾಡಬಾರದು, ಮಾಡಲೇಬೇಕಾಗಿ ಬಂದರೆ ತಳದಿಂದ ಐದು ಬೊಗಸೆ ಮಣ್ಣು ಅಥವಾ ಕೆಸರನ್ನು ಎತ್ತಿಹಾಕಿ ಸ್ನಾನಮಾಡಬೇಕು.[26] ನಿಂತ ನೀರಿನಲ್ಲಿಯೂ ಅಲ್ಪಜಲದಲ್ಲಿಯೂ ಅಪ್ರಸಿದ್ಧವಾದ ನೀರಿನಲ್ಲಿಯೂ ಸ್ನಾನವನ್ನು ಮಾಡಬಾರದು.[27] ಎತ್ತಿತೆಗೆದ ನೀರಿಗಿಂತಲೂ ಭೂಮಿಯಮೇಲೆ ನಿಂತುದೂ, ಅದಕ್ಕಿಂತಲೂ ಪ್ರಸ್ರವಣದ್ದೂ, ಅದಕ್ಕಿಂತಲೂ ಸರೋವರದ್ದೂ, ಅದಕ್ಕಿಂತಲೂ ನದಿಯದೂ, ಅದಕ್ಕಿಂತಲೂ ತೀರ್ಥೋದಕವೂ, ಎಲ್ಲದಕ್ಕಿಂತಲೂ ಗಂಗೆಯೂ ಶ್ರೇಷ್ಠವು.[28]

## ೨. ಶುದ್ಧಾಚಮನ

ಶೌಚವು ಬಾಹ್ಯ ಆಭ್ಯಂತರವೆಂದೆರಡು ಪ್ರಕಾರವಾದುದಷ್ಟೆ. ದೇಹಶುದ್ಧಿಯು ಬಾಹ್ಯವು, ಅದಕ್ಕಾಗಿ ಶೌಚಾದಿಸ್ನಾನಪರ್ಯಂತವಾದುವು ಉಕ್ತವಾಗಿವೆ. ಅಂತಶ್ಶುದ್ಧಿಪ್ರಕಾರವನ್ನೂ ಶುದ್ಧಿಪ್ರಕರಣದಲ್ಲಿ ಹೇಳಿದ್ದಾಗಿದೆ. ಅಂತಶ್ಶುದ್ಧಿಯೆಂದರೆ ಭಾವಶುದ್ಧಿ. ಆದಕ್ಕಾಗಿ ಶುದ್ಧಾಚಮನವೂ ಉಕ್ತವಾಗಿದೆ. ಕರ್ಮದ ಆದಿಯಲ್ಲಿಯೂ ಅಂತ್ಯದಲ್ಲಿಯೂ ಮಧ್ಯಮಧ್ಯದಲ್ಲಿಯೂ ಆಚಮನವು ನಡೆಯುತ್ತಲೇ ಇರುತ್ತದೆ. ಕರ್ಮಾಂಗವಾಗಿ ಮಾತ್ರವೇ ಅಲ್ಲ, ಭಾವವು ಮಲಿನವಾದಾಗಲೆಲ್ಲ ಆಚಮನವನ್ನು ಮಾಡಬೇಕು. ನಿದ್ದೆಯಿಂದ ಎದ್ದಾಗ, ವಾಯುವು ಸ್ಖಲಿತವಾದಾಗ, ಹಸಿವಾದಾಗ, ಬಟ್ಟೆಯನ್ನುಟ್ಟಾಗ, ಆಯ್ಕಳಿಸಿದಾಗ, ಕೆಮ್ಮಿದಾಗ, ಕಣ್ಣೀರಿಟ್ಟಾಗ, ಅತಿಯಾಗಿ

---

23 ಸಂಪ್ರಾಪ್ತೇ ಶ್ರಾವಣೇ ಮಾಸೇ ಸರ್ವಾನದ್ಯೋ ರಜಸ್ವಲಾಃ । ತಾಸು ಸ್ನಾನಂ ನ ಕುರ್ವೀತ ವರ್ಜಯಿತ್ವಾ ತು ಜಾಹ್ನವೀಂ ॥ ಕಾತ್ಯಾಯನಃ॥

24 ಕೂಪೇಷೂದ್ಧೃತತೋಯೇನ ಸ್ನಾನಂ ಕುರ್ವೀತ ವಾ ಭುವಿ ॥ ವಿ. ಪು.॥

25 ಪರಕೀಯನಿಪಾನೇಷು ನ ಸ್ನಾಯಾಚ್ಚ ಕದಾಚನ ॥ ಮ. iv-೨೦೧॥

26 ಪಂಚಪಿಂಡಾನನುದ್ಧೃತ್ಯ ನ ಸ್ನಾಯಾತ್ಪರವಾರಿಷು ॥ ಯಾ. i. ೧೫೯॥

27 ಅನುತ್ಸೃಷ್ಟೇಷು ನ ಸ್ನಾಯಾತ್ತಥೈವಾಽಸಂಸ್ಕೃತೇಷು ಚ । ಅತ್ಮೀಯೇಷ್ವಪಿನಸ್ನಾಯಾತ್ತಥೈವಾಲ್ಪಜಲೇಷು ಚ ॥ವ್ಯಾಸಃ॥

28 ಭೂಮಿಷ್ಠಮುದ್ಧೃತಾತ್ಪುಣ್ಯಂ ತತಃ ಪ್ರಸ್ರವಣೋದಕಂ । ತತೋಽಪಿ ಸಾರಸಂ ಪುಣ್ಯಂ ತಸ್ಮಾನ್ನಾದೇಯಮುಚ್ಯತೇ ॥ ತೀರ್ಥತೋಯಂ ತತಃ ಪುಣ್ಯಂ ಗಾಂಗಂ ಪುಣ್ಯಂ ತು ಸರ್ವತಃ ॥ಮಾರ್ಕಂಡೇಯಃ॥

ನಕ್ಕಾಗ, ಅತಿಯಾಗಿ ರೇಗಿದಾಗ, ಅನೃತವನ್ನಾಡಿದಾಗ, ಯಾರನ್ನಾದರೂ ಬೈದಾಗ, ಆಚಮನವನ್ನು ಮಾಡಬೇಕು.[29] ಆದರಿಂದ ಅಶುಚಿಶೋಧನವೂ ಉದ್ರೇಕಶಮನವೂ ಭಾವಶುದ್ಧಿಯೂ ಆಗುವುವು. ಮಹಾವಿಷ್ಣುವಿನ ೨೪ ನಾಮಗಳಿಂದ ಮಾಡುವ ಆಚಮನವು ಮಾನಸಿಕಸ್ನಾನವೇ.[30]

## ೩. ಪ್ರಾಣಾಯಾಮ

ಸ್ನಾನಾಚಮನಗಳಂತೆ ಪ್ರಾಣಾಯಾಮವೂ ಕರ್ಮಾಂಗವಾದ ಕ್ರಿಯೆಯು. ಅಷ್ಟೇ ಅಲ್ಲ ಅದೇ ಒಂದು ಕ್ರಿಯೆ. ಯಾವ ಕರ್ಮವನ್ನು ಪ್ರಾರಂಭಿಸಬೇಕಾದರೂ ಸಂಕಲ್ಪವನ್ನು ಮಾಡಬೇಕಷ್ಟೆ. ಸಂಕಲ್ಪವನ್ನು ಪ್ರಾಣಾಯಾಮಪೂರ್ವಕವಾಗಿಯೇ ಮಾಡುವುದು. ಹೀಗೆ ಕರ್ಮಾಂಗಮಾತ್ರವೇ ಅಲ್ಲ, ಅಷ್ಟಾಂಗಯೋಗಗಳಲ್ಲಿ[1] ಅದೇ ಒಂದು ಕ್ರಿಯೆ, ಮಹತ್ವವಿಶಿಷ್ಟವಾದ ಕ್ರಿಯೆಯಾದುದರಿಂದಲೇ ಅದನ್ನು ಪ್ರತಿ ಕರ್ಮದಲ್ಲಿಯೂ ಮಾಡುವುದು. ಇದರ ಮಹತ್ವವೂ ಅನುಷ್ಠಾನಕ್ರಮವೂ ಈಗ ಅನೇಕರಿಗೆ ತಿಳಿಯದಾಗಿದೆ. ಕರ್ಮಗಳನ್ನು ಕಟ್ಟಿಕೊಂಡಿರುವವರೂ ಕೂಡ ಪ್ರಾಣವಾಯುವನ್ನು, ಯಥಾವಿಧಿಯಾಗಿ ಪ್ರಾಣನಿರೋಧಾದಿಗಳನ್ನು ಮಾಡುವುದಿರಲಿ, ಮೂಗಿಗೆ ಬೆರಳು ಸೋಕಿಸುವುದರಲ್ಲೂ ತೋರಿಸುವುದರಲ್ಲೂ "ಪ್ರಣವಸ್ಯಾಂತರ್ಯಾಮಿಋಷಿಃ ಪರಮಾತ್ಮಾ ದೇವತಾ ದೈವೀಗಾಯತ್ರೀಛಂದಃ" ಎಂಬಾರಂಭದ ಮಂತ್ರವನ್ನು "ದೈವೀಗಾಯತ್ರೀಛಂದಃ" ಎಂದಾರಂಭಿಸುವುದರಲ್ಲಿಯೂ ಕಾಟಾಚಾರವನ್ನು ಪ್ರದರ್ಶಿಸುತ್ತಾರೆ. ಪ್ರಾಣಾಯಾಮವು ನಿಜವಾಗಿಯೂ ಮಹತ್ವವಿಶಿಷ್ಟವಾದ ಕ್ರಿಯೆಯು. ಇದನ್ನು ಸರ್ವರೂ ಸರಿಯಾಗಿ ಅನುಷ್ಠಾನಮಾಡಬೇಕು. ಇದೇನು ಸರಾಗನಲ್ಲ. ಇದರ ವಿಸ್ತಾರವನ್ನು ಯೋಗಶಾಸ್ತ್ರಕ್ಕೂ ಅಭ್ಯಾಸವನ್ನು ಗುರುಶಿಕ್ಷಣಕ್ಕೂ ಬಿಟ್ಟು ಪ್ರಾಸಂಗಿಕವಾಗಿ ಕೆಲವು ವಿಷಯಗಳನ್ನು ಮಾತ್ರ ವಿಮರ್ಶಿಸಬಹುದು.

ದೇಹಧರ್ಮವನ್ನವಲಂಬಿಸಿ ಪ್ರಾಣವಾಯುವು ಮುಖನಾಸಿಕಗಳ ಮುಖಾಂತರವಾಗಿ ಉಚ್ಛ್ವಾಸನಿಶ್ವಾಸರೂಪದಲ್ಲಿ ಸಂಚರಿಸುತ್ತಲೇ ಇರುತ್ತದೆ. ಪ್ರಾಣವಾಯು

---

29 ಕ್ಷುತೇ ನಿಷ್ಠೀವನೇ ಸುಪ್ತೇ ಪರಿಧಾನೇ ಶ್ರುಪಾತನೇ । ಪಂಚಸ್ವೇತೇಷು ಚಾಚಾಮೇತ್ ॥ವಸಿಷ್ಠಃ॥ ಸುಪ್ತ್ವಾ ಕ್ಷುತ್ವಾ ಚ ಭುಕ್ತ್ವಾ ಚ ನಿಷ್ಠೀವ್ಯೋಕ್ತ್ವಾನೃತಂ ವಚಃ ॥..ಅಧೋವಾಯುಸಮುತ್ಸರ್ಗೇ ಆಕ್ರಂದೇ ಕ್ರೋಧಸಂಭವೇ ॥..ಪ್ರಹಾಸೇಽನೃತಭಾಷಣೇ ॥ ನಿಮಿತ್ತೇಷ್ವೇಷು ಸರ್ವೇಷು ಕರ್ಮ ಕುರ್ವನ್ನಪಸ್ಪೃಶೇತ್ ॥ಮನುಸ್ಮರಣಾತ್॥ ಸ್ನಾತ್ವಾ ಭೋಕ್ತುಮನಾ ಭುಕ್ತ್ವಾ ಸುಪ್ತ್ವಾ ಕ್ಷುತ್ವಾ ಸುರಾರ್ಚನೇ । (ಆಚಾಮೇತ್) ಆ. ಸಂ-ದಿನಚರ್ಯ॥

30 (ಸ್ನಾನಂ) ಮಾನಸಂ ವಿಷ್ಣುಚಿಂತನಂ ॥ಯೋಗಯಾಜ್ಞವಲ್ಕ್ಯಃ॥

1 ಯಮ ನಿಯಮಾಽಽಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿರಿತ್ಯಷ್ಟಾಂಗಾನಿ ॥

ವಿನ ನೈಸರ್ಗಿಕ ಗತಿಯನ್ನು ಯಥಾಯಥವಾಗಿ ನಡೆಯಲು ಬಿಡದೆ ನಿರುದ್ಧಮಾಡಿ ವ್ಯವಸ್ಥಿತ ರೂಪದಲ್ಲಿ ವಿನಿಯಮಮಾಡುವುದು ಪ್ರಾಣಾಯಾಮದ ಅರ್ಥವು. "ಹಂ" ಎಂದನುಕರಿಸುವಂತೆ ಧ್ವನಿಮಾಡುತ್ತಾ ವಾಯುವು ಕೋಶದಿಂದ ನಿರ್ಗಮಿಸುತ್ತದೆ, ಅದೇ ನಿಶ್ಶ್ವಾಸವು, ಯೋಗಶಾಸ್ತ್ರದಲ್ಲಿ ರೇಚಕವೆನ್ನುವುದು. "ಸಃ" ಎಂದನುಕರಿಸುವಂತೆ ಧ್ವನಿಮಾಡುತ್ತಾ ವಾಯುವು ಕೋಶವನ್ನು ಪ್ರವೇಶಿಸುತ್ತದೆ, ಅದೇ ಉಚ್ಛ್ವಾಸವು, ಯೋಗದಲ್ಲಿ ಪೂರಕ[2] ವೆನ್ನುವುದು. ಪೂರಕರೇಚಕಗಳ ಮಧ್ಯದಲ್ಲೂ ರೇಚಕಪೂರಕಗಳ ಮಧ್ಯದಲ್ಲೂ ವಾಯುಗತಿಯು ವಿರಾಮವನ್ನು ತಾಳುತ್ತದೆ. ರೇಚಕಪೂರಕಗಳ ಮಧ್ಯಗತವಾದ ಅಲ್ಪವಿರಾಮವು ಬಾಹ್ಯವು, ದೈಹಿಕವ್ಯಾಪಾರವಲ್ಲವಾಗಿ ಪ್ರಾಣಾಯಾಮಕ್ಕದು ಪ್ರಕೃತವಲ್ಲ. ಪೂರಕರೇಚಕಗಳ ಮಧ್ಯಗತವಾದ ವಿರಾಮವು ಆಂತರವು, ದೈಹಿಕವು, ಪ್ರಾಣಗತಿಯ ಅಂಗವು, ಪ್ರಾಣಾಯಾಮಕ್ಕೆ ಪ್ರಕೃತವು. ಅದನ್ನು ಕುಂಭಕವೆನ್ನುತ್ತಾರೆ. ಪೂರಕ ಕುಂಭಕ ರೇಚಕಗಳೆಂಬ ವಾಯುಗತಿಯ ಸಮಾಹಾರವೇ ಒಂದು ಶ್ವಾಸವು. ಮೇಲೆ ಹೇಳಿದಂತೆ ಪ್ರತಿ ಶ್ವಾಸಕ್ಕೂ ಒಂದು "ಹಂಸಃ" ಎಂಬ ಮಂತ್ರದ ಉಚ್ಚಾರವಾಗುವುದು. ಪೂರಕವು ಶ್ವಾಸದ ಆದಿಯೂ ರೇಚಕವು ಅಂತ್ಯವೂ ಆದುದರಿಂದ "ಹಂಸಃ" ಎಂಬುದನ್ನೂ ವ್ಯತ್ಯಸ್ತಮಾಡಿದರೆ "ಸೋಽಹಂ" ಆ ಪರಮಾತ್ಮನೇ ನಾನು, ಎಂದರ್ಥವಾಗುವುದು. ಸೋಽಹಂ ಎಂಬುದೇ "ಬ್ರಹ್ಮಾಽಹಮಸ್ಮಿ", "ಅಹಂಬ್ರಹ್ಮಾಸ್ಮಿ" ಎಂಬ ಮಹಾ ವಾಕ್ಯದ ಬೇರೊಂದು ರೂಪ. ಅದರಿಂದಲೇ ಹಂಸಮಂತ್ರಕ್ಕೆ ಈಶ್ವರೀಮಂತ್ರವೆಂದು ಹೆಸರು. ಜೀವವು ಈ ಮಂತ್ರವನ್ನು ದಿನವೊಂದಕ್ಕೆ ೨೧,೬೦೦ ಆವೃತ್ತಿ ಜಪಿಸುತ್ತದೆ.[3] ಈ ಲೆಕ್ಕದ ಪ್ರಕಾರ ನಿಮಿಷಕ್ಕೆ (ಮಿನಿಟ್ಟಿಗೆ) ೧೫ ಶ್ವಾಸಗಳಾಗುವುವು. ಆಧುನಿಕ ವೈದ್ಯವಿಜ್ಞರೂ ಕೂಡ ಚೆನ್ನಾಗಿ ಬೆಳೆದು ಆರೋಗ್ಯವಾಗಿರುವವನಿಗೆ ನಿಮಿಷ (ಮಿನಿಟ್) ಒಂದಕ್ಕೆ ಸ್ವಲ್ಪ ಹೆಚ್ಚು ಕಡಿಮೆ ೧೬ ಶ್ವಾಸಗತಿಗಳೆಂದು ನಿರ್ಣಯಿಸಿದ್ದಾರೆ.[4] ಶ್ರಮ ಜ್ವರ ಉದ್ರೇಕಗಳಲ್ಲಿ ಗತಿಯು ತೀವ್ರವಾದರೆ ಶಾಂತಿ

---

2 ಹಂಕಾರೇಣ ಬಹಿರ್ಯಾತಿ ಸಕಾರೇಣಾವಿಶೇತ್ಪುನಃ । ಹಂಸಹಂಸೇತಿ ಮಂತ್ರೋಽಯಂ ಜೀವೋ ಜಪತಿ ಸರ್ವದಾ ॥ಇತಿಸ್ಮರಣಾತ್॥ ನಾಸಿಕಾಕೃಷ್ಟಉಚ್ಛ್ವಾಸೋ ಧ್ಮಾತಃ ಪೂರಕ ಉಚ್ಯತೇ । ಕುಂಭಕೋ ನಿಶ್ಚಲಶ್ವಾಸೋ ರಿಚ್ಯಮಾನಸ್ತು ರೇಚಕಃ ॥ಯೋ.ಯಾ ॥

3 ಏಕವಿಂಶತಿಸಾಹಸ್ರಂ ಷಟ್ಶತಾಧಿಕಮೀಶ್ವರೀಂ । ಪ್ರತ್ಯಹಂ ಜಪತಿ ಪ್ರಾಣೀ ಹಂಸ ಇತ್ಯಕ್ಷರದ್ವಯೀಂ ॥

4 What is called the Rhythm of respiration consists of three parts—inspiration, expiration and pause one after the other in regular order, the three parts forming one respiration. In an adult healthy man the number of respirations should be about sixteen per minute—'Household Physician'—Dr. J.M. Robertson. ಸುಮಾರು (about) ಎಂದಿರುವುದರಿಂದ ೧೫ ಎಂದಿರುವುದೇನೂ ತಪ್ಪಲ್ಲ.

ವಿಶ್ರಾಂತಿ ಸಮಾಧಾನಗಳಲ್ಲಿ ನಿಧಾನವಾಗುವುದು. ಅಂತೂ, ಪ್ರಕೃತಿವ್ಯತ್ಯಾಸಗಳು ಒಂದರ ಹಿಂದೊಂದು ಬಂದೇ ಬರುವುದರಿಂದ ಒಟ್ಟು ಲೆಕ್ಕವು ಸರಿಹೋಗುವುದು. ಶ್ವಾಸವೇ ಪ್ರಾಣವು, ಪ್ರಾಣವೇ ಜೀವಿಗಳ ಆಯುಷ್ಯವು.[5] ಪ್ರತಿಕ್ಷಣದಲ್ಲಿಯೂ ಜೀವಿಯ ಆಯುಷ್ಯವು ಕಳೆಯುತ್ತಾ ಹೋಗುವುದಷ್ಟೆ. ದಿನವನ್ನು ಮಾನವಾಗಿಟ್ಟುಕೊಂಡರೆ ದಿನ ಒಂದಕ್ಕೆ ೨೧,೬೦೦ ಗತಿಗಳೆನ್ನಬೇಕೇ ಅಥವಾ ೨೧,೬೦೦ ಗತಿಗಳಿಗೆ ದಿನವೆನ್ನಬೇಕೇ ಎಂಬ ಪ್ರಶ್ನೆಯು ಏಳುವುದು. ಸಾಮಾನ್ಯವಾಗಿ ದಿನವೆಂದರೆ ಸೂರ್ಯೋದಯದಿಂದ ಪುನಸ್ಸೂರ್ಯೋದಯ ಪರ್ಯಂತವಾದ ಒಂದಹೋರಾತ್ರಿಯು. ಇದೇ ನೈಸರ್ಗಿಕ ಮಾನವು. ಈ ಮಾನದ ಪ್ರಕಾರ ಅಹೋರಾತ್ರಿಗಳ ಲೆಕ್ಕದಿಂದಲೇ ಆಯುಃಪರಿಮಿತಿಯು ಗಣನೆಯಾಗಬೇಕು. ಈ ವಿಧದಲ್ಲಿ ಮಾನವನೂ ಇತರ ಪ್ರಾಣಿಗಳಂತೆ ಪರಾಧೀನನು—ಸ್ವತಂತ್ರನಲ್ಲ, ವಶನು—ವಶಿಯಲ್ಲ, ಪ್ರಕೃತಿ ನಿಯಮವೇ ವಿಭುವು—ಪುರುಷನಲ್ಲ, ಕಾಲವು ಓಡುತ್ತದೆ, ಆಯುಷ್ಯವು ಗತಿಸುತ್ತದೆ ಎನ್ನಬೇಕಾಗುವುದು. ಆಯುಃಕ್ಷಯವನ್ನು ನಿಲ್ಲಿಸುವುದು ಸಾಧ್ಯವಲ್ಲದಿದ್ದರೂ ಕ್ಷಯದ ವೇಗವನ್ನು ನಿರೋಧಿಸಿ ಜೀವಮಾನವನ್ನು ಲಂಬಿಸುವುದು ಸಾಧ್ಯವು. ಅದಕ್ಕೆ ಪ್ರಾಣಾಯಾಮವು ಸಾಧಕವಾದುದು; ಶ್ವಾಸದ ಕ್ಷಿಪ್ರಗತಿಯನ್ನು ತಡೆತಡೆದು ಪ್ರತಿ ಶ್ವಾಸದ ಕಾಲವನ್ನು ಲಂಬಿಸುವುದೇ ಪ್ರಾಣಾಯಾಮದ ಮೊದಲಣ ಕೆಲಸ. ಹೀಗೆ ಲಂಬಿಸುವುದರಿಂದ ೨೧,೬೦೦ ಶ್ವಾಸಗತಿಗಳ ಆದ್ಯಂತ ಕಾಲಪರಿಮಿತಿಯು ಸೂರ್ಯಗತಿ(ಗಡಿಯಾರ)ಯಿಂದ ನಿರ್ಣಯಿಸುವ ಒಂದಹೋರಾತ್ರಿಗಿಂತಲೂ ದೀರ್ಘವಾಗುವುದು, ಈ ಗಣನೆಯ ಪ್ರಕಾರ ಆಯುಷ್ಯದ ಅವಧಿಯೂ ದೀರ್ಘವಾಗಬೇಕಾಯಿತು. ಋಷಿಗಳು (ಯೋಗಿಗಳು) ಹೀಗೆ ದೀರ್ಘಾಯುಗಳಾದರೆಂದು ಮನುವಚನದಿಂದ ಸಿದ್ಧವಾಗುವುದು.[6] ಆಯುಷ್ಯವನ್ನು ಲಂಬಿಸುವುದು ಮಾತ್ರವೇ ಪ್ರಾಣಾಯಾಮದ ಫಲವಾಗಿದ್ದರೆ ಅದೂ ಒಂದು ಶಾರೀರಕ ವ್ಯಾಯಾಮವೆನ್ನಬೇಕಾಗಿತ್ತು. ಅದರ ಫಲವು ಅಷ್ಟೇ ಅಲ್ಲ. ಯಮಾದಿಯೋಗದಿಂದ ಅನ್ನಮಯಕೋಶವು ನಿಗ್ರಹವಾದರೆ ಪ್ರಾಣಾಯಾಮದಿಂದ ಪ್ರಾಣಮಯಕೋಶವು ನಿಗ್ರಹವಾಗುವುದು. ಅಲ್ಲಿಂದ ಕ್ರಮವಾಗಿ ಮನೋಮಯಾದಿಕೋಶಗಳು ನಿಗ್ರಹವಾಗಿ ಚಿತ್ತೈಕಾಗ್ರತೆಯು ಪ್ರಾಪ್ತ

---

5 ಪ್ರಾಣಂ ದೇವಾ ಅನುಪ್ರಾಣನ್ತಿ । ಮನುಷ್ಯಾಃ ಪಶವಶ್ಚ ಯೇ । ಪ್ರಾಣೋಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷಮುಚ್ಯತೇ ॥ತೈ. ಉ.॥ ಯಃ ಪ್ರಾಣೋ ದೇವಮನುಷ್ಯಪಶ್ವಾದೀನಾಂ ಚೇಷ್ಟಾಮುತ್ಪಾದಯತಿ ಸ ಪ್ರಾಣಃ ಯಸ್ಮಾತ್ಸರ್ವಪ್ರಾಣಿನಾಮಾಯುಷ್ಯಹೇತುಸ್ತಸ್ಮಾತ್ಸರ್ವಾಯುಷಮುಚ್ಯತ ಇತಿ ॥ಭಾಷ್ಯ॥

6 ಋಷಯೋ ದೀರ್ಘಸನ್ಧ್ಯತ್ವಾತ್ ದೀರ್ಘಮಾಯುಮವಾಪ್ನುಯುಃ ॥ಮ-iv-೯೪॥ ಅತ್ರ ಸನ್ಧ್ಯಾಶಬ್ದಸ್ಸನ್ಧ್ಯಾನುಷ್ಠೇಯಜಪಾದಿಪರಃ॥ಕುಲ್ಲೂಕಃ॥ ಸಂಧ್ಯಾವಂದನೆಯಲ್ಲಿ ಲಂಬಿಸಬಹುದಾದ ಕ್ರಿಯೆಗಳು ಜಪಪ್ರಾಣಾಯಾಮಗಳು, ಮಿಕ್ಕವಲ್ಲ. ಅದರಿಂದ ಪ್ರಾಣಾಯಾಮವನ್ನು ಮಾಡಿದರೆ ದೀರ್ಘಾಯುವಾಗಬಹುದೆಂದು ಸ್ವತಸ್ಸಿದ್ಧವಾಗುವುದು,

ವಾಗಿ ತನ್ಮೂಲಕ ಮುಕ್ತಿಯನ್ನು ಹೊಂದಬಹುದು. ಹೀಗೆ ಮೋಕ್ಷಸಾಧನ ಪ್ರಣಾಳಿಯಲ್ಲಿ ಪ್ರಾಣಾಯಾಮವೂ ಒಂದು ಸೋಪಾನವು.

ಪ್ರಾಣಾಯಾಮವು ಮಂತ್ರಪೂರ್ವಕವಾಗಿಯೇ ನಡೆಯಬೇಕು. ಓಂಕಾರವು ಪ್ರಣವವು. ಭೂರಿತ್ಯಾದಿಗಳು ವ್ಯಾಹೃತಿಗಳು. ತತ್ಸವಿತುರಿತ್ಯಾದಿಯು ಗಾಯತ್ರಿಯು. ಓಮಾಪೋ ಇತ್ಯಾದಿಯು ಗಾಯತ್ರೀ ಶಿರಸ್ಸು. ಓಂಕಾರಪೂರ್ವಕವಾಗಿ ಪ್ರತಿ ವ್ಯಾಹೃತಿಯನ್ನೂ, ಓಂ ಪೂರ್ವಕವಾಗಿ ಗಾಯತ್ರಿಯನ್ನೂ, ಆಮೇಲೆ ಆದ್ಯಂತದಲ್ಲಿ ಓಂಕಾರವಿರುವ ಶಿರಸ್ಸನ್ನೂ ಜಪಮಾಡುತ್ತಾ,[7] ಪೂರಕರೇಚಕಗಳಲ್ಲಿ ಶ್ವಾಸಗತಿಯ ವೇಗವನ್ನು ತಡೆಯುತ್ತಲೂ ಕುಂಭಕದಲ್ಲಿ ಶ್ವಾಸಧಾರಣವನ್ನು ಮಾಡುತ್ತಲೂ ಹೋಗಬೇಕು. ಹೀಗೆ ಮೂರಾವೃತ್ತಿ ಜಪವನ್ನು ಮಾಡುತ್ತಾ ಮೂರಾವೃತ್ತಿ ಪೂರಕಾದಿ ತ್ರಿಸ್ಥಾನಗಳಲ್ಲಿ ಪ್ರಾಣವನ್ನು ವಿನಿಯಮ ಮಾಡುವುದು. ಮಂತ್ರಜಪ ಪೂರ್ವಕವಾಗಿ ಮೂರಾವೃತ್ತಿ ತ್ರಿಸ್ಥಾನಗಳಲ್ಲಿ ಶ್ವಾಸವನ್ನು ವಿನಿಮಯ ಮಾಡುವುದೊಂದು ಪ್ರಾಣಾಯಾಮವು.[8] ಪೂರಕ ಕುಂಭಕ ರೇಚಕಗಳ ವಿನಿಮಯವು ೧–೪–೨ ಪ್ರಮಾಣದಲ್ಲಿ ನಡೆಯುವುದೊಂದು ಸಂಪ್ರದಾಯ. ಇದು ಸಾಮಾನ್ಯವಾಗಿ ಪ್ರಾಣಾಯಾಮ ಮಾಡುವ ಪ್ರಕಾರವು ಅತ್ಯುಚ್ಚ ಪ್ರಕಾರವನ್ನು ಶ್ರೀಮದ್ಭಗವತ್ಪಾದಾಚಾರ್ಯರು ಈರೀತಿ ಕ್ರೋಡೀಕರಿಸಿ ಹೇಳಿದ್ದಾರೆ:–ಮೇರುರೂಪವಾದ ಪೃಷ್ಠವಂಶದಲ್ಲಿ (ಬೆನ್ನಿನ ಮೂಳೆಯಲ್ಲಿ) ಅತ್ಯಂತ ಸೂಕ್ಷ್ಮವಾದ ಸುಷುಮ್ನೆಯೆಂಬ ನಾಡಿ(ನಾಳ)ಯು ಇದೆ. ಅದರೊಳಗೆ ಪ್ರಾಣವನ್ನು ನುಗ್ಗಿಸಿ ಅಲ್ಲಿ ಭೂಃ ಭುವಃ ಸ್ವಃ (ಸುವಃ) ಮಹಃ ಜನಃ ತಪಃ ಸತ್ಯಂ ಎಂಬ ಸಪ್ತೋರ್ಧ್ವಲೋಕಗಳನ್ನೂ ಅತಲ ವಿತಲ ಸುತಲ ತಲಾತಲ ರಸಾತಲ ಮಹಾತಲ ಪಾತಾಲಗಳೆಂಬ ಸಪ್ತಾಧೋಲೋಕಗಳನ್ನೂ ಮತ್ತು ಒಳಗೆ ಗ್ರಂಥಿರೂಪವನ್ನು ತಾಳಿರುವ ಮೂಲಾಧಾರ ಸ್ವಾಧಿಷ್ಠಾನ ಮಣಿಪೂರಕ

---

7 (ಪ್ರಾಣಾಯಾಮಾರ್ಥಂ ಮಂತ್ರಮಾಹ) ಓಂಭೂಃ । ಓಂಭುವಃ । ಓಂ ಸುವಃ । ಓಂಮಹಃ । ಓಂಜನಃ । ಓಂತಪಃ । ಓಂಸತ್ಯಂ ॥ ಓಂತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್॥ ಓಮಾಪೋಜ್ಯೋತೀರಸೋಽಮೃತಂಬ್ರಹ್ಮ ಭೂರ್ಭುವಸ್ಸುವರೋಮ್ ॥ತೈ. ಆ-ಪ್ರ. ೧೦-ಅ. ೨॥

8 ಸವ್ಯಾಹೃತಿಂ ಸಪ್ರಣವಾಂ ಗಾಯತ್ರೀಂ ಶಿರಸಾ ಸಹ । ತ್ರಿಃ ಪಠೇದಾಯತಪ್ರಾಣಃ ಪ್ರಾಣಾಯಾಮಸ್ಸ ಉಚ್ಯತೇ ॥ಅಮೃತನಾದೋಪನಿಷತ್ತು॥ ಗಾಯತ್ರೀಂ ಶಿರಸಾ ಸಾರ್ಧಂ ಜಪೇದ್ವ್ಯಾಹೃತಿಪೂರ್ವಕಾಂ । ಪ್ರತಿಪ್ರಣವಸಂಯುಕ್ತಾಂ ತ್ರಿರಯಂ ಪ್ರಾಣಸಂಯಮಃ ॥ ಯಾ. ೧-೨೩॥ ಗಾಯತ್ರೀಮಾಪೋಜ್ಯೋತಿರಿತ್ಯಾದಿನಾ ಶಿರಸಾ ಯುಕ್ತಾಂ ವ್ಯಾಹೃತಿಪೂರ್ವಿಕಾಂ ಪ್ರತಿವ್ಯಾಹೃತಿಪ್ರಣವೇನ ಸಂಯುಕ್ತಾಂ ಓಂಭೂಃಓಂಭುವಃಓಂಸ್ವರಿತಿ ತ್ರೀನ್ ವಾರಾನ್ ಮುಖನಾಸಿಕಾಸಂಚಾರಿ ವಾಯುಂ ನಿರುದ್ಧ್ಯ ಮನಸಾ ಜಪೇದಿತಿ ಸರ್ವತ್ರ ಪ್ರಾಣಾಯಾಮಃ ॥ಮಿತಾ॥ ವಿಜ್ಞಾನೇಶ್ವರರು "ಭೂರ್ಭುವಸ್ಸುವರಿತಿವಾ ಏತಾಸ್ತಿಸ್ರೋ ವ್ಯಾಹೃತಯಃ" ಅಂದರೆ ಭೂಃ ಭುವಃ ಸುವಃ ಎಂದು ವ್ಯಾಹೃತಿಗಳು ಮೂರು ಎಂಬ ಸಂಪ್ರದಾಯವನ್ನು ಅನುಸರಿಸಿದ್ದಾರೆ.

ಅನಾಹತ ವಿಶುದ್ಧಾಜ್ಞಾ ಬ್ರಹ್ಮರಂಧ್ರಗಳಲ್ಲಿ ಅಂದರೆ ಯೋಗಿಗಳ ಪಾರಿಭಾಷಿಕದಲ್ಲಿ ಚತುರ್ದಲ ಷಡ್ದಲ ದಶದಲ ದ್ವಾದಶದಲ ಷೋಡಶದಲ ದ್ವಿದಲ ಸಹಸ್ರದಲ ಯುಕ್ತವಾಗಿ ಅಧೋಮುಖವಾಗಿರುವ ಸಪ್ತಕಮಲಗಳಲ್ಲಿ, ಇರುವ ಗಣಪತಿ ಬ್ರಹ್ಮಾ ವಿಷ್ಣು ರುದ್ರ ಜೀವಾತ್ಮಾ ಪರಮಾತ್ಮಾ ಶ್ರೀಗುರುಗಳನ್ನು ಮೂರಾವೃತ್ತಿ ಧ್ಯಾನಮಾಡುವುದೊಂದು ಪ್ರಾಣಾಯಾಮವು, ಇದರ ವಿಸ್ತಾರವನ್ನು ಯೋಗಶಾಸ್ತ್ರದಿಂದ ಅರಿಯುವುದು.[9]

ಪ್ರಾಣಾಯಾಮವು ಎಷ್ಟು ಮಹತ್ತರವಾದುದೋ ಅಷ್ಟೂ ಅಷ್ಟು ಕ್ಲಿಷ್ಟವಾದುದು. ವಿಧಿವತ್ತಾಗಿ ಮಾಡಿದರೆ ಮಹಾಫಲವು, ಅವಿಧಿಯಾಗಿ ಮನಸ್ಸಿ ಮಾಡಿದರೆ ಅಪಾಯವು. ಶ್ವಾಸಕೋಶಗಳು ದೇಹದ ಪ್ರಧಾನಾಶಯಗಳು. ಪ್ರಾಣಾಯಾಮದ ಪರಿಣಾಮವು ಮೊದಲು ಆ ಕೋಶಗಳ ಮೇಲೆ ಆಗುವುದು. ಇಂದ್ರಿಯಗಳ ಮೇಲೂ ನರಗಳ ಮೇಲೂ ರಕ್ತವಾಹಿನಿಗಳ ಮೇಲೂ ಒಟ್ಟಿನಲ್ಲಿ ಆದ್ಯಂತ ಶರೀರದ ಮೇಲೂ ಸಾಕ್ಷಾತ್ತಾಗಿಯೋ ಪರಂಪರೆಯಾಗಿಯೋ ಪ್ರಾಣಾಯಾಮದ ಪ್ರಭಾವವು ಬಿದ್ದೇ ಬೀಳುವುದು. ಅದರಿಂದ ಎಷ್ಟು ಜಾಗರೂಕತೆಯಿಂದ ಅಭ್ಯಾಸ ಮಾಡಿದರೆ ಅಷ್ಟು ಒಳ್ಳೆಯದು, ಅಭ್ಯಾಸವು ವಿಪರೀತವಾದರೆ ಫಲವೂ ತಲೆಕೆಳಗಾಗುವುದು. ಅಲ್ಪಾರಂಭವು ಶ್ರೇಯಸ್ಕರವು, ಸುಖಾರಂಭದಿಂದ ಪ್ರಗತಿಯು. ಆರಂಭದಲ್ಲಿ

---

9 ಭೂರಾದಿಸಪ್ತಲೋಕಾನ್ ಸಪ್ತಪಾತಾಲಾನ್, ತ್ರಿಗುಣಿತಾನ್, ಪೃಷ್ಠವಂಶೇ ಮೇರುರೂಪೇ ಗ್ರನ್ಥ್ಯಾಕಾರೇಣ ಪರಿಣತಾನ್ ಸಪ್ತದೇವತಾಃ ಸುಷುಮ್ನಾಮಾರ್ಗೇಣ ಪ್ರವಿಷ್ಟೇನ ನಭಸಾ ಧ್ಯಾಯನ್ ಪ್ರಾಣಾಯಾಮಂ ಕುರ್ಯಾತ್ । ಏತತ್ಸರ್ವಂ ಯೋಗಶಾಸ್ತ್ರೇಷು ಸ್ಪಷ್ಟತರಂ ॥ಶ್ರೀಮಚ್ಛಂಕರಭಗವತ್ಪಾದಾಃ॥ ಸುಷುಮ್ನಾನಾಡಿಯೆಂದರೆ ಬೆನ್ನುಮೂಳೆಯ ಒಳಗೆ ಉದ್ದಕ್ಕೂ ಇರುವ ಸೂಕ್ಷ್ಮಾತಿಸೂಕ್ಷ್ಮವಾದ ನಾಳವು. ಇದು ಸಾಮಾನ್ಯವಾಗಿ ಬೆನ್ನುಮೂಳೆಯು ಬಗ್ಗಿರುವುದರಿಂದ ಮುಚ್ಚಿರುತ್ತದೆ. ಇದರ ಅಧೋಭಾಗದಲ್ಲಿ ಕುಂಡಲಿನಿ ಎಂಬ ಪದ್ಮವು (ಹಾವಿನಂತೆ) ಮಂಡಲವನ್ನು ಹೂಡಿ ನಾಳದ್ವಾರವನ್ನು ಮುಚ್ಚಿಕೊಂಡು ಕುಳಿತಿರುತ್ತದೆ. ಆ ಪದ್ಮಬಂಧವನ್ನು ಪ್ರಾಣಾಯಾಮದ ಮೂಲಕವಾಗಿ ಸಡಲಿಸಿ ನಾಳದ್ವಾರವನ್ನು ತೆರೆಯಿಸಿ ನಾಳದೊಳಗೆ ಕುಂಡಲಿನೀಶಕ್ತಿಯನ್ನು ಮೇಲಕ್ಕೆ ಏರುತ್ತಾ ಹೋಗುವಂತೆ ಮಾಡಬೇಕು. ಸುಷುಮ್ನೆಯಲ್ಲಿ ಮೂಲಾಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಾಜ್ಞಾ ಬ್ರಹ್ಮರಂಧ್ರಗಳೆಂಬ, ನಾಲ್ಕು ಆರು ಹತ್ತು ಹನ್ನೆರಡು ಹದಿನಾರು ಎರಡು ಸಾವಿರ, ದಲಗಳ ಆಕಾರದ ಏಳು ಕಮಲಗಳು ಅಧೋಮುಖವಾಗಿವೆ. ಅವುಗಳಲ್ಲಿ ಕ್ರಮವಾಗಿ ಗಣಪತಿ ಬ್ರಹ್ಮ ವಿಷ್ಣು ರುದ್ರ ಜೀವಾತ್ಮ ಪರಮಾತ್ಮ ಶ್ರೀಗುರುಗಳು ಅಧಿಷ್ಠಾತರಾಗಿದ್ದಾರೆ. ಮೂಲಾಧಾರದಿಂದ ಪ್ರಾಣವು ಪ್ರವೇಶಿಸಿ ಕ್ರಮ ಕ್ರಮವಾಗಿ ಒಂದೊಂದು ಕಮಲಗಳ ಮುಖಾಂತರವಾಗಿ ಮೇಲಕ್ಕೆ ಏರುತ್ತಾ ಆಯಾ ಸ್ಥಾನಗಳಲ್ಲಿ ಆಯಾ ದೇವತೆಗಳನ್ನು ಧ್ಯಾನವಾಗುತ್ತಾ ಸಹಸ್ರಾರಯುತವಾದ ಬ್ರಹ್ಮರಂಧ್ರವನ್ನು ಸೇರಬೇಕು. ಆಗ ಆತ್ಮಸಾಕ್ಷಾತ್ಕಾರವಾಗುವುದು. ಸುಷುಮ್ನಾ ನಾಡಿಯ ಅಂತರ್ಗತವಾದ ಆಕಾಶವು ಚಿದಾಕಾಶವು, ಅದು ಬಹಿರಾಕಾಶಭಿನ್ನವಾದುದು. ಚಿದಾಕಾಶ ಪ್ರವೇಶದೊಡನೆಯೇ ಗೂಢಾನುಭವವೂ ಆತ್ಮಸ್ವರೂಪವೂ ಸರ್ವಜ್ಞತ್ವವೂ ಜ್ಞಾನವೂ ಪ್ರಾಪ್ತವಾಗ.ವುವು.

ತ್ರಿಸ್ಥಾನಗಳ ಕಾಲಪರಿಮಾಣವನ್ನು ಮಿತವಾಗಿಟ್ಟುಕೊಳ್ಳಬೇಕು. ಕುಂಭಕದಲ್ಲಿ ಶ್ವಾಸಕೋಶಗಳ ಮೇಲೂ ನರಗಳ ಮೇಲೂ ರಕ್ತವಾಹಿನಿಗಳ ಮೇಲೂ ಒತ್ತಡವು ಹೆಚ್ಚಾಗುವುದು. ಪೂರಕರೇಚಕಗಳಲ್ಲಿ ಅಷ್ಟಾಗಿ ಆಗುವುದಿಲ್ಲ. ಆದಕಾರಣ ಪೂರಕರೇಚಕಗಳನ್ನು ಮೊದಲು ಹತೋಟಿಗೆ ತಂದುಕೊಂಡು ಆಮೇಲೆ ಕುಂಭಕಕ್ಕೆ ಗಮನವನ್ನು ಕೊಡಬೇಕು. ಪೂರಕಕ್ಕಿಂತಲೂ ರೇಚಕವು ಕಷ್ಟತರವಾದುದು. ಏಕೆಂದರೆ ಕುಂಭಕದಲ್ಲಿ ಕೋಶಭಿತ್ತಿಯ ಧಾರಣಶಕ್ತಿಯು ವಿನಿಮಯವಾಗಿ ಹೋಗು ವುದರಿಂದ ಸ್ತಂಭಿತವಾದ ವಾಯುವು ನಾಸಾಪುಟದಿಂದ ವೇಗವಾಗಿ ನಿರ್ಗಮಿಸು ವುದು, ರೇಚಕದ ಕಾಲವು ಪೂರಕದ ದ್ವಿಗುಣವಾದುದರಿಂದ ರೇಚಕಗತಿಯನ್ನು ನಿಯಮಿಸುವುದು ಕಷ್ಟವು ಇನ್ನೊಂದು ಪ್ರಕೃತಿನಿಯಮಿತವಾದ ತೊಡರೂ ಉಂಟು. ನಾಸಾಪುಟಗಳೆರಡಿದ್ದರೂ ಉಚ್ಛ್ವಾಸನಿಶ್ವಾಸವು ಒಂದು ಹೊಳ್ಳೆಯಲ್ಲಿಯೇ ಸರಾಗ ವಾಗಿ ಚಲಿಸುತ್ತಿರುವುದು ಇದು ಆಗಾಗ ಬದಲಾಯಿಸುತ್ತಿರುವುದು. (ಇದನ್ನು ಸೂರ್ಯಸ್ವರ ಚಂದ್ರಸ್ವರ ಎನ್ನುತ್ತಾರೆ.) ಪ್ರಾಣಾಯಾಮದಲ್ಲಿ ಎರಡು ಹೊಳ್ಳೆಗಳೂ ಕೆಲಸಮಾಡಬೇಕು, ಕೆಲಸದ ಕ್ರಮವೂ ನಿಯತವಾಗಿದೆ ಸಾಧಾರಣವಾಗಿ ಆಡದಿರು ವುದನ್ನು ಪ್ರಯತ್ನದಿಂದ ಆಡಿಸುವುದೊಂದು ಹೆಚ್ಚು ಕೆಲಸ. ಹೊರಗಿನ ವಿಘ್ನಕಾರಿ ವಾತಾವರಣದಿಂದಲೂ ವಿಘ್ನವಾಗುವುದು. ರಾಗದ್ವೇಷಾದ್ಯುದ್ರೇಕಗಳಿಂದಲೂ, ಭಯಭೀತ್ಯಾದಿ ಚಿತ್ತಕ್ಷೋಭೆಗಳಿಂದಲೂ, ಆಭ್ಯಂತರ ವಿಘ್ನಗಳೂ ಒದಗುವುವು. ಎಲ್ಲವನ್ನು ಪರಿಹರಿಸಿಕೊಂಡು, ಅರಿತು ನುರಿತ ಗುರುವಿನ ಸಹಾಯದಿಂದ, ಮುಂದು ವರಿಯಬೇಕು.

ಪ್ರಾಣಾಯಾಮ ಮಂತ್ರದ ಅರ್ಥವು ಅತ್ಯಂತೋಚ್ಚವಾದುದು. ಓಂಕಾರವು ಪರಮಾತ್ಮವಾಚಕವು. ಆ ಒಂದರಲ್ಲಿ ವಿಶ್ವವೆಲ್ಲವೂ ಅಂತರ್ಗತವಾಗಿದೆ.[10] ವ್ಯಾಹೃತಿ ಗಳ ಗಾಯತ್ರಿಯ ಶಿರಸ್ಸಿನ ತತ್ವಾರ್ಥವೂ ಅತ್ಯುಚ್ಚವಾದುದು. ಅದೆಲ್ಲವನ್ನೂ ಸಂಧ್ಯಾವಂದನೆಯ ಅರ್ಥಪ್ರಕರಣದಲ್ಲಿಯೂ ಬೇರೆ ಬೇರೆ ಗ್ರಂಥಗಳಲ್ಲಿಯೂ ನೋಡಬಹುದು.

## ೪. ಸಂಧ್ಯಾವಂದನೆ

ರಾತ್ರಿಯ ಅಹಸ್ಸಿನ ಸಂಧಿಕಾಲವೇ ಸಂಧ್ಯೆಯು, ಆ ಕಾಲಾಧಿದೇವಿಗೂ ಆಗ ಮಾಡುವ ಕರ್ಮಕ್ಕೂ ಸಹ ಸಂಧ್ಯೆ ಎಂದೇ ಹೆಸರು. ದಿನ ಒಂದಕ್ಕೆ ಅಂಥಾ ಸಂಧಿಗಳೆರಡು—ಉದಯದಲ್ಲೊಂದು, ಅಸ್ತದಲ್ಲೊಂದು. ಆಗ ಸೂರ್ಯನ ಖಂಡ

---

10 ಓಮಿತಿ ಬ್ರಹ್ಮ । ಓಮಿತೀದಗ್ಂ ಸರ್ವಮ್ ॥ತೈ.ಉ.॥ ಓಂಕಾರಃ ಪರಮಾತ್ಮ ನೋ ವಾಚಕಃ । ತಥಾ ಚ ಪತಂಜಲಿಪ್ರೋಕ್ತಂ ಸೂತ್ರಂ "ತಸ್ಯ ವಾಚಕಃ ಪ್ರಣವಇತಿ", ಓಂಕಾರಸ್ಯ ಬ್ರಹ್ಮವಾಚಕಯೋಗ್ಯತಾಂ ದರ್ಶಯತಿ ದ್ವಿತೀಯೇನ । ಓಮಿತ್ಯೇತಸ್ಮಿನ್ನೇವಾ ಕ್ಷರೇ ಶಬ್ದರೂಪಮರ್ಥರೂಪಂ ಚೇದಂ ಸರ್ವಂ ಜಗದಂತರ್ಭೂತಂ ॥ಭಾಷ್ಯ॥

ಮಂಡಲವು ಕಾಣುತ್ತಿರುವುದು.[1] ಈ ಎರಡರ ಜತೆಗೆ ಹಗಲಿನ ಎರಡರ್ಧಗಳೂ ಸಂಧಿಸುವ ಮಧ್ಯಾಹ್ನದಲ್ಲೊಂದು—ಹೀಗೆ ಮೂರು ಸಂಧ್ಯಾವಂದನೆಗಳು—ಮೂರನ್ನೂ ಮಾಡಬೇಕೆಂದು ವಿಧಿಯಿದೆ.[2] ವಿಧಿಯಾದುದರಿಂದ ದ್ವಿಜರೆಲ್ಲರೂ ಮಾಡಲೇಬೇಕು. ಪ್ರಾತಸ್ಸಂಧ್ಯಾವಂದನೆಯನ್ನು ಉದಯಕ್ಕೆ ಪೂರ್ವವೇ ಪ್ರಾರಂಭಿಸಿ ಗಾಯತ್ರೀಜಪವನ್ನು ಮಾಡುತ್ತಾ ಸೂರ್ಯನ ಖಂಡಮಂಡಲವು ಉದಿಸಿದೊಡನೆಯೇ ಉಪಸ್ಥಾನವನ್ನು ಮಾಡಬೇಕು. ಸಾಯಂಸಂಧ್ಯಾವಂದನೆಯನ್ನು ಅಸ್ತಕ್ಕೆ ಮೊದಲೇ ಪ್ರಾರಂಭಿಸಿ ಜಪವನ್ನು ಮಾಡುತ್ತಾ ನಕ್ಷತ್ರದರ್ಶನವಾಗುತ್ತಲೇ ಉಪಸ್ಥಾನವನ್ನು ಮಾಡಬೇಕು. ಮಾಧ್ಯಾಹ್ನಿಕವನ್ನು ಮಧ್ಯಾಹ್ನದಲ್ಲಿ ಮಾಡಬೇಕು.[3] ಇದು ಮುಖ್ಯಕಲ್ಪವು. ಕಾರಣಾಂತರದಿಂದ ಕಾಲಕ್ಕೆ ಸರಿಯಾಗಿ ಮಾಡುವುದಕ್ಕಾಗದಿದ್ದರೆ ಉದಯಾದಿ ಆರು ಗಳಿಗೆಯೊಳಗೆ ಪ್ರಾತಸ್ಸಂಧ್ಯಾವಂದನೆಯನ್ನೂ, ಹಗಲಿನ ನಾಲ್ಕನೆಯ ಜಾವದ ಮೊದಲ ಅರ್ಧದೊಳಗೆ ಮಾಧ್ಯಾಹ್ನಿಕವನ್ನೂ, ಪ್ರದೋಷವು ಕಳೆಯುವುದರೊಳಗಾಗಿ ಸಾಯಂಸಂಧ್ಯಾವಂದನೆಯನ್ನೂ ಮಾಡಬಹುದು, ಇದು ಅನುಕಲ್ಪವು.[4] ಮುಖ್ಯಕಲ್ಪದಂತೆ ಮಾಡುವುದು ಉತ್ತಮ ಪಕ್ಷ—ಅನುಕಲ್ಪದಂತೆ ಮಾಡುವುದು ಮಧ್ಯಮ ಪಕ್ಷ—ವಿಕಲ್ಪವಲ್ಲ. ಸಂಧ್ಯಾವಂದನೆಯಲ್ಲಿ ಪೂರ್ವಾಂಗ ಪ್ರಧಾನಾಂಗ ಉತ್ತರಾಂಗಗಳೆಂದು ಮೂರು ಭಾಗಗಳು. ಪೂರ್ವಾಂಗದಲ್ಲಿ ಮಂತ್ರಸ್ನಾನ ಮಂತ್ರಾಚಮನ ಅಘಮರ್ಷಣಗಳನ್ನು ಶುದ್ಧ್ಯರ್ಥವಾಗಿಯೂ ಪಾಪಕ್ಷಯಾರ್ಥವಾಗಿಯೂ ಮಾಡುವುದು. ಪ್ರಧಾನಾಂಗದಲ್ಲಿ ಅರ್ಘ್ಯಪ್ರದಾನ ಗಾಯತ್ರೀ ಜಪ ಉಪಸ್ಥಾನಗಳು ನಡೆಯುವುವು. ಉತ್ತರಾಂಗದಲ್ಲಿ ಮಾಡಿದ ಕರ್ಮವನ್ನು ಭಗವದರ್ಪಣ ಮಾಡುವುದು. ಅರ್ಘ್ಯವನ್ನು ಕೊಡುವುದು

---

1 ಅಹೋರಾತ್ರಯೋಸ್ಸಂಧೌ ಯಾ ಕ್ರಿಯಾ ವಿಧೀಯತೇ ಸಾ ಸಂಧ್ಯಾ । ತತ್ರಾಹಸ್ಸಂಪೂರ್ಣಾದಿತ್ಯಮಂಡಲದರ್ಶನಯೋಗ್ಯಕಾಲಃ । ತದ್ವಿಪರೀತಾ ರಾತ್ರಿಃ । ಯಸ್ಮಿನ್ ಕಾಲೇ ಖಂಡಮಂಡಲಸ್ಯೋಪಲಬ್ಧಿಸ್ಸ ಸಂಧಿಃ ॥ಮಿತಾ-ಯಾ.i.೨೫॥ ಉಪಾಸ್ತೇ ಸಂಧಿವೇಳಾಯಾಂ ನಿಶಾಯಾ ದಿವಸಸ್ಯ ಚ । ತಾಮೇವ ಸಂಧ್ಯಾಂ ತಸ್ಮಾತ್ತು ಪ್ರವದಂತಿ ಮನೀಷಿಣಃ ॥ವ್ಯಾಸಃ॥

2 ಸಂಧ್ಯಾತ್ರಯಂ ತು ಕರ್ತವ್ಯಂ ದ್ವಿಜೇನಾತ್ಮವಿದಾ ಸದಾ ॥ಅತ್ರಿಃ॥

3 ಪ್ರಾತಸ್ಸಂಧ್ಯಾಂ ಸನಕ್ಷತ್ರಾಂ ಮಧ್ಯಮಾಂ ಸ್ನಾನಕರ್ಮಣಿ । ಸಾದಿತ್ಯಾಂ ಪಶ್ಚಿಮಾಂ ಸಂಧ್ಯಾಮುಪಾಸೀತ ಯಥಾವಿಧಿ ॥ಶಂಖಃ॥ ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಸಾದಿತ್ಯಾಂ ವೈ ಯಥಾವಿಧಿ । ಗಾಯತ್ರೀಮಭ್ಯಸೇತ್ತಾವದ್ಯಾವದೃಕ್ಷಾಣಿ ಪಶ್ಯತಿ ॥ ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮುಪಕ್ರಮ್ಯ ಯಥಾವಿಧಿ । ಗಾಯತ್ರೀಮಭ್ಯಸೇತ್ತಾವದ್ಯಾವದಾದಿತ್ಯದರ್ಶನಂ ॥ ನರಸಿಂಹಪುರಾಣೇ॥

4 ನ ಪ್ರಾತರ್ನ ಪ್ರದೋಷಶ್ಚ ಸಂಧ್ಯಾಕಾಲೋಽತಿವರ್ತತೇ। ಮುಖ್ಯಕಲ್ಪೋಽನುಕಲ್ಪಶ್ಚ ಸರ್ವಸ್ಮಿನ್ ಕರ್ಮಣಿ ಸ್ಮೃತಃ ॥ವೃದ್ಧಮನುಃ॥ ಅಧ್ಯರ್ಧಯಾಮಮಾಸಾಯಂ ಸಂಧ್ಯಾ ಮಾಧ್ಯಾಹ್ನಿಕೀಷ್ಯತೇ ॥ದಕ್ಷಃ॥

ಸೂರ್ಯದೇವನ ಆರಾಧನೆ–ಮಂದೇಹರೆಂಬ ಅಸುರರು ಸೂರ್ಯಮಂಡಲದ ಮೇಲೆ ಆಕ್ರಮಣಮಾಡುತ್ತಾರೆ. ಅದರ ನಿವಾರಣೆಗಾಗಿ ಕೊಡುವುದು ಎಂದು ಐತಿಹ್ಯ. ಗಾಯತ್ರಿಯು ವೇದಮಾತೆಯು—ವೇದಗಳ ತತ್ತ್ವಾರ್ಥವೆಲ್ಲವೂ ಅದರಲ್ಲಿ ಅಡಕವಾಗಿದೆ. ಆ ಮಹಾಮಂತ್ರವನ್ನು ಜಪಮಾಡುತ್ತಾ ಮಾಡುತ್ತಾ ಜ್ಞಾನವು ತಾನಾಗಿ ಪ್ರಾಪ್ತವಾಗುವುದು. ಯಾವ ಸವಿತೃದೇವನು ನಮ್ಮ ಬುದ್ಧಿಯನ್ನು ತತ್ತ್ವಜ್ಞಾನದ ಕಡೆಗೆ ಪ್ರವರ್ತಿಸುವಂತೆ ಪ್ರೇರೇಪಿಸುತ್ತಾನೋ ಆ ದೇವನ ಶ್ರೇಷ್ಠವಾದ ತೇಜಸ್ಸನ್ನು ಧ್ಯಾನಮಾಡುತ್ತೇವೆ ಎಂಬುದು ಗಾಯತ್ರೀ ಮಂತ್ರದ ಸ್ಥೂಲಾರ್ಥವು.[5] ಯಾವ ಸತ್ಯಜ್ಞಾನಾದಿಲಕ್ಷಣಲಕ್ಷಿತನಾದ ಸೂರ್ಯಮಂಡಲದಲ್ಲಿ ಧ್ಯಾನಿಸಲ್ಪಡುವ ಅಚಿನ್ತ್ಯಾಗಮ್ಯನು, ಇದು ಬೇರೆ ಅದು ಬೇರೆ ಎಂದು ಅಭ್ಯಾಸವಾದ ಭೇದಭಾವನೆಗಳಲ್ಲಿ ಮುಳುಗಿ ತೇಲುವ ನಮ್ಮ, ಪ್ರತ್ಯಗಾತ್ಮಬೋಧರೂಪದ ಮಿಥ್ಯಾಜ್ಞಾನದ ಕಡೆಗೇ ಸ್ವಾಭಾವಿಕವಾಗಿ ಪ್ರವರ್ತಿಸುವ ಅಂತಃಕರಣ ಪ್ರವೃತ್ತಿಯನ್ನು, ತತ್ತ್ವಜ್ಞಾನದ ಕಡೆಗೆ ಪ್ರವರ್ತಿಸುವಂತೆ ಪ್ರೇರೇಪಿಸುತ್ತಾನೋ, ಆ ವಿಶ್ವದ ಉತ್ಪತ್ತಿ ಸ್ಥಿತಿ ಸಂಹಾರಗಳಿಗೆ ಕಾರಣನಾದ, ಆ ಜ್ಞಾನಾತ್ಮಕನೂ ಪರಮಾನಂದಸ್ವರೂಪನೂ ಆದ ಪರಂಜ್ಯೋತಿಯು, ವಿಶ್ವಕ್ಕೇ ಆಧಾರಭೂತನಾದ, ವಾಙ್ಮನಸ್ಸುಗಳಿಗೆ ಅಗಮ್ಯನಾದ, ಸೂರ್ಯಮಂಡಲಾಂತರ್ವರ್ತಿಯೂ ಧ್ಯಾನಾರ್ಹನೂ ಆದ, ಆ ಪರಬ್ರಹ್ಮನ ಸಾಕ್ಷಾತ್ಕಾರದಿಂದ ಅವಿದ್ಯಾಶಕ್ತಿವಿನಾಶಕವಾದ ತೇಜಸ್ಸನ್ನು, ಸೋಹಂ ಅಂದರೆ ಅವನೇ ನಾನು ಎಂಬ ಭಾವನೆಯಿಂದ ಅಭೇದಸಾಯುಜ್ಯಸಿದ್ಧಿಗಾಗಿ ಧ್ಯಾನಮಾಡುತ್ತೇವೆ ಎಂಬುದು ತತ್ತ್ವಾರ್ಥವು[6] ಉಪಸ್ಥಾನದಲ್ಲಿ ಸಂಧ್ಯಾದೇವಿಯನ್ನು ಪ್ರಾರ್ಥಿಸಿ ನಮಸ್ಕರಿಸಿ ಬೀಳ್ಕೊಡುವುದು.

ಸಂಧ್ಯಾಕಾಲವು ಪ್ರಶಾಂತವಾದುದು. ಆ ಕಾಲದಲ್ಲಿ ಚರಾಚರಾತ್ಮಕನಾದ ಸಕಲಜೀವರಾಶಿಗಳೂ ತಮ್ಮ ದೈನಂದಿನ ವ್ಯಾಪಾರಗಳಿಂದ ವಿರಮಿಸಿ ಆನಂದಪಡುತ್ತಿರುತ್ತವೆ. ಅಂಥಾ ಪ್ರಶಾಂತ ಸಮಯವು ಉಪಾಸನೆಗೆ ಯೋಗ್ಯವಾದ ಕಾಲವು. ಎಲ್ಲರ ಚಿತ್ತವನ್ನೂ ಏಕಪ್ರಕಾರವಾಗಿ ಆಕರ್ಷಿಸಿ ಜಗತ್ತಿಗೇ ಶಾಂತಿಯನ್ನು ಕೊಡುವ

---

5 ಯೋ ದೇವಸ್ಸವಿತೋಽಸ್ಮಾಕಂ ಧಿಯೋ ಧರ್ಮಾದಿಗೋಚರಾಃ । ಪ್ರೇರಯೇತ್ತಸ್ಯ ಭರ್ಗಸ್ಯ ತದ್ವರೇಣ್ಯಮುಪಾಸ್ಮಹೇ ॥ವ್ಯಾಸಃ॥

6 ತದಿತ್ಯವಾಙ್ಮನೋಗಮ್ಯಂ ಧ್ಯೇಯಂ ಯತ್ಸೂರ್ಯಮಂಡಲೇ । ಸವಿತುಸ್ಸಕಲೋತ್ಪತ್ತಿಸ್ಥಿತಿಸಂಹಾರಕಾರಿಣಃ ॥ ವರೇಣ್ಯಮಾಶ್ರಯಣೀಯಮಾಧಾರಮಿದಂ ಜಗತ್ । ಭರ್ಗಸ್ಸಸಾಕ್ಷಾತ್ಕಾರೇಣ ಹ್ಯವಿದ್ಯಾಶಕ್ತಿದಾಹಕಂ ॥ ದೇವಸ್ಯ ಜ್ಞಾನಸ್ಯ ಸ್ವಾನಂದಂ ಕ್ರೀಡತೋಪಿವಾ । ಧೀಮಹ್ಯಹಂ ಸಏವೇತಿ ತೇನೈವಾಭೇದಸಿದ್ಧಯೇ ॥ ಧಿಯೋಽನ್ತಃಕರಣವೃತ್ತೀಃ ಪ್ರತ್ಯಕ್ಪ್ರವಣಚಾರಿಣೀ । ಯ ಇತ್ಯಲಿಂಗನಿರ್ದೇಶಂ ಸತ್ಯಜ್ಞಾನಾದಿಲಕ್ಷಣಂ । ನೋಽಸ್ಮಾಕಂ ಬಹುಧಾಭ್ಯಸ್ತಭೇದಭಿನ್ನದೃಶಾಮಪಿ । ಪ್ರಚೋದಯಾತ್ಪ್ರೇರಯತು ಪ್ರಾರ್ಥನೈಷಂ ವಿಶಿಷ್ಯತೇ ॥ ವೇದವ್ಯಾಸೇನ ಸಂಪ್ರೋಕ್ತಾ ವ್ಯಾಖ್ಯಾ ಜ್ಞಾನಾನುಸಾರಿಣೀ ॥(ಪ್ರತ್ಯಗಾತ್ಮಾಜೀವಃ)॥ ಅಸಾವಾದಿತ್ಯೋ ಬ್ರಹ್ಮ—ಎಂಬುದರ ಅರ್ಥವೂ ಇದೇ.

ಸಂಧ್ಯಾದೇವಿಯೂ ಉಪಾಸ್ಯಳೇ. ಸಂಧ್ಯೋಪಾಸನೆಯ ಮಾಹಾತ್ಮ್ಯವನ್ನು ಅಷ್ಟಿಷ್ಟೆಂದು ಹೇಳಲೇ ಸಾಧ್ಯವಿಲ್ಲ. ಜಲದಿಂದ ಮಾರ್ಜನೆಮಾಡಿಕೊಳ್ಳುವುದೂ ಮಂತ್ರಗಳನ್ನುಚ್ಚರಿಸುವುದೂ ಮಾತ್ರವೇ ಸಂಧ್ಯಾವಂದನೆಯಲ್ಲ; ಜೀವಾತ್ಮೈಕ್ಯವನ್ನು ಸಾಧಿಸುವ ಕರ್ಮವಾದುದರಿಂದ ಸಂಧ್ಯೆಯು.[7] ಪ್ರತಿ ಸಂಧ್ಯಾವಂದನೆಯಲ್ಲಿಯೂ ಮೂರು ಪ್ರಾಣಾಯಾಮಗಳು ನಡೆಯುವುವು. ತತ್ತ್ವಾರ್ಥವರ್ಣಾತ್ಮಿಕವಾದ ಗಾಯತ್ರಿಯ ಜಪವೂ ನಡೆಯುತ್ತದೆ. ನಿತ್ಯವೂ ಪ್ರಾಣಾಯಾಮದಲ್ಲಿ ಪ್ರಗತಿಯನ್ನು ಹೊಂದಿ ತತ್ತ್ವಾರ್ಥವನ್ನು ಮನನಮಾಡುತ್ತಾ ಪರಬ್ರಹ್ಮವನ್ನು ಉಪಾಸನೆ ಮಾಡುವುದರ ಫಲವು ಸರ್ವೋತ್ತಮವೆಂದು ಹೇಳಬೇಕಾದುದೇ ಇಲ್ಲ. ಈ ನಿಷ್ಕಾಮಕರ್ಮವನ್ನು ಸರ್ವರೂ ತಪ್ಪದೆ ಮಾಡಿ ಶ್ರೇಯಸ್ಸನ್ನು ಸಾಧಿಸಬೇಕು.

## ೫. ಹೋಮ

ಬ್ರಹ್ಮಚಾರಿಗಳೂ ಗೃಹಸ್ಥರೂ ವಾನಪ್ರಸ್ಥರೂ ನಿತ್ಯವೂ ಪ್ರಾತಃಕಾಲದಲ್ಲೊಂದು ಸಾಯಂಕಾಲದಲ್ಲೊಂದು ಎರಡಾವೃತ್ತಿ ಹೋಮವನ್ನು ಸಂಧ್ಯಾವಂದನೆಯ ಅನಂತರ ಮಾಡಬೇಕು.[1] ಬ್ರಹ್ಮಚಾರಿಗಳು ಮಾಡುವ ಹೋಮಕ್ಕೆ ಅಗ್ನಿಕಾರ್ಯವೆಂದೂ ಇತರರದಕ್ಕೆ ಔಪಾಸನವೆಂದೂ ಹೆಸರು.[2] ಅಗ್ನಿಕಾರ್ಯವು ಲೌಕಿಕಾಗ್ನಿಯಲ್ಲಿಯೂ ಔಪಾಸನವು ವಿವಾಹಾಗ್ನಿಯಲ್ಲಿಯೂ ನಡೆಯುವುದು.[3] ಬೆಂಕಿಯನ್ನು ಹೊತ್ತಿಸಿ, ಅಗ್ನಿಯನ್ನದರಲ್ಲಿ ಆವಾಹನೆ ಮಾಡಿ, ಸಮಿತ್ತನ್ನು ಹವನ ಮಾಡುವುದು; ಅಗ್ನಿಯಿಂದ ಮೇಧಾಶಕ್ತಿಯನ್ನೂ ತೇಜಸ್ಸನ್ನೂ ಇಂದ್ರಿಯಪಾಟವವನ್ನೂ ಪ್ರಾರ್ಥಿಸಿ, ಭಸ್ಮವನ್ನು ಲಲಾಟಾದಿ ಸ್ಥಾನಗಳಲ್ಲಿ ಧರಿಸಿ, ಶ್ರದ್ಧೆಯನ್ನೂ ಮೇಧೆಯನ್ನೂ ಯಶಸ್ಸನ್ನೂ ಪ್ರಜ್ಞೆಯನ್ನೂ ವಿದ್ಯವನ್ನೂ ಬುದ್ಧಿಯನ್ನೂ ಸಂಪತ್ತನ್ನೂ ಬಲವನ್ನೂ ಆಯುಸ್ಸನ್ನೂ ತೇಜಸ್ಸನ್ನೂ ಆರೋಗ್ಯವನ್ನೂ ಪ್ರಾರ್ಥಿಸಿ ನಮಸ್ಕರಿಸುವುದು—ಅಗ್ನಿಕಾರ್ಯವು. ಅಗ್ನಿಕಾರ್ಯದಂತೆಯೇ ವಿವಾಹಾಗ್ನಿಯಲ್ಲಿ ಆವಾಹನಾದಿಗಳನ್ನು ಮಾಡಿ ಯವೆ ಗೋಧಿ ಬತ್ತ ಅಥವಾ ಅಕ್ಕಿ ಇವಲ್ಲೊಂದನ್ನು ಬೆಳಗಾಗ ಸೂರ್ಯನಿಗೂ ಪ್ರಜಾಪತಿಗೂ ಸಾಯಂಕಾಲ ಅಗ್ನಿಗೂ ಪ್ರಜಾಪತಿಗೂ ಹೋಮ ಮಾಡಿ ಮೇಧಾದಿಗಳನ್ನು ಪ್ರಾರ್ಥಿಸಿ ದಂಪತಿಗಳಿಬ್ಬರೂ ರಕ್ಷೆಯನ್ನಿಟ್ಟುಕೊಳ್ಳುವುದು ಔಪಾಸನವು.

---

7 ನ ಜಲೇ ಮಾರ್ಜನಂ ಸಂಧ್ಯಾ ನ ಮಂತ್ರೋಚ್ಚಾರಣಾದಿಭಿಃ । ಸಂಧೀಯತೇ ಪರಬ್ರಹ್ಮ ತಸ್ಮಾತ್ಸಂಧ್ಯಾ ಇತಿ ಸ್ಮೃತಾ ॥

1 ಅಗ್ನಿಹೋತ್ರಂ ಚ ಜುಹುಯಾದಾದ್ಯಂತೇ ದ್ಯುನಿಶೋಸ್ಸದಾ ॥ಮ-iv-೨೫॥

2 ಅಗ್ನಿಕಾರ್ಯಂ ತತಃ ಕುರ್ಯಾತ್ಸಂಧ್ಯಯೋರುಭಯೋರಪಿ ॥ ಇತಿ ಬ್ರಹ್ಮಚಾರಿ ಪ್ರಕರಣೇ ॥ಯಾ-i-೨೫॥

3 ಹುತ್ವಾಗ್ನೀನ್ ಸೂರ್ಯದೈವತ್ಯಾನ್ ॥ಇತಿ ಗೃಹಸ್ಥಧರ್ಮಪ್ರಕರಣೇ॥ ಯಾ-i-೯೯॥

## ೬. ಪಂಚಮಹಾಯಜ್ಞಗಳು

ಬ್ರಹ್ಮಯಜ್ಞ ಪಿತೃಯಜ್ಞ ದೈವಯಜ್ಞ ಭೂತಯಜ್ಞ ಮನುಷ್ಯಯಜ್ಞ—ಈ ಐದು ಮಹಾಯಜ್ಞಗಳು.[1] ವೇದಾಧ್ಯಯನವು ಬ್ರಹ್ಮಯಜ್ಞವು. ಪಿತೃತರ್ಪಣವು ಪಿತೃಯಜ್ಞವು. ವೈಶ್ವದೇವವು ದೈವಯಜ್ಞವು. ಬಲಿಹರಣವು ಭೂತಯಜ್ಞವು. ಅತಿಥಿಸತ್ಕಾರವು ಮನುಷ್ಯಯಜ್ಞವು.[2]

ಚುಲ್ಲಿ ಪೇಷಣಿ ಕಂಡನಿ ಉಪಸ್ಕರ ಉದಕುಂಭ ಎಂಬೈದು ಗೃಹೋಪಕರಣಗಳೂ ಹತ್ಯಾಕಾರಕಗಳು. ಚುಲ್ಲಿ ಅಂದರೆ ಒಲೆ—ಉರಿಸುವಾಗ ಸೌದೆಯಲ್ಲಿ ಸೇರಿಕೊಂಡಿರುವ ಸೂಕ್ಷ್ಮಜಂತುಗಳೂ ಅಡಿಗೆ ಮಾಡುವಾಗ ಧಾನ್ಯಾದಿಗಳ ಬೀಜರೂಪದ ಜೀವಿಗಳೂ ನಾಶವಾಗುವುವು ವೇಷಣಿ ಅಂದರೆ ಅರೆಯುವ ಬೀಸುವ ಕಲ್ಲುಗಳು—ಅರೆಯುವುದರಿಂದಲೂ ಬೀಸುವುದರಿಂದಲೂ ಧಾನ್ಯಗಳಲ್ಲಿರುವ ಬೀಜಗಳು ಹತವಾಗುವುವು. ಕಂಡನಿ ಎಂದರೆ ಒರಳು ಒನಿಕೆ—ಕುಟ್ಟುವುದರಿಂದಲೂ ಧಾನ್ಯದ ಬೀಜಗಳು ನಾಯುವುವು. ಉಪಸ್ಕರವೆಂದರೆ ಪರಿಕೆ—ಗುಡಿಸುವುದರಿಂದ ನೆಲಗೋಡೆಗಳ ಮೇಲೆ ಸೇರಿಕೊಂಡಿರುವ ನಣ್ಣಪುಟ್ಟ ಜೀವಜಂತುಗಳು ಮಡಿಯುವುವು. ಉದಕುಂಭ ನೀರು ತುಂಬುವ ಪಾತ್ರೆ—ವಾಪೀಕೂಪತಟಾಕಾದಿಗಳ ಜಲಸ್ರೋತಿಮದಿಂದ ಜಲವನ್ನು ತಂದು ತುಂಬುವುದರಿಂದ ಅದರಲ್ಲಿರುವ ನಣ್ಣ ಸಣ್ಣ ಜಲಜಂತುಗಳು ವಿನಾಶವಾಗುವುವು. ಹೀಗೆ ಅನಿವಾರ್ಯವಾಗಿ ಕಂಡ ಹಾಗೂ ಕಾಣದ ಹಾಗೂ ಗೃಹಸ್ವಾಮಿಗೆ ಐದು ವಿಧದ ಹತ್ಯವು ನಿತ್ಯವೂ ಕಟ್ಟಿಟ್ಟಲೇ ಇರುವುದು. ಅದರ ಶಮನಾರ್ಥವಾಗಿ ಪಂಚಮಹಾಯಜ್ಞಗಳು ಕ್ಲಪ್ತವಾಗಿವೆ.[3]

---

1 ಪಂಚ ವಾ ಏತೇ ಮಹಾಯಜ್ಞಾಃ ಸತತಿ ಪ್ರತಾಯನ್ತೇ ಸತತಿ ಸಂತಿಷ್ಠನ್ತೇ ದೈವಯಜ್ಞಃ ಪಿತೃಯಜ್ಞೋ ಭೂತಯಜ್ಞೋ ಮನುಷ್ಯಯಜ್ಞೋ ಬ್ರಹ್ಮಯಜ್ಞ ಇತಿ ॥ತೈ. ಆ-ಪ್ರ. ೨-ಅ. ೧೦॥

2 ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಂ । ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋಽತಿಥಿಪೂಜನಂ ॥ಮ-iii-೭೦॥ ಅತ್ರ ಅಧ್ಯಾಪನಶಬ್ದೇನ ಅಧ್ಯಯನಮಪಿ ಗೃಹ್ಯತೇ ॥ಮೇಧಾತಿಥಿಃ॥ ಅಧ್ಯಾಪನ ಮಾಡಿಸುವಾಗ ತಾನು ಹೇಳಿ ಹೇಳಿಸಬೇಕಾಗುವುದರಿಂದ ಅಧ್ಯಯನವೂ ಆಗುತ್ತದೆಂದಭಿಪ್ರಾಯ.

3 ಪಂಚ ಸೂನಾ ಗೃಹಸ್ಥಸ್ಯ ಚುಲ್ಲೀ ಪೇಷಣ್ಯುಪಸ್ಕರಃ । ಕಂಡನೀ ಚೋದಕುಂಭಶ್ಚ ಬಧ್ಯತೇ ಯಾಸ್ತು ವಾಹಯನ್ ॥೬೮॥ ತಾಸಾಂ ಕ್ರಮೇಣ ಸರ್ವಾಸಾಂ ನಿಷ್ಕೃತ್ಯರ್ಥಂ ಮಹರ್ಷಿಭಿಃ । ಪಂಚ ಕ್ಲಪ್ತಾ ಮಹಾಯಜ್ಞಾಃ ಪ್ರತ್ಯಹಂ ಗೃಹಮೇಧಿನಾಂ ॥೬೯॥ ಮ-iii ॥ ಚುಲ್ಲೀ ಪಾಕೇನ ಮಾಷಾದಿಬೀಜಾನಾಂ ಪ್ರರೋಹಶಕ್ತಿಪ್ರತಿಬದ್ಧಜೀವನತ್ಯಾಗಹೇತುತ್ವಾತ್। ಏವಂ ಪೇಷಣೀ ಪೇಷಣಶಿಲಾ ಪೇಷಣೇನ । ಉಪಕಿರತ್ಯಶುದ್ಧಾದೀನೀತ್ಯುಪಸ್ಕರಹೇತುಃ ಸಂಮಾರ್ಜನೀ ಭೂಮಿಷ್ಠಪಿಪೀಲಿಕಾದಿಹಿಂಸಾಹೇತುಃ । ಕಣ್ಡನ್ಯುಲೂಖಲಂ ವಿತುಷೀಕರಣಾತ್ । ಉದಕುಂಭೋ ಜಲಾಶಯಸ್ಥ ಜಂತೂನಾಮುದ್ಧರಣೇನ ಘಾತನಾತ್ ॥ ಸರ್ವಜ್ಞನಾರಾಯಣಃ, ಮ-iii-೬೮॥

**ಬ್ರಹ್ಮಯಜ್ಞ**ವೆಂದರೆ ವೇದಾಧ್ಯಯನವು ನಾಲ್ಕು ವೇದಗಳನ್ನೂ ಆರು ವೇದಾಂಗಗಳನ್ನೂ ಸ್ವಲ್ಪಹೊತ್ತಿನಲ್ಲಿ ಅಧ್ಯಯನ ಮಾಡುವುದು ಅಸಾಧ್ಯ. ಆದ ರಿಂದ ಸ್ವಶಾಖೆಯ ಒಂದು ಸೂಕ್ತವನ್ನೋ ವರ್ಗವನ್ನೋ ಋಕ್ಕನ್ನೋ ಅನುವಾಕ ವನ್ನೋ ವಾಕ್ಯವನ್ನೋ ಮಾತ್ರ ಹೇಳಿ, ವೇದವೇದಾಂಗಗಳ ಮೊದಲಣ ವಾಕ್ಯಾದಿ ಗಳನ್ನು ಮಾತ್ರ ಹೇಳಿದರೆ ಸಾಕೆಂದು ಸರಾಗಮಾಡಿಟ್ಟಿದ್ದಾರೆ.[4] ಕರ್ಮಾಂಗ ವಾಗಿ ಅಷ್ಟನ್ನು ಹೇಳಿ ಬೇರೆ ಕಾಲದಲ್ಲಿ ಅವಕಾಶವಾದಾಗಲೆಲ್ಲ ಹಗಲು ರಾತ್ರಿ ಯೆನ್ನದೆ ನಿಂತಾಗ ಕೂತಾಗ ದಾರಿ ನಡೆಯುವಾಗ ಮಲಗಿರುವಾಗ ಅಧ್ಯಯನ ವನ್ನು ಮಾಡುತ್ತಿರಬೇಕು.[5] ಬ್ರಹ್ಮಯಜ್ಞಾಂಗವಾಗಿ ದೇವಋಷ್ಯಾಚಾರ್ಯರಿಗೆ ತರ್ಪಣವನ್ನು ಮಾಡಬೇಕು. ದೇವತರ್ಪಣವು ಅಗ್ನಿದೇವನಿಂದ ಹಿಡಿದು ಮಹಾ ವಿಷ್ಣುಪರ್ಯಂತವಾದ ಎಲ್ಲಾ ದೇವತೆಗಳನ್ನೂ ದೇವಗಣಗಳನ್ನೂ ಪ್ರಣವವ್ಯಾಹೃತಿ ಸಾವಿತ್ರಿಗಳನ್ನೂ ವೇದಗಳನ್ನೂ ಯಜ್ಞಾದಿ ಕರ್ಮಗಳನ್ನೂ ಪೃಥಿವ್ಯಾಕಾಶಾಂತರಿಕ್ಷ ಗಳನ್ನೂ ಅಹೋರಾತ್ರಾದಿಗಳನ್ನೂ ನದೀಸಮುದ್ರಾದಿಗಳನ್ನೂ ಗಿರಿಪರ್ವತಗಳನ್ನೂ ಕ್ಷೇತ್ರೌಷಧಿವನಸ್ಪತಿಗಳನ್ನೂ ಗಂಧರ್ವಾಪ್ಸರೆಯರನ್ನೂ ಎಲ್ಲಾ ವಿಧದ ಪ್ರಾಣಿ ಗಳನ್ನೂ ಯಕ್ಷರಾಕ್ಷಸಪಿಶಾಚಭೂತಾದಿಗಳನ್ನೂ ಒಟ್ಟಿನಲ್ಲಿ ಬ್ರಹ್ಮಾದಿಸ್ತಂಬ ಪರ್ಯಂತವಾದ ಸಮಸ್ತ ಚೇತನಾಚೇತನಭೂತಗ್ರಾಮವನ್ನು ಉದ್ದೇಶಿಸಿ ಜಲ ತರ್ಪಣವನ್ನು ಮಾಡುವುದು. ಋಷಿತರ್ಪಣವು ಶತರ್ಚನಾದಿ ಋಙ್ಮಂಡಲ ಋಷಿ ಗಳನ್ನೂ ಸನಕಾದಿ ಬ್ರಹ್ಮಪುತ್ರರನ್ನೂ ಕುರಿತು ಕೊಡುವ ಜಲಾಂಜಲಿಯು. ಆಚಾರ್ಯತರ್ಪಣವು ಧರ್ಮಾಚಾರ್ಯರನ್ನೂ ಆಚಾರ್ಯೆಯರನ್ನೂ ಕಹೋಳಾದಿ ಅಶ್ವಲಾಯನಪರ್ಯಂತರಾದ ಶಾಖಾಚಾರ್ಯರನ್ನು ಉದ್ದೇಶಿಸಿ ಮಾಡುವುದು.

**ಪಿತೃಯಜ್ಞ**ವು ಆತ್ಮ ಪಿತೃಗಳನ್ನುದ್ದೇಶಿಸಿ ಮಾಡುವ ಕಾರ್ಯವು. ಪಿತ್ರರ್ಥ ವಾಗಿ ನಿತ್ಯವೂ ಅನ್ನದಾನವನ್ನೂ ತರ್ಪಣವನ್ನೂ ಮಾಡಬೇಕೆಂದು ವಚನವಿದ್ದರೂ[6] ನಿತ್ಯವೂ ಈ ಕಲಾಪಗಳನ್ನು ಹಚ್ಚಿಕೊಂಡರೆ ಶುಭಕಾರ್ಯಗಳಿಗೆ ಅವಕಾಶವೇ ಇರು ವುದಿಲ್ಲವಾಗಿ ಆಚರಣೆಯಲ್ಲಿಲ್ಲ. ಅದನ್ನು ಮೃತಾಹಗಳಲ್ಲಿಯೂ ಶುಭಕಾರ್ಯಕ್ಕೆ ಅಪ್ರಶಸ್ತವಾದ ಪರ್ವಕಾಲಗಳಲ್ಲಿಯೂ ಮಾತ್ರ ಮಾಡುವುದು ಸಂಪ್ರದಾಯವು. ಆದರೂ ಪಿತೃಗಳ ನಿತ್ಯಸೇವೆಯು ತಪ್ಪಬಾರದೆಂದು ಬ್ರಹ್ಮಯಜ್ಞಾಂಗತರ್ಪಣದ ಕೊನೆಯಲ್ಲಿ ಆತ್ಮ ಪಿತೃಗಳಿಗೂ ಜಲತರ್ಪಣವನ್ನು ಮಾಡುವ ರೂಢಿಯಿದೆ. ಪಿತೃ ಕಾರ್ಯಕ್ಕೆ ಅಧಿಕಾರಿಗಳಾದವರು ಮಾತ್ರ ಇದನ್ನು ಮಾಡುವುದು.

---

4 ಯತ್ಸ್ವಾಧ್ಯಾಯಮಧೀಯೀತೈಕಾಮಪ್ಯೃಚಂ ಯಜುಸ್ಸಾಮವಾ ತದ್ಬ್ರಹ್ಮ ಯಜ್ಞಸ್ಸಂತಿಷ್ಠತೇ ‖ತೈ. ಆ-ಪ್ರ.೨-ಅ.೧೦‖ ಸ್ವಶಾಖಾಧ್ಯಯನಂ ವಿಪ್ರಬ್ರಹ್ಮಯಜ್ಞವಿಧಿ ಸ್ಸ್ಮೃತಃ ‖ಲಿಂಗಪುರಾಣ‖

5 ಉತ ವಾ ದಿವಾ ನಕ್ತಂ ವಾ ತಿಷ್ಠನ್ವ್ರಜನ್ನಾಸೀನಶ್ಶಯಾನೋ ವಾ ಸರ್ವಥಾ ಸ್ವಾಧ್ಯಾಯಮಧೀಯೀತೈವ ‖ಶೌನಕಃ‖

6 ಅನ್ನಂ ಪಿತೃಮನುಷ್ಯೇಭ್ಯೋ ದೇಯಮಪ್ಯನ್ವಹಂ ಜಲಂ ‖ಯಾ.೧-೧೦೪‖

**ದೈವಯಜ್ಞ**ವು ಎಲ್ಲಾ ದೇವತೆಗಳನ್ನೂ ಉದ್ದೇಶಿಸಿ ಮಾಡುವುದು, ಅದರಿಂದ ಇದನ್ನು ವೈಶ್ವದೇವವೆನ್ನುತ್ತಾರೆ.[7] ಇದೂ ಮುಂದೆ ಹೇಳುವ ಭೂತಮನುಷ್ಯಯಜ್ಞಗಳೂ ಮೂರೂ ಪಾಕಯಜ್ಞಗಳು.[8] ಅಟ್ಟ ಅನ್ನದಲ್ಲಿ ಸ್ವಲ್ಪವನ್ನು ತೆಗೆದುಕೊಂಡು ಗೃಹ್ಯಾಗ್ನಿಯಲ್ಲಾಗಲೀ ಒಲೆಯ ಬೆಂಕಿಯಲ್ಲಾಗಲೀ ದೇವತೆಗಳನ್ನುದ್ದೇಶಿಸಿ ಹವನ ಮಾಡುವುದು. ಇದು ಎರಡು ಹೊತ್ತೂ ನಡೆಯಬೇಕು.[9]

**ಭೂತಯಜ್ಞ**ಕ್ಕೆ ಬಲಿಹರಣವೆಂದು ಹೆಸರು. ಸಮಸ್ತ ಭೂತಗಳ ತೃಪ್ತ್ಯರ್ಥವಾಗಿ ಮಾಡುವುದು—ವೈಶ್ವದೇವವನ್ನು ಮಾಡಿ ಮಿಕ್ಕ ಅನ್ನದ ಅಂಶದಿಂದ ಬಲಿಯನ್ನಿಡುವುದು.[10] ಕೆಲವು ದೇವತೆಗಳಿಗೂ ಭೂತಗಳಿಗೂ ಒಂದೊಂದು ಯಲಚಿಯ ಹಣ್ಣಿನ ಗಾತ್ರದ ಅನ್ನವನ್ನಿಟ್ಟು ಆಮೇಲೆ ಚೂಲಾದಿ ಪಂಚಸೂನಸ್ಥಾನಗಳಲ್ಲಿಯೂ ಮನೆಯ ಒಳಗೂ ಹೊರಗೂ ಸಹ ಎಲ್ಲಾ ಭೂತಗಳ ಹಸಿವು ಶಮನವಾಗಲೆಂದನ್ನವನ್ನು ಇಡುವುದು. ನಾವಿಡುವ ಅಲ್ಪಾನ್ನದಿಂದ ಸಮಸ್ತ ಭೂತಗಳಿಗೂ ತೃಪ್ತಿಯಾಗುತ್ತೆಂದಲ್ಲ. ನಾವು ತಿನ್ನುವ ಅನ್ನವನ್ನೇ ಎಲ್ಲಾ ಭೂತಗಳೂ ತಿನ್ನುವುದೂ ಇಲ್ಲ. ಅದರದರ ಆಹಾರವನ್ನದು ಹುಡುಕಿ ತಿನ್ನುತ್ತದೆ. ಆದ್ಯಂತ ಸೃಷ್ಟಿಯ ಸಮಷ್ಟಿಭಾವನೆಯಿಂದ ಯಥಾಶಕ್ತಿಯಾಗಿ ಭೂತಸೇವೆಯನ್ನು ಮಾಡುವುದೇ ಇದರ ತತ್ತ್ವವು

**ಮನುಷ್ಯಯಜ್ಞ**ವೆಂದರೆ ಅತಿಥಿಸತ್ಕಾರವು.[11] ಮನೆಗೆ ಬಂದವರೆಲ್ಲರಿಗೂ ಯಥಾರ್ಹವಾಗಿಯೂ ಯಥಾಶಕ್ತಿಯಾಗಿಯೂ ಸತ್ಕಾರವನ್ನು ಮಾಡಿಯೇ ಮಾಡುತ್ತಾರೆ. ಅದು ಯಜ್ಞವಲ್ಲ. ಯಜ್ಞವನ್ನು ವಿಧಿನಿಯಮದಿಂದಾಚರಿಸಬೇಕು. ಯಾರನ್ನುದ್ದೇಶಿಸಿ ಮಾಡುತ್ತೇವೋ ಅವರಲ್ಲಿ ದೇವಭಾವನೆಯಿರಬೇಕು. ಅತಿಥಿಯೆಂದರೆ ವೈಶ್ವದೇವ ಮಾಡುವ ಕಾಲಕ್ಕೆ ಅಥವಾ ಅದಾದ ಕಾಲುಗಳಿಗೆಯೊಳಗೆ ಬಂದವನು. ಒಂದು ತಿಥಿಯಲ್ಲಿ ಬಂದವನು ಮುಂದಣ ತಿಥಿಯಲ್ಲಿ ಉಳಿಯದೆ ನಡೆದುಬಿಡುವವನೂ, ಅಥವಾ ಈ ದಿವಸ ಇಂಥಾ ಹಬ್ಬಹರಿದಿವಸದತಿಥಿ ಈ ದಿವಸ ರಸಕವಳವೂ ದಕ್ಷಿಣೆಯೂ ದೊರೆಯಬಹುದು ಎಂದು ಬರದೆ ಕೇವಲ ಅನ್ನಾರ್ಥಿಯಾಗಿ ಬರುವವನೂ, ಅತಿಥಿಯು.[12] ಕಾಲಾಂತರದಲ್ಲಿಯೂ ಕಾರಣಾಂತರದಿಂದಲೂ

---

7 ವಿಶ್ವೇಭ್ಯೋ ದೇವೇಭ್ಯ ಇತಿ ವೈಶ್ವದೇವಃ ॥

8 ತ್ರಯಃ ಪಾಕಯಜ್ಞಾಃ ॥ಆಶ್ವ-ಗೃಹ್ಯ॥

9 ಔಪಾಸನೇ ಪಚನೇ ವಾ (ಅಗ್ನೌ)॥ಆಪ-ಧರ್ಮ॥

10 ದೈವೇಭ್ಯಶ್ಚ ಹುತಾದನ್ನಾಚ್ಛೇಷಾದ್ಭೂತಬಲಿಂ ಹರೇತ್ ॥ಯಾ-i-೧೦೩॥

11 ಯದ್ಬ್ರಾಹ್ಮಣೇಭ್ಯೋಽನ್ನಂ ದದಾತಿ ತನ್ಮನುಷ್ಯಯಜ್ಞಸ್ಸಂತಿಷ್ಠತೇ ॥ತೈ. ಆ-ಪ್ರ.೨-ಅ. ೧೦॥

12 ಏಕರಾತ್ರಂ ತು ನಿವಸನ್ನತಿಥಿರ್ಬ್ರಾಹ್ಮಣಸ್ಸ್ಮೃತಃ । ಅನಿತ್ಯಂ ಹಿ ಸ್ಥಿತೋ ಯಸ್ಮಾತ್ತಸ್ಮಾದತಿಥಿರುಚ್ಯತೇ ॥ಮ-iii-೧೦೨॥ ಅನಿತ್ಯಾವಸ್ಥಾನಾನ್ನವಿದ್ಯತೇ ದ್ವಿತೀಯಾ ತಿಥಿರಸ್ಯೇತ್ಯತಿಥಿಃ ॥ಕುಲ್ಲೂಕಃ॥ ತಿಥಿಪರ್ವೋತ್ಸವಾಸ್ಸರ್ವೇ ತ್ಯಕ್ತಾ ಯೇನ ಮಹಾತ್ಮನಾ ।

ಬರುವವರು ಅಭ್ಯಾಗತರು. ಅತಿಥಿಯ ಕುಲಗೋತ್ರನಾಮಧೇಯಗಳು ಯಾವುದೂ ಗೊತ್ತಿರಬಾರದು, ಬೇರೆ ದೇಶದಿಂದಾಗಲೀ ಗ್ರಾಮದಿಂದಾಗಲೀ ಬಂದವನಾಗಿರಬೇಕು, ತನ್ನ ಗ್ರಾಮದವನಾಗಲೀ ಸಂಬಂಧಿಯಾಗಲೀ ಮಿತ್ರೇಷ್ಟನಾಗಲೀ ಆಗಿರಬಾರದು, ಹಸಿದವನಾಗಿ ಊಟವನ್ನೇ ಬಯಸಿ ಬಂದವನಾಗಿರಬೇಕು. ಅಂಥಾವನೇ ಯಜ್ಞಾಂಗವಾಗಿ ಸತ್ಕಾರಾರ್ಹನು.[13] ಅಂದರೆ ಆಮೇಲೆ ಬಂದವರನ್ನು ಸತ್ಕರಿಸಬಾರದೆಂದರ್ಥವಲ್ಲ. ಬಂದ ಅನ್ನಾರ್ಥಿಗಳನ್ನು ಅನ್ನವನ್ನಿಟ್ಟು ಸತ್ಕರಿಸಲೇಬೇಕು.[14] ವ್ಯತ್ಯಾಸವಿಷ್ಟೇ—ಸಕಾಲದಲ್ಲಿ ಬಂದವರು ಅತಿಥಿಗಳು, ಅವರನ್ನು ಸತ್ಕರಿಸುವುದು ಯಜ್ಞವು. ಅಕಾಲದಲ್ಲಿ ಬಂದವರನ್ನು ಸತ್ಕರಿಸುವುದು ಯಜ್ಞವಲ್ಲ, ಗೃಹಸ್ಥನಿಗೆ ಉಚಿತವಾದ ಸತ್ಕಾರ್ಯ. ಅತಿಥಿಯನ್ನು ಸತ್ಕರಿಸುವುದೆಂದರೆ ಭೋಜನವನ್ನಿಡುವುದು ಮಾತ್ರವಲ್ಲ—ದಯಮಾಡಿ ಎಂದು ಮರ್ಯಾದೆಯಾಗಿ ಸ್ವಾಗತಿಸಿ ಆತನ ಕುಲಗೋತ್ರಾದಿಗಳನ್ನೂ ದೇಶಗ್ರಾಮನಾಮಧೇಯವನ್ನೂ ಅವನು ಬಂದ ಪ್ರಮೇಯವನ್ನೂ ಯಾವುದನ್ನೂ ಕೇಳದೆ ಅರ್ಘ್ಯಪಾದ್ಯಗಳನ್ನಿತ್ತು ಊಟಮಾಡುವಾಗ ಸಂಕೋಚಪಡದಂತೆ ಮಾತನಾಡುತ್ತಿದ್ದು ಹೋಗುವಾಗ ಸ್ವಲ್ಪದೂರ ಹೋಗಿ ಸಾಗಕಳುಹಿಸುವುದು.[15]

ಯಜ್ಞಾಂಗವಾಗಿ ಮಾಡುವ ಅನ್ನದಾನವಲ್ಲದೆ ಬಂದ ಯತಿಗಳಿಗೂ ಭಿಕ್ಷುಕರಿಗೂ ಬ್ರಹ್ಮಚಾರಿಗಳಿಗೂ ಸತ್ಕಾರಪೂರ್ವಕವಾಗಿ ಭಿಕ್ಷವನ್ನು ನೀಡಬೇಕು.[16] ಗುರುಮಿತ್ರಜ್ಞಾತಿಗಳೂ ವರ್ಣಾಂತರದವರೂ ಅತಿಥಿಧರ್ಮದಿಂದ ಬಂದರೆ ಯಥೋಚಿತ

---

ಸೋಽತಿಥಿಸ್ಸರ್ವಭೂತಾನಾಂ ಶೇಷಾನಭ್ಯಾಗತಾನ್ವಿದುಃ ॥ಯಮಃ॥ ಮನ್ವಾದಿಯುಗಾದಿಪ್ರಭೃತಿಷು ತಿಥಿವಿಶೇಷೇಷು ದ್ರವ್ಯಲಾಭಮುದ್ದಿಶ್ಯ ಯೇ ಅಭ್ಯಾಗಚ್ಛಂತಿ ತೇಽಭ್ಯಾಗತಾಃ । ತಾದೃಶೀಂ ತಿಥಿಮನಪೇಕ್ಷ್ಯ ಯದಾಕದಾಚಿತ್ ಕ್ಷುತ್ಪಿಪಾಸಾದಿಪರಿಪೀಡನಯೋಪಗತೋ ಅತಿಥಿಃ ॥ಮಾಧವೀಯೇ॥

13 ಅಮಿತ್ರಮತಿಥಿಂ ಕುರ್ಯಾನ್ನೈಕಗ್ರಾಮನಿವಾಸಿನಂ । ಅಜ್ಞಾತಕುಲನಾಮಾನಂ ತತ್ಕಾಲೇ ಸಮುಪಸ್ಥಿತಂ ॥ ಬುಭುಕ್ಷುಮಾಗತಂ ಶ್ರಾಂತಂ ಯಾಚಮಾನಮಕಿಂಚನಂ । ಬ್ರಾಹ್ಮಣಂ ಪ್ರಾಹುರತಿಥಿಂ ಸಂಪೂಜ್ಯಶ್ಶಕ್ತಿತೋ ದ್ವಿಜೈಃ ॥ಮಾರ್ಕಂಡೇಯಃ॥

14 ನ ಕಂಚನ ವಸತೌ ಪ್ರತ್ಯಾಚಕ್ಷೀತ ॥ತದ್ವ್ರತಂ॥ ತೈ. ಉ.॥ ಕಾಲೇ ಪ್ರಾಪ್ತಸ್ತ್ವಕಾಲೇ ವಾ ನಾಸ್ಯಾನಶ್ನನ್ಗೃಹೇ ವಸೇತ್ ॥ಮ-iii-೧೦೫॥

15 ಅತಿಥಿಂ ತತ್ರ ಸಂಪ್ರಾಪ್ತಂ ಪೂಜಯೇತ್ಸ್ವಾಗತಾದಿನಾ। ಅರ್ಘ್ಯಾಸನಪ್ರದಾನೇನ ಪಾದಪ್ರಕ್ಷಾಳನೇನ ಚ ॥ ಶ್ರದ್ಧಯಾ ಚಾನ್ನದಾನೇನ ಪ್ರಿಯಪ್ರಶ್ನೋತ್ತರೇಣ ಚ । ಗಚ್ಛಂತಂ ಚಾನುಯಾನೇನ ಪ್ರೀತಿಮುತ್ಪಾದಯೇದ್ಗೃಹೀ ॥ಪರಾ-i-೪೩-೪೪॥ ನ ಪೃಚ್ಛೇದ್ಗೋತ್ರಚರಣೇ ನ ಸ್ವಾಧ್ಯಾಯಂ ಶ್ರುತಂ ತಥಾ । ಹೃದಯೇ ಕಲ್ಪಯೇದ್ದೇವಂ ಸರ್ವದೇವಮಯೋ ಹಿ ಸಃ ॥ಪರಾ-i-೪೮॥ ನ ಪೃಚ್ಛೇದ್ಗೋತ್ರಚರಣೇ ದೇಶಂ ನಾಮ ಕುಲಂ ಶ್ರುತಂ॥ ಯಮಃ॥

16 ಸತ್ಕೃತ್ಯ ಭಿಕ್ಷವೇ ಭಿಕ್ಷಾ ದಾತವ್ಯಾ ಸುವ್ರತಾಯ ಚ ॥ಯಾ-i-೧೦೮॥ ಯತಿಶ್ಚ ಬ್ರಹ್ಮಚಾರೀ ಚ ವಿದ್ಯಾರ್ಥೀ ಗುರುಪೋಷಕಃ । ಅಧ್ವಗಃ ಕ್ಷೀಣವೃತ್ತಿಶ್ಚ ಷಡೇತೇ ಭಿಕ್ಷುಕಾಸ್ಸ್ಮೃತಾಃ ॥ವ್ಯಾಸಃ॥

ವಾಗಿಯೂ ಯಥಾಶಕ್ತಿಯಾಗಿಯೂ ವಿಶ್ವಾಸಪೂರ್ವಕವಾಗಿಯೂ ತಾವು ಊಟ ಮಾಡುವುದಕ್ಕೆ ಮೊದಲು ಭೋಜನವನ್ನು ಮಾಡಿಸಿ ಸತ್ಕರಿಸಬೇಕು.[17] ಈ ಕಾಲ ದಲ್ಲಿ ಬ್ರಹ್ಮಯಜ್ಞವನ್ನು ಮಾಡುವವರು ಅಪರೂಪ. ಪಿತೃಯಜ್ಞವೆಂದರೆ ವರ್ಷ ಕ್ಕೊಂದಾವೃತ್ತಿ ಶ್ರಾದ್ಧ ಮಾಡುವುದು. ವೈಶ್ವದೇವ ಬಲಿಹರಣಗಳ ಹೆಸರೇ ಎಷ್ಟೋ ಜನರಿಗೆ ಗೊತ್ತಿಲ್ಲ. ಅತಿಥಿಯಜ್ಞವಂತೂ ನಡೆಯುವುದೇ ಕಾಣುವುದಿಲ್ಲ. ಆದರೂ ಮನೆಗೆ ಬಂದ ಅತಿಥಿ ಅಭ್ಯಾಗತರ, ನಂಟರಿಷ್ಟರ, ಸತ್ಕಾರಗಳೇನೋ ಶ್ರದ್ಧೆಯಿಂದಲೇ ನಡೆಯುತ್ತಿದೆ. ಬಂದ ಭಿಕ್ಷುಕರಿಗೆ ಭಿಕ್ಷವಿಲ್ಲ ಎನ್ನುವುದಿಲ್ಲ. ಬಂದವರನ್ನು ಸತ್ಕರಿ ಸುವ ವಿಷಯದಲ್ಲಿ ನಮ್ಮ ಸೀಮೆಯೇ ಹೆಸರುವಾಸಿಯಾಗಿದೆ. "ಅನ್ನಂ ಬಹು ಕುರ್ವೀತ" ತನ್ನ ಕುಟುಂಬದ ಅವಶ್ಯಕತೆಗಿಂತಲೂ ಹೆಚ್ಚಾಗಿ ಅನ್ನವನ್ನು ಮಾಡ ಬೇಕು, "ನ ಕಂಚನ ವಸತೌ ಪ್ರತ್ಯಾಚಕ್ಷೀತ" ಮನೆಗೆ ಬಂದ ಹಸಿದವನಿಗೆ ಅನ್ನವಿಲ್ಲ ಎನ್ನಬಾರದು, ಎನ್ನುವ ಕಾಲವೂ ಇತ್ತು, ಈಗಲೂ ಹೋಗಿಲ್ಲ. ನಿಜವಾಗಿ ಹಸಿದು ಬಂದವರಿಗಿಲ್ಲ ಅನ್ನುವುದಿಲ್ಲ. ಕಳ್ಳರೂ ಮೋಸಗಾರರೂ ಹೆಚ್ಚಿಕೊಂಡು ಭಿಕ್ಷಾ ವ್ಯಾಜದಲ್ಲಿ ಬರುವುದರಿಂದ[18] ಔದಾರ್ಯವು ವ್ಯರ್ಥವೂ ಅನರ್ಥಪ್ರದವೂ ಆಗು ವುದರಿಂದ ಉದಾರಿಗಳೂ ಹಿಂತೆಗೆಯಬೇಕಾಗಿದೆ. ಸತ್ಕಾರದ ವಿಷಯದಲ್ಲಿ ನಮ್ಮ ಪೂರ್ವಿಕರು ತೋರಿಸುತ್ತಿದ್ದ ಶ್ರದ್ಧಾಭಕ್ತಿಯೂ, ಶಾಂತಿಸಮಾಧಾನವೂ, ಸೌಜನ್ಯ ಸೌಶೀಲ್ಯವೂ, ಉಚ್ಚನೀಚ ಮಿತ್ರದ್ವೇಷಿ ಇತ್ಯಾದಿ ಭೇದಭಾವರಾಹಿತ್ಯವೂ ಈಗಲೂ ನಮ್ಮೆಲ್ಲರಿಗೂ ಆದರ್ಶವಾಗಿ ಅಂಥಾ ಗುಣವು ನಮ್ಮ ಅಸ್ಥಿಗತವಾಗಿದೆ. ಭಿಕ್ಷವನ್ನು ಯಥೇಚ್ಛವಾಗಿ ಕೊಡುವ ಕಾಲಕ್ಕೆ ಸುಭಿಕ್ಷವೆಂತಲೂ ಭಿಕ್ಷಕ್ಕೆ ಅಭಾವವಾಗುವ ಕಾಲಕ್ಕೆ ದುರ್ಭಿಕ್ಷವೆಂತಲೂ ಹೆಸರೇ ಆಗಿದೆ. ನೂರಾರು ಖಂಡಗ ದವಸವನ್ನು ಬೆಳೆದು ಒಂದು ಕಾಳನ್ನೂ ಮಾರದೆ, ಎಲ್ಲವನ್ನೂ ಬಂದವರಿಗೆ ಹಗಲೆನ್ನದೆ ರಾತ್ರಿ ಯೆನ್ನದೆ ನಡುಹೊತ್ತೆನ್ನದೆ ಊಟಮಾಡಿಸುವ, ಅಡಿಗೆಯವರಿಂದ ವಿತರಣೆಯಾಗುವು ದಿಲ್ಲವೆಂದು ಇಬ್ಬರು ಮೂವರು ಹೆಂಡತಿಯರನ್ನು ಮದುವೆ ಮಾಡಿಕೊಂಡು ಅವ ರೆಲ್ಲರೂ ಸತ್ಕಾರದಲ್ಲಿ ನಿರತರಾಗಿರುವ, ಪುಣ್ಯಾತ್ಮರೂ ಈಗಲೂ ಗ್ರಾಮಾಂತರಗಳಲ್ಲಿ ದ್ದಾರೆ ಎಂದಮೇಲೆ ನಮಗೆ ಅನೂಚಾನವಾಗಿ ನಡೆದುಬಂದಿರುವ ಅತಿಥ್ಯಧರ್ಮ ವನ್ನು ಹೇಳಬೇಕಾದುದೇ ಇಲ್ಲ.

---

17 ಯದಿತ್ವತಿಥಿಧರ್ಮೇಣ ಕ್ಷತ್ರಿಯೋ ಗೃಹಮಾವ್ರಜೇತ್ । ಭುಕ್ತವತ್ಸು ಚ ವಿಪ್ರೇಷು ಕಾಮಂ ತಮಪಿ ಭೋಜಯೇತ್ ॥೧೧೧॥ ವೈಶ್ಯಶೂದ್ರಾವಪಿಪ್ರಾಪ್ತೌ ಕುಟುಂಬೇಽತಿಥಿ ಧರ್ಮಿಣೌ । ಭೋಜಯೇತ್ಸಹಭೃತ್ಯೈಸ್ತಾವಾನೃಶಂಸ್ಯಂ ಪ್ರಯೋಜಯನ್ ॥೧೧೨॥ ಇತರಾನಪಿ ಸಖ್ಯಾದೀನ್ ಸಂಪ್ರೀತ್ಯಾ ಗೃಹಮಾಗತಾನ್ । ಪ್ರಕೃತ್ಯಾನ್ನಂ ಯಥಾಶಕ್ತಿ ಭೋಜಯೇತ್ಸಹಭಾರ್ಯಯಾ ॥೧೧೩॥ ಮ-iii ॥ ಬಾಲಸ್ವವಾಸಿನೀವೃದ್ಧಗರ್ಭಿಣ್ಯಾತುರಕನ್ನಿಕಾಃ । ಸಂಭೋಜ್ಯಾತಿಥಿಭೃತ್ಯಾಂಶ್ಚ ದಂಪತ್ಯೋಃಶೇಷಭೋಜನಂ ॥ಯಾ-i.೧೦೫॥

18 ಕೇಚಿದ್ಬುಭುಕ್ಷವೋ ಯಾಂತಿ ಕೇಚಿದ್ಯಾಂತಿ ಜಿಘೃಕ್ಷವಃ ॥ನೀತಿ॥ (ಬುಭುಕ್ಷವಃ= ಹಸಿದವರು, ಜಿಘೃಕ್ಷವಃ= ಕೈಗೆ ಸಿಕ್ಕಿದುದನ್ನು ಕಸಿದುಕೊಳ್ಳುವವರು)

# ೧೦ನೆಯ ಪ್ರಕರಣ—ದೇವತಾರ್ಚನೆ

## ೧. ಉಪಾಸನಾ ಮೀಮಾಂಸ

ಸಾಧಾರಣವಾಗಿ ಮಧ್ಯಾಹ್ನದಲ್ಲಿ ಸಂಧ್ಯಾವಂದನೆ ಬ್ರಹ್ಮಯಜ್ಞ ಪಿತೃತರ್ಪಣ ಗಳನ್ನು ಮಾಡಿದ ಮೇಲೆ ವಾಕಯಜ್ಞಗಳಿಗೆ ಮೊದಲು ದೇವತಾರ್ಚನೆಯನ್ನು ಮಾಡುವುದು ಸಂಪ್ರದಾಯ. ಅರ್ಚನೆಗೆ ಕಾಲವು ನಿಯತವಾಗಿಲ್ಲವಾಗಿ ಬೆಳಗಾಗಲೇ ಮಾಡುವುದೂ ಉಂಟು. ನಿತ್ಯವೂ ಮಾಡುತ್ತಾರೆ, ವಾರಕ್ಕೊಂದಾವೃತ್ತಿಯಾದರೂ ಮಾಡುತ್ತಾರೆ, ನಿತ್ಯವೂ ಕ್ರಮವಾಗಿ ಮಾಡದಿದ್ದರೂ ದೀಪವನ್ನು ಹೊತ್ತಿಸಿಟ್ಟು, ಹೂವುಗಳನ್ನು ಹಾಕಿ, ಮಾಡಿದ ಅಡಿಗೆಯನ್ನು ನಿವೇದನ ಮಾಡಿ, ಅಡ್ಡ ಬೀಳುತ್ತಾರೆ. ಮನೆಯಲ್ಲಿ ಯಾರಾದರೂ ಒಬ್ಬರು ಅರ್ಚನೆಯನ್ನು ಮಾಡುತ್ತಾರೆ, ಎಲ್ಲರೂ ತೀರ್ಥ ಪ್ರಸಾದಗಳನ್ನು ಸೇವಿಸುತ್ತಾರೆ. ಅನುಕೂಲವಿದ್ದವರೂ ಮಂತ್ರವನ್ನು ಕಲಿಯ ದಿದ್ದವರೂ ಅಶಕ್ತರೂ ಅಲಸರೂ ಬೇರೆಯವರಿಂದ ಅರ್ಚನೆಯನ್ನು ಮಾಡಿಸುತ್ತಾರೆ. ಭಕ್ತಿಯಿಂದಲೂ ಮಾಡುತ್ತಾರೆ. ಸಂಪ್ರದಾಯವನ್ನು ಬಿಡಬಾರದೆಂದೂ ಮಾಡು ತ್ತಾರೆ. ಗತಾನುಗತಿಕವಾಗಿಯೂ ಮಾಡುತ್ತಾರೆ. ಹ್ರಸ್ವವಾಗಿಯೋ ದೀರ್ಘ ವಾಗಿಯೋ ಸಮಂತ್ರಕವಾಗಿಯೋ ಅಮಂತ್ರಕವಾಗಿಯೋ ಎಲ್ಲರ ಮನೆಯಲ್ಲಿಯೂ ನಡೆಯುತ್ತದೆ. ಹೇಗೆ ಮಾಡಿದರೂ ಭಗವದಾರಾಧನೆಯೇ. ದೇವಾಲಯಗಳಿಗೆ ಹೋಗಿ ಭಕ್ತಿಶ್ರದ್ಧೆಯಿಂದ ಸೇವೆಯನ್ನು ಮಾಡುತ್ತಾರೆ. ಗುಡಿಯಿಲ್ಲದ ಗ್ರಾಮವೇ ಅಪೂರ್ವ. ನಾಲ್ಕಾರು ಗ್ರಾಮಗಳಿಗಾದರೂ ಒಂದು ಗುಡಿಯಿದ್ದೇ ಇರುತ್ತದೆ. ನಾವಿರಾರು ಗ್ರಾಮಗಳ ಮಧ್ಯದಲ್ಲಿ ಒಂದು ಕಡೆ ಪ್ರಸಿದ್ಧವಾದ ಸ್ಥಳದಲ್ಲಿ ದೊಡ್ಡ ಪುರಾತನ ದೇವಾಲಯವಿರುತ್ತದೆ ಆಗಾಗ ಅಲ್ಲಿಗೆ ಹೋಗಿ ಶ್ರದ್ಧಾಭಕ್ತಿಯಿಂದ ಸೇವೆಯನ್ನು ಮಾಡಿ ಕೃತಾರ್ಥರಾಗುತ್ತಾರೆ. ಅಂಥಾ ದೇವಾಲಯಗಳ ದೇವರು ಒಂದೊಂದು ಕುಲದ ಮನೆದೇವರಾಗಿರುತ್ತದೆ, ಆ ಕುಲದವರು ಆ ದೇವರ ಒಕ್ಕಲು, ಕುಲದೇವರಲ್ಲಿ ವಿಶೇಷ ಭಕ್ತಿ ಇರುತ್ತದೆ. ಅನೇಕ ಪ್ರಸಿದ್ಧ ದೇವಾಲಯಗಳ ದೇವರು ಗಳಿಗೆ ವರ್ಷಂಪ್ರತಿಯಲ್ಲಿಯೂ ರಥೋತ್ಸವಗಳೂ, ತತ್ಪ್ರಯುಕ್ತವಾಗಿ ಜಾತ್ರೆಗಳೂ ನಡೆಯುತ್ತವೆ. ಆಗ ಬಹುಮಂದಿ ಅಲ್ಲಿ ಯಾತ್ರೆಗೆ ಹೋಗುತ್ತಾರೆ. ಹೀಗೆ ನಿತ್ಯ ನೈಮಿತ್ತಿಕಾರ್ಚನೆಗಳಿಗೆ ಸೌಲಭ್ಯಗಳು ಏರ್ಪಟ್ಟಿವೆ.

ದೇವತಾರ್ಚನೆಯ ಸಂಪ್ರದಾಯದಲ್ಲಿ ನಡೆಯುವುದು ವಿಗ್ರಹಾರಾಧನೆಯು, ಅಥವಾ ಇನ್ನೂ ಹೆಚ್ಚು ಸಂಗತವಾದ ಹೆಸರನ್ನು ಪ್ರಯೋಗಿಸುವುದಾದರೆ ಸಗುಣೋ ಪಾಸನೆಯೆನ್ನಬೇಕು. ಮೂರ್ತಿಪೂಜೆಯ ಸಲುವಾಗಿ ನಾವೂ ನಮ್ಮ ಸಂಸ್ಕೃತಿಯೂ

ನಮ್ಮ ದೇವಾಲಯಗಳೂ ಬಲವಾದ ಆಕ್ಷೇಪಗಳಿಗೂ ಆಘಾತಗಳಿಗೂ ಒಳಗಾಗ ಬೇಕಾಯಿತು. ದೌರ್ಜನ್ಯಕ್ಕೆಂದಿಗೂ ವಿಜಯವಾಗುವುದಿಲ್ಲ. ಒಂದು ದೇವಾಲಯವು ನೆಲಸಮವಾದರೆ ನೂರಾರು ನೂತನಾಲಯಗಳು ನಿರ್ಮಿತವಾದವು. ಒಂದು ವಿಗ್ರಹವು ವಿಕಲವಾದರೆ ಸಾವಿರಾರು ಸುಂದರ ವಿಗ್ರಹಗಳು ರಚಿತವಾದವು. ಹಳೆಯದಾಗಿ ಯಂತ್ರವತ್ತಾಗಿ ನಡೆಯುತ್ತಿದ್ದ ಸಂಪ್ರದಾಯಕ್ಕೆ ನವಚೈತನ್ಯವೇ ಪ್ರಾಪ್ತವಾಯಿತು. ಇದೇನು ಘಾತುಕರ ಅನುಗ್ರಹವಲ್ಲ, ಜನತೆಯ ಸಂಸ್ಕಾರದಲ್ಲಿ ರೂಢಮೂಲವಾಗಿದ್ದ ಭಕ್ತಿಯ ಆವಿರ್ಭಾವ ಎಷ್ಟೋ ಶತಮಾನಗಳ ಹಿಂದೆ ನೆಲಮಟ್ಟವಾದ ಸೋಮನಾಥ ದೇವಾಲಯವು ಸ್ವಾತಂತ್ರ್ಯ ಬಂದೊಡನೆಯೇ ಜೀರ್ಣೋದ್ಧಾರವಾಯಿತು, ಈ ಕಾರ್ಯದಲ್ಲಿ ನಮ್ಮ ಜನಾಂಗವೇ ಭಾಗವಹಿಸಿತು, ಎಂದಮೇಲೆ ಹೆಚ್ಚು ಹೇಳುವ ಅವಶ್ಯಕವಿಲ್ಲ. ಈ ಕಾಲದಲ್ಲಿಯೂ ಅಲ್ಲಲ್ಲಿ ಆಕ್ರೋಶಗಳು ಕೇಳಿಬರುತ್ತಿವೆ, ಆಘಾತಗಳೂ ಅಷ್ಟಿಷ್ಟು ನಡೆಯುತ್ತಿವೆ—ವೈಯಕ್ತಿಕಗಳಾದುದರಿಂದಲೂ ಸಾರ್ವಜನಿಕ ಸಂಸ್ಥೆಗಳನ್ನು ಮುಟ್ಟಲಾರದವಾದುದರಿಂದಲೂ ಉಪೇಕ್ಷಣೀಯವೇ. ಆಕ್ಷೇಪವೆದ್ದಿರುವುದರಿಂದ ಸಂಪ್ರದಾಯವನ್ನು ವಿಮರ್ಶಿಸಬೇಕು.

ವಿಗ್ರಹಾರಾಧನೆಯನ್ನು ಆಕ್ಷೇಪಿಸುವವರು ಮೂವರು-ಅಜ್ಞರು, ಸರ್ವಜ್ಞರು, ಅಭಿಮಾನಿಗಳು. ಅಜ್ಞರಾಡುವುದು ಸಹಜವೇ, ತಿಳಿಯದೆ ಆಕ್ಷೇಪಿಸುತ್ತಾರೆ, ಆಗ್ರಹಪೂರ್ವಕವಾಗಿ ಆಕ್ಷೇಪಿಸಲೂ ಆರರು, ಅಂಥಾವರಿಗೆ ಸಮಾಧಾನವನ್ನು ಹೇಳುವುದೂ ಸುಲಭ, ಅವರ ಮಾತಿಗೆ ಯಾರೂ ಕಿವಿಗೊಡುವುದೂ ಇಲ್ಲ. ಅಭಿಮಾನಿಗಳು ವಿರುದ್ಧಬುದ್ಧಿಯವರು ಅವರಿಗೆ, ಸಹನೆಯಿಲ್ಲ, ಸಹಾನುಭೂತಿಯಿಲ್ಲ, ತತ್ತ್ವಾನ್ವೇಷಣವು ಪ್ರಕೃತವಲ್ಲ, ಆತ್ಮಪ್ರಶಂಸೆಯೊಂದೇ ಪ್ರಕೃತ, ತಮ್ಮದೇ ಸರಿ, ಮಿಕ್ಕವೆಲ್ಲವೂ ತಪ್ಪು, ತಮ್ಮ ಸಂಪ್ರದಾಯವೇ ಉಳಿಯಬೇಕು, ಇತರ ಸಂಪ್ರದಾಯಗಳಳಿಯಬೇಕು, ಎಂಬುದೇ ಅವರ ಧರ್ಮ, ಕರ್ಮ, ಕರ್ತವ್ಯಪರಾಯಣತೆ, ಅದಕ್ಕಾಗಿ ಪರಧರ್ಮವನ್ನು ನಿಂದಿಸುತ್ತಾರೆ, ತಾವೇ ಏನು ಮಾಡುತ್ತೇವೆ ಎಂಬುದರ ಪರಿಜ್ಞಾನವಿಲ್ಲ—ಒಂದು ಹಸ್ತಕ್ಕೆ ಒಂದು ಪುಸ್ತಕಕ್ಕೆ ಒಂದು ಪಠಕ್ಕೆ ಒಂದು ಮರಕ್ಕೆ ಒಬ್ಬ ವ್ಯಕ್ತಿಗೆ ಒಂದು ಶಕ್ತಿಗೆ ಕಡೆಗೊಂದು ಗೋರಿಗೆ ಒಂದು ಕ್ರೂಶಿಗೆ ಮಹತ್ವವನ್ನು ಪೂಜ್ಯತ್ವವನ್ನೂ ಪಾವನತ್ವವನ್ನೂ ಕಲ್ಪಿಸುತ್ತೇವಲ್ಲ—ಅದೇನು ವಸ್ತು ಪ್ರಾಶಸ್ತ್ಯವೇ ಅಥವಾ ವಸ್ತ್ವಂತರ್ಗತವಾದ ಬೇರೊಂದು ಮಹತ್ತ್ವದ ಭಕ್ತಿಭಾವನೆಯೋ ಎಂಬುದು ಸಹ ಮರೆತುಹೋಗುತ್ತದೆ. ತಮ್ಮನ್ನೇ ಉಪಮಾನವಾಗಿಟ್ಟುಕೊಂಡು ಸಹನೆಯಿಂದ ವರ್ತಿಸಬೇಕೆಂಬ ನ್ಯಾಯವನ್ನನುಸರಿಸಿದರೆ ಮಾನವನ ಪ್ರಗತಿಯು ಸರ್ವತೋಮುಖವಾಗುತ್ತಿತ್ತು. ಅವರ ಆಕ್ಷೇಪವೂ ಪ್ರಕೃತವಿಲ್ಲ. ಸರ್ವಜ್ಞರು ತತ್ತ್ವಜ್ಞಾನಿಗಳು, ಜೀವನ್ಮುಕ್ತರು, ಬ್ರಹ್ಮನಿಷ್ಠೆಯಲ್ಲಿ ಪರಾಕಾಷ್ಠವನ್ನು ಮುಟ್ಟಿದವರು. ಕೆಳಮಟ್ಟದಲ್ಲಿ ಪರಿಭ್ರಮಿಸುವ ಅಲ್ಪಜ್ಞರನ್ನು ಮೇಲಕ್ಕೆತ್ತುವುದು ಅವರಿಗೆ ಪ್ರಕೃತ, ಅಲ್ಪಜ್ಞರ ಭಕ್ತಿಶ್ರದ್ಧೆಯನ್ನು ಹಳಿಯುವುದಿಲ್ಲ. ಅವರು ಪೂಜಿಸುವ

ವಿಗ್ರಹಾದಿಗಳೇ ಪರಬ್ರಹ್ಮವಲ್ಲವೆಂದು ಬೋಧಿಸುತ್ತಾರೆ.[1] ಪರಮಾತ್ಮನು ಕಣ್ಣಿಗೆ ಕಾಣಿಸುವುದಿಲ್ಲ, ಕಿವಿಗೆ ಕೇಳಿಸುವುದಿಲ್ಲ, ಸ್ಪರ್ಶಕ್ಕೆ ಸಿಗುವುದಿಲ್ಲ, ಯಾವ ಇಂದ್ರಿಯಕ್ಕೂ ಗೋಚರವಾಗುವುದಿಲ್ಲ, ವಾಕ್ಕಿಗೂ ಮನಸ್ಸಿಗೂ ಅತೀತನು, ಅವನನ್ನು ಸಾಕ್ಷಾತ್ಕರಿಸಬೇಕಾದರೆ ಯೋಗಾಭ್ಯಾಸವನ್ನು ಮಾಡಬೇಕು, ಚಿತ್ತವೃತ್ತಿಯನ್ನು ನಿರೋಧಿಸಬೇಕು, ಬುದ್ಧಿಯನ್ನು ಏಕಾಗ್ರ ಮಾಡಬೇಕು, ಪ್ರವೃತ್ತಿಯನ್ನು ಅಂತರ್ಮುಖ ಮಾಡಬೇಕು, ದಿವ್ಯದೃಷ್ಟಿಯನ್ನು ಪಡೆಯಬೇಕು, ಆತ್ಮನಲ್ಲಿ ಪರಮಾತ್ಮನನ್ನು ಅರಸಬೇಕು, ಅರಸಿ ಅವಲೋಕಿಸಬೇಕು, ಅವಲೋಕಿಸಿ ಜ್ಞಾನಿಯಾಗಬೇಕು, ಜ್ಞಾನಿಯಾಗಿ ಸಾಯುಜ್ಯವನ್ನು ಸಾಧಿಸಿ ಮುಕ್ತನಾಗಬೇಕು, ಎಂದು ಆತ್ಮನಿಷ್ಠೆಗೆ ಅಧಿಕಾರಿಗಳಾದವರನ್ನು ಅರಿಸಿ ಪರಮಪದ ಸೋಪಾನಮಾರ್ಗವನ್ನು ತೋರಿಸುತ್ತಾರೆ. ಅನಧಿಕಾರಿಗಳಾದ ಅಜ್ಞರು ಅಲ್ಪಜ್ಞರು ಮಾಡುವ ಕರ್ಮವನ್ನು ಆಕ್ಷೇಪಿಸಿ ಬುದ್ಧಿಭೇದವನ್ನು ಮಾಡುವುದಿಲ್ಲ,[2] ಅವಹೇಳನವನ್ನೂ ಮಾಡುವುದಿಲ್ಲ. ಅವರ ಬೋಧೆಯಲ್ಲಿ ಪ್ರಾಸಂಗಿಕವಾಗಿ ಆಕ್ಷೇಪವು ಕಂಡರೂ ಅದು ಪ್ರಧಾನವಲ್ಲ, ಅರ್ಚನೆಯ ಸಂಪ್ರದಾಯದಲ್ಲಿ ಸ್ಥಿರವಾದ ಭಕ್ತಿಭಾವನೆಯನ್ನೇ ಅಂತರ್ಮುಖ ಮಾಡುವುದು ಅವರಿಗೆ ಪ್ರಕೃತ. ಆದ್ದರಿಂದ ಅವರ ಬೋಧೆಯು ಖಂಡನವಲ್ಲ, ರಚನಾತ್ಮಕವು; ವಿನಾಶಕಾರಿಯಲ್ಲ—ಪ್ರಗತಿಕಾರಕವು, ಅಪಕಾರವಲ್ಲವೇ ಅಲ್ಲ—ಸರ್ವಥಾ ಉಪಕಾರವು. ಅವರ ಮಾತು ನಮಗೆ ಹಿತವಾದುದು.

ಆಕ್ಷೇಪವು ಹೊರಗಿನಿಂದ ಮಾತ್ರವೇ ಆಗಿದ್ದರೆ ಉಪೇಕ್ಷೆ ಮಾಡಬಹುದಾಗಿತ್ತು, ನಮ್ಮ ಬುದ್ಧಿಗೇ ತರಂಗತರಂಗವಾಗಿ ಏಳುತ್ತದೆ. ವಿಗ್ರಹಾದಿ ಜಡಪದಾರ್ಥವನ್ನು ಚೈತನ್ಯಸ್ವರೂಪನಾದ ಪರಮಾತ್ಮನೆಂದು ಭಾವಿಸುವುದು ಸರಿಯೇ? ನಿರಾಕಾರನಾದ ಪರಂಜ್ಯೋತಿಗೂ ಶಿಲಾಮಯ ಮೃಣ್ಮಯ ವರ್ಣಮಯ ಛಾಯಾಮಯ ಸಾಕಾರ ಮೂರ್ತಿಗೂ ಎಲ್ಲಿಗೆಲ್ಲಿಗೆ ಸಂಬಂಧ? ಇಂಥಾ ಮಿಥ್ಯಾಭಾವನೆಯ ಸಗುಣೋಪಾಸನೆಯ ಸಂಪ್ರದಾಯವು ಶ್ಲಾಘ್ಯವೇ? ಕುಲಾಚಾರವೆಂದೂ ವೃದ್ಧಸಂಪ್ರದಾಯವೆಂದೂ ನಮ್ಮನ್ನು ನಾವೇ ಮೋಸಗೊಳಿಸಬಹುದೇ? ಇತ್ಯಾದಿ ಸಂಶಯಗಳು

---

1 ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನ ಮನೋ ನ ವಿದ್ಮೋ ನ ವಿಜಾನೀಮೋ ಯಥೈತದನುಶಿಷ್ಯಾದನ್ಯದೇವ ತದ್ವಿದಿತಾದಥೋ ಅವಿದಿತಾದಧಿ॥ ಇತಿ ಶುಶ್ರುಮ ಪೂರ್ವೇಷಾಂ ಯೇ ನಸ್ತದ್ವ್ಯಾಚಚಕ್ಷಿರೇ ॥ ಯದ್ವಾಚಾನಭ್ಯುದಿತಂ ಯೇನ ವಾಗಭ್ಯುದ್ಯತೇ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ। ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಗ್ಂಷಿ ಪಶ್ಯಂತಿ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಗ್ಂ ಶ್ರುತಂ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ಕೇನೋಪನಿಷತ್॥

2 ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ। ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಸ್ಸಮಾಚರನ್ ॥ಭ.ಗೀ.॥

ನೈಜವಾಗಿಯೂ ಗತಾನುಗತಿಕವಾಗಿಯೂ ಹುಟ್ಟಿ ಬೆಳೆದಿವೆ. ಸ್ವಶ್ರೇಯಸ್ಸಿಗಾಗಿ ವಿಮರ್ಶೆಯು ಅವಶ್ಯವು.

ಈ ಸಂಪ್ರದಾಯದ ತತ್ತ್ವವು ಮನದಟ್ಟಾಗಬೇಕಾದರೆ ಮನಸ್ಸಂಸ್ಕಾರ ಪ್ರಕಾರವನ್ನು ಅರಿಯಬೇಕು. ಅದರ ಪ್ರಭಾವವು ಬಾಲಕರಲ್ಲಿ ಪ್ರಕರ್ಷವಾಗಿ ಕಾಣುವುದು. ಪುಟ್ಟ ಬಾಲಕಿಯು ನಿರ್ಜೀವವಾದ ಬೊಂಬೆಯನ್ನು ಶಿಶುವೆಂದೂ ತಾನು ಅದರ ಮಾತೆಯೆಂದೂ ಭಾವಿಸಿ ಅದರ ಮೇಲೆ ಮಾತೃವಾತ್ಸಲ್ಯದ ಸುರಿಮಳೆಯನ್ನು ಮಾಡುತ್ತಾಳೆ. ಬಾಲಕಿಗೆ ಮಾತೃತ್ವದ ಅನುಭವವಿಲ್ಲ. ಬೊಂಬೆಗೆ ಮಾತೃಪ್ರೇಮದ ಬೋಧೆಯಿಲ್ಲ. ಆದರೂ ಶಿಶುಮಾತೃ ಸಂಬಂಧವಾದ ಕೃತಕ ಸಂಸಾರದಲ್ಲಿ ಆನಂದವಡುತ್ತಾಳೆ. ಬಾಲಕರು ಅಶ್ವಾರೋಹಿಗಜಾರೋಹಿಗಳನ್ನು ನೋಡಿ ದೊಣ್ಣೆಯನ್ನೇರಿ ಓಡಾಡುತ್ತಾ ಅಶ್ವಾರೋಹಿಗಜಾರೋಹಿಗಳಾದೆವೆಂದು ರಾಜಭೋಗದ ಆನಂದವನ್ನನುಭವಿಸುತ್ತಾರೆ. ಅದೇ ಬಾಲಕರಿಗೆ ಬಣ್ಣದ ಕುದುರೆ ಆನೆ ಸಿಗಲಿ, ದೊಣ್ಣೆಯ ಮೇಲಣ ವಾಹನಭಾವನೆಯು ಮಾಯವಾಗಿ ಆ ಬಣ್ಣದ ಪದಾರ್ಥಗಳ ಮೇಲೆ ಗಜಾಶ್ವಭಾವನೆಯು ಪರಿವರ್ತಿತವಾಗುತ್ತದೆ. ಹೀಗೆ ಬಾಲ್ಯದಲ್ಲಿ ಕೃತಕವಸ್ತುಗಳೇ ವಾಸ್ತವಗಳು ಬಾಲಕರ ನಿರ್ಮಲಾಂತಃಕರಣದಲ್ಲಿ ಎಲ್ಲವೂ ಇದೆಯೆಂದೂ ಇದ್ದುದೇ ಎಲ್ಲವೂ ಎಂದೂ ಭಾವನೆಯಿರುತ್ತದೆ ಯಾರೂ ಅದನ್ನು ಆಟವೆನ್ನುವುದಕ್ಕಿಲ್ಲ. ಅವರು ಅಪೇಕ್ಷಿಸಿದರೆ ದೊಡ್ಡವರೂ ಜತೆಯಾಗಬೇಕು, ನಿರಾಕರಿಸಿ ಆತಂಕಪಡಿಸಿದರೆ ರೋದಿಸುತ್ತವೆ. ಮಕ್ಕಳಿಗೆ ಬೋಧೆಮಾಡುವವರೂ ಈ ಮನೋಭಾವವನ್ನೇ ಅಧಿಕರಿಸಿ ಕೃತಕವಸ್ತುಗಳನ್ನೇ ತೋರಿಸಿ ವಸ್ತುಜ್ಞಾನವನ್ನು ಕಲಿಸುತ್ತಾರೆ ಚಿತ್ರಗಳನ್ನು ತೋರಿಸಿ ತೋರಿಸಿ ವಿವಿಧ ಪ್ರಾಣಿಸ್ವರೂಪವನ್ನು ಮನದಟ್ಟು ಮಾಡಿಸುತ್ತಾರೆ. ಭೂಪಟವನ್ನು ತೋರಿಸಿ ಗಿರಿನದೀಸಮುದ್ರ ದೇಶವಿದೇಶಗಳ ವಿನ್ಯಾಸವನ್ನು ಬೋಧಿಸುತ್ತಾರೆ. ಬೋಧಕರ ದೃಷ್ಟಿಯಲ್ಲಿ ಚಿತ್ರಗಳೇ ಆದರೂ ಮಕ್ಕಳ ಭಾವನೆಯಲ್ಲಿ ಅದು ನಿಜವಾದ ಭೂಗೋಳವೇ. ಮಾಡುವುದೇನು ಕೃತಕ, ಆಗುವುದೇನು ಸಂಸ್ಕಾರ. ಕೃತಕಗಳು ಕ್ರಮೇಣ ಬಿಟ್ಟುಹೋಗುತ್ತವೆ, ಸಂಸ್ಕಾರವು ಉಳಿಯುತ್ತದೆ ಪ್ರಕೃತವೇನೆಂದರೆ ಕರಣಗಳ ಸ್ಥಿರೀಕರಣವು ಇಷ್ಟವಲ್ಲ, ಅಭ್ಯಾಸವೂ ಸಂಸ್ಕಾರವೂ ಅಭೀಷ್ಟ, ಅಭೀಷ್ಟವು ನಿರ್ದಿಷ್ಟಧ್ಯೇಯದಕಡೆಗೆ ಪ್ರವರ್ತಿಸುತ್ತಿರುತ್ತದೆ.

ಬಾಲಕರದೇ ಏಕೆ, ದೊಡ್ಡವರ ಮನೋವೃತ್ತಿಯೂ ಅದೇ. ಗುರುಹಿರಿಯರ ಭಾವಚಿತ್ರಗಳು ಸರ್ವರಿಗೂ ಪ್ರಿಯವೂ ಪೂಜ್ಯವೂ ಆದುವಷ್ಟೆ. ಚಿತ್ರವು ನಿರ್ಜೀವ ವಸ್ತುವೇ, ವರ್ಣಚ್ಛಾಯಾವಿನ್ಯಾಸದ ಕೌಶಲದಿಂದ ಆಕಾರದಂತೆ ಭಾಸವಾಗುತ್ತದೆ. ಚಿತ್ರದಲ್ಲಿ ಪೂರಾ ಆಕಾರವಿರುವುದಿಲ್ಲ. ಅದರಲ್ಲಿ ಕಾಣುವುದು ಕೆಲವು ಸಾದೃಶ್ಯಗಳು ಮಾತ್ರವೇ; ಜತೆಗೆ ಪೂರ್ವಾನುಭವದ ಸ್ಮೃತಿರೂಪ ವಿಷಯಗಳ ಸಂಕಲೀಕರಣದಿಂದ ಮನಸ್ಸು ಕಲ್ಪಿಸುವ ಚಿತ್ರವ್ಯತಿರಿಕ್ತವಾದ ಗುರುಹಿರಿಯರ ಬಿಂಬಗಳೇ ಗೋಚರ

ವಾಗುವುದು. ಇಂಥಾ ಅನುಭವಕ್ಕೆ ದೇಶ ಕಾಲ ವರ್ತಮಾನ ಪರಿಮಿತಿಗಳಿಗೆ ಬದ್ಧವಾಗದೆ ಸ್ವೇಚ್ಛೆಯಾಗಿ ಪ್ರವರ್ತಿಸುವ ಮನಸ್ಸಾಮ್ರಾಜ್ಯದ ಪ್ರಭುತ್ವವೇ ಕಾರಣವು. ಅನುಭವವು ದೃಶ್ಯಮಾನ ಮಾತ್ರವಲ್ಲ, ತಾದಾತ್ಮ್ಯಸ್ವರೂಪವದ್ದು. ಅದರಿಂದಲೇ ಚಿತ್ರಕ್ಕೆ ಅಪಮಾನವೂ ಅವಹೇಳನವೂ ಸಂಭವಿಸಿದರೆ ಸಹಿಸುವುದಿಲ್ಲ. ಈ ವಿಧದ ಅನುಭವದಲ್ಲಿ ಕಾಣುವ ನಿಜತ್ವವೇನು—**ದೃಶ್ಯಮಾನವಾದ ಅಪೂರ್ಣ ಸಾದೃಶ್ಯದಲ್ಲಿ ಭಾವನಾತ್ಮಕವಾದ ಪೂರ್ಣತ್ವವನ್ನು ಸಾಕ್ಷಾತ್ಕರಿಸುವುದು, ದೃಶ್ಯಕ್ಕಿಂತಲೂ ಭಾವನೆಯೇ ಪ್ರಧಾನವು.** ಮತ್ತೊಂದು ಪ್ರಕಾರದ ಉದಾಹರಣೆಯನ್ನು ವಿಮರ್ಶಿಸೋಣ. ರಾಷ್ಟ್ರಧ್ವಜವೇನು—ಒಂದು ಕೋಲು, ಕೋಲಿನ ತುದಿಯಲ್ಲೊಂದು ಬಟ್ಟೆ, ಬಟ್ಟೆಯ ಮೇಲೆ ಇಷ್ಟವಾದ ಹಸೆ ಚಿತ್ರ ಮುಂತಾದುವು ತಾನೆ. ಆದರಲ್ಲಿ ರಾಷ್ಟ್ರಜೀವನದ ಸರ್ವಸ್ವವೂ ಕೇಂದ್ರೀಕೃತವಾಗಿರುತ್ತದೆ. ಜನ ಜನಾಂಗದ ಶೌರ್ಯ ವೀರ್ಯ ಶಕ್ತಿ ಸಾಹಸ ಪ್ರತಾಪ ಪ್ರಕರ್ಷತ್ವವೂ ಐತಿಹ್ಯವೂ ಮಂತಾದ ಸಮಸ್ತ ಅದೃಷ್ಟಿಗೋಚರವಾದ ಮನೋಭಾವವೆಲ್ಲಕ್ಕೂ ಅದು ಚಿಹ್ನೆಯು, ಲಾಂಛನವು, ಅಥವಾ ಮಹಾಕವಿಯ ಅಮೃತವಾಣಿಯಲ್ಲಿ "ವೀರಘೋಷಣ"ವು. ಅದೇನು ರಾಜನಲ್ಲ ಪ್ರಜೆಯಲ್ಲ, ಜನಾಂಗವಲ್ಲ ಜನಪದವಲ್ಲ; ಅದರಲ್ಲಿಯೂ ಆದರಲ್ಲಾರೋಪಿತವಾದ ಮನೋಭಾವನೆಗಳಿಗೂ ಸಾದೃಶ್ಯ ಲೇಶವೂ ಇಲ್ಲ ಆದರೂ ಅದಕ್ಕೆ ಎಲ್ಲಿಯೂ ಇರಿಸಲಾರದಷ್ಟು ಹೆಮ್ಮೆಯೂ ಮಹತ್ವವೂ ಮರ್ಯಾದೆಯೂ ಇದೆ. ಸಾಮಾನ್ಯರು ಮಾತ್ರವೇ ಅಲ್ಲ, ವಿಜ್ಞಾನಶೋಧಿತಾತ್ಮರೂ ವಸ್ತುಸ್ವರೂಪದ್ರಷ್ಟರೂ ಕೂಡ ಅದನ್ನು ಗೌರವಿಸಿ ಧ್ವಜಾರೋಹಣೆ ಧ್ವಜವಂದನೆ ಧ್ವಜಸಂರಕ್ಷಣೆ ಮುಂತಾದವುಗಳನ್ನು ಭಕ್ತಿಶ್ರದ್ಧೆಯಿಂದ ಮಾಡುತ್ತಾರೆ ಈ ಅನುಭವದ ಅರ್ಥವೇನು—**ಸಾಕಾರವಾದ ಜಡವಸ್ತುವಿನಲ್ಲಿ ತದ್ಭಿನ್ನವಾದ ನಿರಾಕಾರವನ್ನಾರೋಪಿಸಿ ನಿರ್ಜೀವ ವಸ್ತುವನ್ನು ಸಜೀವಕ್ಕಿಂತಲೂ ಹೆಚ್ಚು ಮಹತ್ವಕ್ಕೆ ಏರಿಸುವುದು.** ಹಾಗೆಯೇ ರಾಜರ ರಾಜಸ್ಥಾನೀಯರ ವಿಷಯದಲ್ಲಿ ವಿಶೇಷ ಗೌರವವಿರುವುದು—**ವ್ಯಕ್ತಿಯಲ್ಲಿ ಸಮಷ್ಟಿಭಾವನೆಯು,** ಆಯುಧಗಳನ್ನು ಪೂಜಿಸುವುದು—**ಸಾಧನಗಳಲ್ಲಿ ಸಾಧ್ಯವನ್ನು ಸಾಕ್ಷಾತ್ಕರಿಸುವುದು,** ಚಿತ್ರದಲ್ಲಿ ಹಿರಿಯರನ್ನು ಕಾಣುವಂತೆ, ಧ್ವಜದಲ್ಲಿ ಮನೋಭಾವವನ್ನು ಆರೋಪಿಸುವಂತೆ, ರಾಜಾದಿಗಳಲ್ಲಿ ಸಮಷ್ಟಿಭಾವನೆಯನ್ನಿಡುವಂತೆ, ಸಾಧನಗಳಲ್ಲಿ ಸಾಧ್ಯವನ್ನು ನಿರೀಕ್ಷಿಸುವಂತೆ, ವಿಗ್ರಹವನ್ನು ಪರಮಾತ್ಮಭಾವನೆಯಿಂದ ಅರ್ಚಿಸುವುದು.

ವಿಗ್ರಹಾರಾಧನೆಯಲ್ಲಾಗುವ ಸಂಸ್ಕಾರವೂ ಇಂಥಾದ್ದೇ. ಆರಾಧಿಸುವ ವಿಗ್ರಹಾದಿಗಳೂ ಆರಾಧನೆಯ ಕರಣೋಪಕರಣಗಳೂ ಶಾಶ್ವತವಾಗಿರಬೇಕೆಂಬುದು ಅಭೀಷ್ಟವಲ್ಲ. ಭಾವಸಂಶುದ್ಧಿಯೂ ಪರದೈವದಲ್ಲಿ ಅನನ್ಯಭಕ್ತಿಯೂ ಅಭೀಷ್ಟವು. ಮನೆಯಲ್ಲಿ ಪೂಜಿಸುವ ದೇವರು ಹಿರಿಯರ ಕಾಲದಿಂದ ಪೂಜಿಸುತ್ತಾ ಬಂದವು. ಅಭ್ಯಾಸದ (ಆವೃತ್ತಿಯ) ಬಲದಿಂದ ಅವುಗಳಲ್ಲಿ ದೃಢಭಕ್ತಿಯು ರೂಢಮೂಲವಾಗಿ

ರುತ್ತದೆ. ಅದನ್ನು ಮೈಲಿಗೆಯಲ್ಲಿ ಮುಟ್ಟುವುದಿಲ್ಲ, ಪೂಜಿಸದೆ ಉಣುವುದಿಲ್ಲ, ಉಂಡು ಪೂಜಿಸುವುದಿಲ್ಲ ಆಬಾಲವೃದ್ಧರಾಗಿ ಸರ್ವರಿಗೂ ಅವು ಪೂಜ್ಯ. ಪೂಜೆಗೆ ಪತ್ರಪುಷ್ಪಗಳನ್ನೊದಗಿಸುವವರೊದಗಿಸುತ್ತಾರೆ. ಪೂಜಾಸ್ಥಾನವನ್ನು ಉಪಲೇಪಿಸಿ ಅಲಂಕರಿಸುವವರು ಅಲಂಕರಿಸುತ್ತಾರೆ. ಉಪಕರಣಗಳನ್ನು ತೊಳೆದಿಡುವವರು ಇಡುತ್ತಾರೆ. ಯಾವ ಹೆಣ್ಣುಹಂಪಲು ಸಿಕ್ಕಿದರೂ ನೈವೇದ್ಯಕ್ಕೆಂದು ಮೀಸಲು ಮಾಡುತ್ತಾರೆ. ಗೃಹಸ್ವಾಮಿನಿಯು ನೈವೇದ್ಯಕ್ಕೆಂದು ಭಕ್ಷ್ಯಭೋಜ್ಯಗಳನ್ನು ಸಿದ್ಧ ಪಡಿಸುತ್ತಾಳೆ. ಕೆಲಸಕಾರ್ಯಗಳ ಆತಂಕವಿರುತ್ತದೆ, ಸಂಸಾರದ ಸುಖದುಃಖ ಗಳಿರುತ್ತವೆ, ಹಸಿವಾಗುತ್ತಿರುತ್ತದೆ, ಹಸುಳೆಗಳು ನೊರಗುತ್ತಿರುತ್ತವೆ, ಅನ್ನಾತುರರು ತಿಂಡಿಗೆ ತವಕಪಡುತ್ತಿರುತ್ತಾರೆ. ಎಷ್ಟಿದ್ದರೂ ದೇವತಾರ್ಚನಾಂಗವಾಗಿ ನೈವೇದ್ಯ ಸಮರ್ಪಣೆಯಾಗಿ ತೀರ್ಥಪ್ರಸಾದಗಳಾದಮೇಲೆಯೇ ಭೋಜನದ ಕೆಲಸ. ಹಸುಳೆ ಗಳು ಹಸಿವಾಗುತ್ತದೆಂದರೆ ಸ್ವಲ್ಪ ತಾಳು ಕಂದ—ನೈವೇದ್ಯವಾಗಲಿ ಎಂದು ವತ್ಸಲ ಳಾದ ಮಾತೆಯು ಸಮಾಧಾನವನ್ನು ಹೇಳುತ್ತಾಳೆ ಹೇಳುವುದು ಹೆಚ್ಚಲ್ಲ. ಕೇಳಿದ ಹಸುಮಕ್ಕಳೂ ಸಮಾಧಾನದಿಂದ ಕ್ಷುತ್ಪಿಪಾಸೆಗಳನ್ನು ನಿಗ್ರಹಿಸಿಕೊಂಡು ಕಾಯುತ್ತವೆ ಯಲ್ಲ ಅದೀಗ ವಿಶೇಷ. ತಾವು ತಿನ್ನುವ ತುಪ್ಪವನ್ನೋ ಎಣ್ಣೆಯನ್ನೋ ಹಾಕಿ ಸಣ್ಣ ಜ್ಯೋತಿಯನ್ನು ಹೊತ್ತಿಸಿ ಪರಂಜ್ಯೋತಿಗಿಡುತ್ತಾರೆ ಪತ್ರಪುಷ್ಪಗಳನ್ನು ದೇವರಿ ಗರ್ಪಿಸುತ್ತಾರೆ. ಅದರಲ್ಲಿ ಸಣ್ಣಪುಟ್ಟ ಮೂರ್ತಿಗಳು ಮುಚ್ಚಿಯೇ ಹೋಗುತ್ತವೆ— ಕಾಣಿಸುವುದು ಪುಷ್ಪರಾಶಿಯೇ. ಹೂವಿನ ತೋಟವನ್ನೇ ನೋಡಲಿ, ತುಲಸಿಯ ವನವನವನ್ನೇ ಕಾಣಲಿ, ಬಿಲ್ವವೃಕ್ಷಗಳ ತೋಪುತೋಪುಗಳೇ ಕಣ್ಣೆದುರಿಗಿರಲಿ, ಆ ಪೂಜಿಸಿದ ಪತ್ರಪುಷ್ಪರಾಶಿಯನ್ನು ಕಾಣುವುದರಿಂದಾಗುವ ಪರಮಾನಂದದಲ್ಲಿ ಒಂದಂಶವೂ ಆಗುವುದಿಲ್ಲ. ಪೂಜೆ ಮಾಡಿದ ಪೂಜ್ಯವಸ್ತುವು ಆ ರಾಶಿಯಲ್ಲಂತರ್ಗತ ವಾಗಿರುವುದೇ ಪರಮಾನಂದಕ್ಕೆ ಕಾರಣವು. ನೈವೇದ್ಯಕ್ಕೆಂದು ಮಾಡಿದುದನ್ನು ಭಗವದರ್ಪಣ ಮಾಡಿ ತಿನ್ನುವ ಅನ್ನಕ್ಕೆ ಪಾವನತ್ವವನ್ನು ಮಾಡಿಕೊಳ್ಳುತ್ತಾರೆ. ಮಂಗಳಾರತಿಯೆಂದೊಂದು ಮಿಣುಗುವ ದೀಪವನ್ನು ಸ್ವಯಂಪ್ರಕಾಶಮಾನನಿಗೆತ್ತಿ ಕೆಲವರು ಕಣ್ಣುತುಂಬ ನೋಡುತ್ತಾರೆ, ಕೆಲವರು ಕಣ್ಣುಮುಚ್ಚಿ ನೋಡುತ್ತೇವೆಂದು ಭಾವಿಸುತ್ತಾರೆ. ಸಾಮಾನ್ಯವಾಗಿ ದೇವರು ಗೂಡಿನಲ್ಲೋ ಗೋಡೆಯ ಮಗ್ಗುಲ ಲ್ಲಿಯೋ ಸ್ಥಾಪಿತವಾಗಿರುತ್ತದೆ. ಅದಕ್ಕೆ ಪ್ರದಕ್ಷಿಣೆಯನ್ನು ಮಾಡುವುದಕ್ಕಾಗುವು ದಿಲ್ಲ, ಆದರೂ ತಮ್ಮ ಸುತ್ತಲೇ ತಿರುಗಿ ಪ್ರದಕ್ಷಿಣೆಯಾಯಿತೆಂದು ಭಾವಿಸುತ್ತಾರೆ. ನೆಲವೆನ್ನದೆ, ಬಟ್ಟೆಯು ಕೊಳೆಯಾಗುವುದೆನ್ನದೆ, ಸಾಷ್ಟಾಂಗವೆರಗುತ್ತಾರೆ. ಮಿಣುಗುವ ಮಂಗಳಾರತಿಯಿಂದ ಯಾವ ಶೀತವು ಯಾವ ತಮಸ್ಸು ನಿವಾರಣ ವಾದೀತು—ಆಬಾಲವೃದ್ಧರೆಲ್ಲರೂ ಕೈಕಾಯಿಸಿಕೊಂಡು ಕಣ್ಣಿಗೊತ್ತಿಕೊಳ್ಳುತ್ತಾರೆ. ಒಂದುದ್ಧರಣೆ ತೀರ್ಥದಿಂದ ಯಾವ ದಾಹವು ಶಮನವಾದೀತು–ಆ ತೊಟ್ಟು ತೀರ್ಥ ವನ್ನು ಬಿಡದೆ ಎಲ್ಲರೂ ಪ್ರಾಶನಮಾಡುತ್ತಾರೆ. ನಿರ್ಮಾಲ್ಯದಲ್ಲಿ ಯಾವ ನವವಿಕಾಸ

ವಿರುತ್ತದೆ, ಯಾವ ಸುಗಂಧವು ಘಮಘಮಿಸುತ್ತದೆ, ಮುಡಿದರೆ ಯಾವ ಶೃಂಗಾರವು ರಚಿಸುತ್ತದೆ—ಆದರಣೀಯವಾದ ಪ್ರಸಾದವೆಂದು ಒಂದೆರಡು ಪುಷ್ಪವನ್ನೋ ಪತ್ರವನ್ನೋ ಎರಡು ಕೈಗಳಿಂದಲೂ ಸ್ವೀಕರಿಸಿ ಉತ್ತಮಾಂಗಕ್ಕೆ ಮುಡಿದು ಪ್ರಸನ್ನರಾಗುತ್ತಾರೆ. ಇಷ್ಟೆಲ್ಲವೂ ನಿಷ್ಕಾಮಕ್ರಿಯೆಯೇ. ಅಂತ್ಯದಲ್ಲಿ ಭಗವದರ್ಪಣೆಯೂ ಆಗುತ್ತದೆ. ಇಷ್ಟು ಮಾಡಿದರೆ ಕರ್ತವ್ಯಪಾಲನೆಯಾಯಿತು, ಮಾಡದಿದ್ದರೆ ಕ್ರಿಯಾಲೋಪ—ಎಂದು ಭಾವನೆ.

ಇದರಲ್ಲಿ ಸ್ವಕಾರ್ಯವೇನು ಅಕಾರ್ಯವೇನು, ಇದು ಯಾವ ನಟನೆ ಯಾವ ಪ್ರದರ್ಶನ, ಯಾರನ್ನು ವಂಚಿಸುವುದಕ್ಕೆ ಯಾವ ಸ್ವತ್ತನ್ನಪಹರಿಸುವುದಕ್ಕೆ, ಮಾಡುವುದು ಎಂಬುದನ್ನು ವಿವೇಚನೆ ಮಾಡಬೇಕು. ಅಂತರಂಗದಲ್ಲಿ ಶುದ್ಧವಾದ ಭಕ್ತಿ ಶ್ರದ್ಧೆಯಿಲ್ಲದಿದ್ದರೆ ಯಾರಾದರೂ ಇಷ್ಟು ಶ್ರಮಪಡುತ್ತಿದ್ದರೋ, ಎಲ್ಲಾದರೂ ಇಷ್ಟು ಸಡಗರವಿರುತ್ತಿದ್ದಿತೋ, ಇಂಥಾ ಯಮನಿಯಮಗಳು ಸಾಧ್ಯವಾಗುತ್ತಿತ್ತೋ ಎಂಬುದೂ ಗಮನೀಯವೇ. ಅಹಂಕಾರ ಮಮಕಾರಗಳಿಲ್ಲದೆ, ರಾಗದ್ವೇಷರಹಿತವಾಗಿ, ಫಲಾಪೇಕ್ಷೆಯನ್ನು ವರ್ಜ್ಯಮಾಡಿ, ನಿಯತವಾದ ಕಾರ್ಯವೆಂದು ಮಾಡುವುದು ಸಾತ್ವಿಕವು.[3] ಅಹಂಕಾರದಿಂದ ಫಲಾಪೇಕ್ಷೆಗಾಗಿ ದೇಹ ಶ್ರಮಪಟ್ಟು ಮಾಡುವ ರಾಜಸವಲ್ಲ.[4] ಪರಿಣಾಮವೇನು, ಧನದ್ರವ್ಯಕಾಯಶಕ್ತಿಗಳ ವ್ಯಯವೆಷ್ಟು, ಪರಪೀಡೆಯೆಷ್ಟಾಗುವುದು, ನಮಗೆ ಮಾಡುವ ಸಾಮರ್ಥ್ಯವಿದೆಯೇ ಇಲ್ಲವೇ, ಎಂದು ಯಾವುದನ್ನೂ ಪರ್ಯಾಲೋಚಿಸದೆ ಮೋಹಾವಿಷ್ಟರಾಗಿ ಮಾಡುವ ತಾಮಸದ[5] ಛಾಯೆಯೂ ಇದರಲ್ಲಿಲ್ಲ. ತಮಗೆ ಸಮರ್ಪಕವಾದ ಉಪಚಾರಗಳನ್ನು ಸಮರ್ಪಿಸುವುದಕ್ಕೂ ಅವಶ್ಯವಾಗಿ ಅಭ್ಯಾಸ ಮಾಡಬೇಕಾದ ಚಿತ್ತೈಕಾಗ್ರತ್ವದ ಸಾಧನೆಗೂ ಒಂದು ವಿಗ್ರಹವನ್ನೋ ಚಿಹ್ನೆಯನ್ನೋ ಸ್ಥಾಪಿಸಿದ ಮಾತ್ರದಿಂದ ಸಾತ್ವಿಕತ್ವವೂ ನಿಷ್ಕಾಮತ್ವವೂ ಭಕ್ತಿಭಾವನೆಯೂ ಲೋಪವಾಗುವುದಿಲ್ಲ. ಮನೆಯ ದೇವರಿಗೆ ಕುಟುಂಬದವರು ಭಕ್ತರಾದರೆ ಗುಡಿಯ ದೇವರಿಗೆ ದೇಶದೇಶಾಂತರದವರೆಲ್ಲರೂ ಭಕ್ತರು ಈ ಭಕ್ತಿಯೇನೂ ಹುಚ್ಚಲ್ಲ ಬೆಪ್ಪಲ್ಲ ಮೌಢ್ಯವಲ್ಲ ಮೌರ್ಖ್ಯವಲ್ಲ, ಲೀಲೆಯಲ್ಲ ಲೋಲುಪತ್ವವಲ್ಲ. ಒಬ್ಬಿಬ್ಬರಿಗೆ ಹುಚ್ಚು ಹಿಡಿಯಬಹುದು, ಹತ್ತಿಪ್ಪತ್ತು ಮಂದಿ ಬೆಪ್ಪರಿರಬಹುದು, ಮೂಢರೂ ಪ್ರಚುರವಾಗಿಯೇ ಇರಬಹುದು, ಮೂರ್ಖರಿಗೂ ಲೋಕದಲ್ಲಿ ಕಡಿಮೆಯಿಲ್ಲ, ಜನ ಜನಾಂಗಕ್ಕೇ ಹುಚ್ಚೂ ಬೆಪ್ಪೂ ಹಿಡಿಯುವುದಿಲ್ಲ, ಹುಚ್ಚೂ ಬೆಪ್ಪೂ ಆರ್ಷೇಯವಾಗಿರುವುದೂ ಇಲ್ಲ. ಸಮಾಜ ಸಮಾಜವೇ

3 ನಿಯತಂ ಸಂಗರಹಿತಮರಾಗದ್ವೇಷತಃ ಕೃತಂ । ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ವಿಕಮುಚ್ಯತೇ ॥ ಭ. ಗೀ. ॥

4 ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ । ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ ॥ ಭ-ಗೀ. ॥

5 ಅನುಬಂಧಂ ಕ್ಷಯಂ ಹಿಂಸಾಮನವೇಕ್ಷ್ಯ ಚ ಪೌರುಷಂ । ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥ ಭ. ಗೀ. ॥

ಮೂಢರಿಂದಲೂ ಮೂರ್ಖರಿಂದಲೂ ತನ್ಮಯವಾಗಿರುವುದಿಲ್ಲ. ಮೌಢ್ಯವೂ ಮೌರ್ಖ್ಯವೂ ಶಾಶ್ವತವೂ ಅಲ್ಲ, ಏಕಪ್ರಕಾರವಾದುದೂ ಅಲ್ಲ. ಸ್ವಾರ್ಥತ್ಯಾಗದಿಂದ ನಿತ್ಯವೂ ಆವೃತ್ತಿ ಮಾಡುವುದು ಲೀಲೆಯೂ ಲೋಲುಪತ್ವವೂ ಸರ್ವಥಾ ಅಲ್ಲ. ಅಲ್ಪಾನಂತವನ್ನೂ ವ್ಯಕ್ತಿಸಮಾಜವನ್ನೂ ಸಾಮಾನ್ಯವಿಶೇಷವನ್ನೂ ಸಂಕರ ಮಾಡಿ ಚಿಕ್ಕದರ ಸ್ಥಿತಿಯನ್ನು ದೊಡ್ಡದಕ್ಕಾರೋಪಿಸುವುದು ನ್ಯಾಯವಲ್ಲ. ಆಕಾಶದಿಂದ ಬೀಳುವ ನೀರೆಲ್ಲವೂ ಹೇಗೆ ಸಮುದ್ರಗಾಮಿಯೋ, ಹಾಗೆಯೇ ಎಲ್ಲಾ ದೇವರ ನಮಸ್ಕಾರವೂ ಕೇಶವನಿಗೇ ಅರ್ಪಿತವಾಗುವುದೆಂದು ನಿತ್ಯವೂ ಒರಲಿಸುತ್ತೇವೆ.[6] ಯಾರು ಯಾವ ಪ್ರಕಾರವಾಗಿ ಧ್ಯಾನಮಾಡುತ್ತಾರೋ ಅದೇ ರೀತಿಯಲ್ಲಿ ಅವರಿಗೆ ನಾನು ಕಾಣಿಸಿಕೊಳ್ಳುತ್ತೇನೆ[7] ಎಂದು ಭಗವದ್ವಚನವಿದೆ. "ಮಹಾಜನೋಯೇನ ಗತಸ್ಸಪಂಥಾಃ"[8] ಮಹಾಜನರು ನಡೆಯುವ ಮಾರ್ಗವೇ ಸನ್ಮಾರ್ಗವೆಂದು ಯುಧಿಷ್ಠಿರವಾಕ್ಯವೂ ಇದೆ. ಇವೆಲ್ಲವೂ ಮಿಥ್ಯೆಯಾಗುವ ಪಕ್ಷಕ್ಕೆ ಅಜ್ಞಾತ ಮೂಲವೂ ಸಂಶಯಾತ್ಮಕವೂ ಆದ ಅನಾಪ್ತರ ವಚನದಲ್ಲಿಯೂ ಸಂಪ್ರದಾಯ ದಲ್ಲಿಯೂ ಶ್ರದ್ಧಾಬುದ್ಧಿಯು ಸಾಧ್ಯವೇ ಅಲ್ಲ.

ಈ ಪರ್ಯಾಯವೇಕೆ ? ನಿರ್ಗುಣನನ್ನೂ ನಿಷ್ಕ್ರಿಯನನ್ನೂ ನಿರಾಕಾರನನ್ನೂ ಏಕೆ ಯಥಾವತ್ತಾಗಿ ಆರಾಧಿಸಬಾರದು ಎಂದು ಕೇಳಬಹುದು. ಅದು ಸಾಧ್ಯಾಸಾಧ್ಯ ವಿಷಯ, ಸಮರ್ಥಾಸಮರ್ಥ ವಿಚಾರ. ಉಪಾಸಕನು ಸಮರ್ಥನಾಗಿ ಸಾಧ್ಯವೂ ಆದರೆ ನಿರ್ಗುಣೋಪಾಸನೆಯನ್ನೇ ಮಾಡಬೇಕು. ಅದು ಯಾರೋ ಒಬ್ಬಿಬ್ಬರು ಯೋಗಸಿದ್ಧರಿಗೆ ಸಾಧ್ಯ, ಸಾಮಾನ್ಯರಿಗಲ್ಲ. ಸಾಧಾರಣರು ಸಮರ್ಥರಲ್ಲ, ಸಮರ್ಥರಲ್ಲದವರಿಗೆ ಸಾಧ್ಯವಲ್ಲ, ಅಸಾಧ್ಯವನ್ನು ಮಾಡುವಹಾಗಿಲ್ಲ ಎಂದು ಅಸಮರ್ಥಮಹಾಜನರೆಲ್ಲರೂ ಉಪಾಸನೆಯನ್ನೇ ಉಪೇಕ್ಷೆ ಮಾಡಬೇಕಾದ ಗತಿ ಯೊದಗುತ್ತದೆ ಭಕ್ತಿಯೋಗದಲ್ಲಿ ಪಾರಂಗತರಾದ ಮಧುಸೂದನ ಸರಸ್ವತಿಗಳು ಸಮಸ್ಯೆಯನ್ನು ಹೀಗೆ ಬಿಡಿಸಿದ್ದಾರೆ:—ಧ್ಯಾನಾಭ್ಯಾಸಗಳಿಂದ ಮನಸ್ಸನ್ನು ವಶೀ ಕರಣ ಮಾಡಿಕೊಂಡ ಯೋಗೀಶ್ವರರು ಆ ಅನಿರ್ವಚನೀಯವೂ ನಿರ್ಗುಣವೂ ನಿಷ್ಕ್ರಿಯವೂ ಅದ ಪರಂಜ್ಯೋತಿಯನ್ನು ಸಾಕ್ಷಾತ್ಕರಿಸಿದರೆ ಕರಿಸಲಿ. ನಮ ಗಾದರೋ ಕಾಲಿಂದೀ ಪುಲಿನದ ಮೇಲೆ ಓಡಾಡುವ ಆ ನೀಲವರ್ಣದ ಜ್ಯೋತಿಯು ಲೋಚನ ಚಮತ್ಕಾರಕ್ಕೆ ಚಿರಕಾಲಪರ್ಯಂತ ಸ್ಥಿರವಾಗಿರಲಿ ಎಂದು.[9] ಮಂದಾಧಿ

6 ಆಕಾಶಾತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ। ಸರ್ವದೇವನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥

7 ಯೇ ಯಥಾ ಮಾಂ ಪ್ರಪದ್ಯಂತೇ ತಾಂ ಸ್ತಥೈವ ಭಜಾಮ್ಯಹಂ ॥ಭ.ಗೀ.॥

8 ಮ.ಭಾ—ಆದಿಪರ್ವ—ಸ್ವಯಂವರ ಪ್ರಕರಣ ॥

9 ಧ್ಯಾನಾಭ್ಯಾಸವಶೀಕೃತೇನ ಮನಸಾ ತನ್ನಿರ್ಗುಣಂ ನಿಷ್ಕ್ರಿಯಂ ಜ್ಯೋತಿಃ ಕಿಂಚನ ಯೋಗಿನೋ ಯದಿ ಪರಂ ಪಶ್ಯಂತಿ ಪಶ್ಯಂತು ತೇ। ಅಸ್ಮಾಕಂ ತು ತದೇವ ಲೋಚನಚಮತ್ಕಾರಾಯ ಭೂಯಾಚ್ಚಿರಂ ಕಾಲಿಂದೀಪುಲಿನೇಷು ಯತ್ಕಿಮಪಿ ತನ್ನೀಲಂ ಮಹೋ ಧಾವತಿ॥

ಕಾರಿಗಳಿಗೆ ಅನುಷ್ಠಾನಾಂತರದಿಂದ ಸಂಸ್ಕಾರವನ್ನು ಕೊಟ್ಟು ಕ್ರಮವಾಗಿ ಸಮರ್ಥರನ್ನು ಮಾಡುವುದಕ್ಕೋಪರ್ಯಾಯವು. ಮಹಾಪ್ರವಾಹವನ್ನು ದಾಟಬೇಕು–ಅದಕ್ಕೆ ಈಜುವುದನ್ನು ಅಭ್ಯಾಸಮಾಡಬೇಕು. ಮೊದಲು ಬೆಂಡುಬುರುಡೆಯ ಆಸರೆಯಿಂದ ಕಲಿಯಬೇಕು, ಅಲ್ಪಜಲದಲ್ಲಿ ನಿಂತ ಜಲದಲ್ಲಿ ಆರಂಭಿಸಬೇಕು. ಬರಬರುತ್ತಾ ಬೆಂಡುಬುರುಡೆಯನ್ನು ಬಿಟ್ಟು ಈಜಬೇಕು, ಅದು ಬಂದಮೇಲೆ ಜಲಸ್ರೋತದಲ್ಲಿ ಅಭ್ಯಾಸಮಾಡಬೇಕು. ಚೆನ್ನಾಗಿ ಬಂದಮೇಲೆ ಪ್ರವಾಹದಲ್ಲಿ ಕಲಿಯಬೇಕು. ಏನೂ ಬಾರದೆ ಮೊದಲೇ ಮಹಾಪ್ರವಾಹಕ್ಕೆ ಇಳಿದರೆ ಆಗುವುದು ಕಂಡೇ ಇದೆ ಬೆಂಡುಬುರುಡೆಗಳ ಸಹಾಯದಿಂದ ತೇಲುವುದರಿಂದ ಈಜು ಬರುವುದೋ ಎಂದು ಕೇಳಿದರೆ ಹಾಗೆಯೇ ಪ್ರವಾಹಕ್ಕೆ ಧುಮ್ಮಿಕ್ಕಿದರೆ ಉಳಿವ ಸಂಭವವಿದೆಯೋ ಎಂದು ಪ್ರಶ್ನೆಮಾಡಬೇಕಾಗುವುದು. ಇಂಥಾ ಸಂಶಯ ಸಂದೇಹಗಳಲ್ಲೇ ಪರಿಭ್ರಮಿಸುತ್ತಿದ್ದರೆ ಪ್ರಗತಿಯು ಸಾಧ್ಯವೇ ಇಲ್ಲ. ಸಗುಣೋಪಾಸನೆಯು ನಿರ್ಗುಣೋಪಾಸನೆಗೆ ಫಲಕಾರಿಯಾದ ಸಾಧನವು, ಪರಮಪದಪ್ರಾಪ್ತಿಗೆ ಅನುಕೂಲವಾದ ಸೋಪಾನಮಾರ್ಗವು, ಭಾವಪುಷ್ಟೀಕರಣದ ಅಭ್ಯಾಸವು.

ಇಷ್ಟೆಲ್ಲವೂ ಉಕ್ತಿಪ್ರತ್ಯುಕ್ತಿಗಳಾದವು ಪ್ರಾಸಂಗಿಕವಾಗಿ ಅರ್ಚನೆಯ ತತ್ತ್ವವೂ ಲಕ್ಷಣವೂ ಅಷ್ಟಿಷ್ಟು ನಿರ್ದೇಶವಾಯಿತು ಅರ್ಚನೆಯ ಸಾರವೇನೆಂದರೆ ಸಂಧ್ಯಾವಂದನಾದಿಗಳಂತೆ ಇದೂ ಒಂದು ವಿಧಿಯಾದ ನಿಷ್ಕಾಮಕರ್ಮ, ಪರಮೇಶ್ವರ ಪ್ರೀತ್ಯರ್ಥವಾಗಿಯೇ ಆಚರಿಸುವುದು ನಿಷ್ಕಾಮಕರ್ಮವಾದುದರಿಂದಲೇ ಆರಾಧನೆಗೆ ಭಕ್ತಿಶ್ರದ್ಧೆಯು ಮುಖ್ಯ, ಕಾಲದ್ರವ್ಯಗಳ ಕಾರ್ಯಕಲಾಪಗಳ ವಿಪುಲತ್ವವಲ್ಲ. ಪತ್ರ ಪುಷ್ಪಫಲಜಲಗಳನ್ನು ಭಕ್ತಿಯಿಂದ ಸಮರ್ಪಿಸಿದರೆ ಅದನ್ನು ನಾನು ಸಂತೋಷದಿಂದ ಸ್ವೀಕರಿಸುತ್ತೇನೆಂದು ಭಗವಂತನು ವಚನವನ್ನಿತ್ತಿದ್ದಾನೆ.[10] ದೇವಕಾರ್ಯವು ಪ್ರಮಾದದಿಂದ ನಿಲ್ಲದಹಾಗೆ ಜಾಗರೂಕರಾಗಬೇಕೆಂದು ಶ್ರುತಿಯಿದೆ[11] ಪ್ರತಿದಿನವೂ ದೇವತಾರ್ಚನೆಯನ್ನು ಮಾಡಬೇಕೆಂದು ಸ್ಮೃತಿವಾಕ್ಯವೂ ಇದೆ.[12] ಅದರಿಂದ ನಮಗದು ಸ್ವಧರ್ಮವು. ಇವು ಶಾಸ್ತ್ರದ ಮಾತಾಯಿತು. ಲೋಕಾಚಾರವೂ ಇದನ್ನೇ ಸಮರ್ಥಿಸುವುದು ನಮ್ಮ ಪೂರ್ವಿಕರೆಲ್ಲರೂ ನಿತ್ಯವೂ ಮಾಡುತ್ತಲೇ ಬಂದಿದ್ದಾರೆ, ಪ್ರಸಿದ್ಧವಾದ ದೇವಾಲಯಗಳನ್ನು ನಿರ್ಮಿಸಿಟ್ಟಿದ್ದಾರೆ. ಈಗಲೂ ಸರ್ವರೂ ಅರ್ಚನೆಯಲ್ಲಿ ನಿರತರಾಗಿದ್ದಾರೆ. ದೇವಾಲಯಗಳನ್ನು ಕಟ್ಟಿಸುವುದೊಂದು ಪುಣ್ಯದ ಕೆಲಸವೆಂದು ಭಾವನೆ, ಸಪ್ತವಿಧ ಸಂತಾನದಲ್ಲೊಂದೆಂದು ಭಾವನೆಯಿದೆ.

---

10 ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ । ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ಭ. ಗೀ.॥

11 ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ ॥ತೈ. ಉ.॥

12 ಸಂಧ್ಯಾ ಸ್ನಾನಂ ಜಪೋ ಹೋಮಃ ದೇವತಾನಾಂ ಚ ಪೂಜನಂ । ಆತಿಥ್ಯಂ ವೈಶ್ವದೇವಂ ಚ ಷಟ್ಕರ್ಮಾಣಿ ದಿನೇ ದಿನೇ ॥ಪರಾ-i ॥

ಅನಾದಿಯಿಂದ ಒಂದೇ ಸಮವಾಗಿ ನಡೆದುಬಂದು ಊರ್ಜಿತವಾಗಿ ನಿಂತಿರುವ ಸಂಪ್ರದಾಯವು ನಿಜವಾಗಿಯೂ ವಿಭೂತಿಮತ್ತಾದುದು.[13] ಹಿಂದೂ ಜನ ಜನಾಂಗಕ್ಕೇ ಪ್ರಿಯವಾದ ಸಂಪ್ರದಾಯವಿದು. ದೇವರು ಕೊಟ್ಟ ಅನ್ನ ಜಲವನ್ನೂ ಫಲಪುಷ್ಪಗಳನ್ನೂ ದೇವರಿಗರ್ಪಿಸಿ ದೇವತ್ವಕ್ಕೆ ಗೌರವವನ್ನು ಸಲ್ಲಿಸಿ ಪ್ರಸಾದರೂಪ ದಲ್ಲಿ ನಾವು ಉಪಭೋಗಿಸುತ್ತೇವೆ. ಹಾಗೆ ಮಾಡದೆ ಉಪಭೋಗಿಸುವುದು ಅಪಹಾರ ವಾಗುವುದು.[14] ಈ ಸಂಪ್ರದಾಯದಲ್ಲಿನ್ನೂ ಸೂಕ್ಷ್ಮವಿದೆ. ಸ್ನಾನಸಂಧ್ಯಾದಿಗಳು ಆತ್ಮಾರ್ಥವಾದರೆ, ದೇವತಾರ್ಚನೆಯು, ಮನೆಯಲ್ಲಿ ಕುಟುಂಬದ ಆಬಾಲವೃದ್ಧಾದಿ ಗಳೆಲ್ಲರ ಪರವಾಗಿ ಒಬ್ಬನು ಮಾಡುವುದು, ಗುಡಿಯಲ್ಲಿ ಸ್ತ್ರೀಯರು ಬಾಲರು ಅಂಧರು ಜಡರು ಆದಿಯಾಗಿ ಸಮಷ್ಟಿಸಮಾಜದ ಶ್ರೇಯಸ್ಸಿಗಾಗಿ ನಡೆಯುವುದು. ಇಂಥಾ ಸಂಪ್ರದಾಯವು ನಮಗೆ ಅನುಷ್ಠೇಯವು. ನಮ್ಮಲ್ಲಿಯೂ ತಥ್ಯವನ್ನು ಮಿಥ್ಯದಿಂದ ಪೃಥಕ್ಕರಿಸಲು ಸಮರ್ಥರಾದ ಮೇಧಾವಿಗಳು ಬಹುಸಂಖ್ಯೆಯಲ್ಲಿರುತ್ತಾ ಬಂದಿದ್ದಾರೆ. ಅಷ್ಟೊಂದು ಮಂದಿ ಘಟಕರಿಗೆ ಒಪ್ಪಿಗೆಯಾಗಿ ಅವರ ಅನುಷ್ಠಾನ ದಲ್ಲೂ ಇದ್ದು ಅವರು ರಚಿಸಿದ ಪ್ರಾಯೋಗಿಕ ವಿಧಾನದಿಂದ ರೂಪಗೊಂಡ ಸಂಪ್ರ ದಾಯದಲ್ಲಿ ಸತ್ತ್ವವೂ ಮಹತ್ತ್ವವೂ ಇದ್ದೇ ಇದೆ, ಇಲ್ಲದಿದ್ದರೆ ಅಂಥಾ ಮೇಧಾವಿ ಗಳ ತರ್ಕಕ್ಕೆ ಸಿಕ್ಕಿ ಎಂದೋ ಅಳಿದುಹೋಗುತ್ತಿತ್ತು.

ಪರಮಾತ್ಮನೊಬ್ಬನೇ ಇರುವವನು, ದ್ವಿತೀಯನಿಲ್ಲವೇ ಇಲ್ಲ.[15] ಅವನು ನಿರ್ಗುಣನೇ ನಿಷ್ಕ್ರಿಯನೇ ನಿರಾಕಾರನೇ ನಿರ್ವಿಕಾರನೇ ಅವ್ಯಕ್ತಾಚಿಂತ್ಯನೇ ಸಚ್ಚಿದಾನಂದಾತ್ಮನೇ. ಅವನ ವಿಷಯದಲ್ಲಿ ಆರಾಧನೆಯೆಂಬ ಸಕರ್ಮಕ ಕ್ರಿಯೆಗೆ ಅವಕಾಶವೇ ಇಲ್ಲ. ಅದು ಪರಮಾರ್ಥ ವಿಚಾರ. ವ್ಯಾವಹಾರಿಕದಲ್ಲಿ ಅರ್ಚನೆ ಅಭಿವಾದನೆ ಮುಂತಾದ ಸಕರ್ಮಕ ಕ್ರಿಯೆಗಳಿಗೆ ಅವಕಾಶವಿದೆ, ಕರ್ತೃಕರ್ಮಗಳ ಅಪೇಕ್ಷೆಯಿದೆ, ಪೂಜ್ಯಪೂಜಕಭಾವನೆಯೂ ಇದೆ. ವಿಧವಿಧವಾದ ಭೇದಭಾವ ಸ್ವಭಾವದವರಿಗೆ ಸಗುಣೋಪಾಸನೆಯು ವಿಧಾಯಕವಾಗಿದೆ. ಮನಸ್ಸು ಸ್ವಾಭಾವಿಕ ವಾಗಿ ಚಂಚಲವಾದುದು,[16] ಅದರ ಭಾವನೆಗಳೂ ಚಂಚಲಗಳೇ. ಮನಸ್ಸು ಸ್ಥಿರ ವಾಗಿ ನಿಲ್ಲಬೇಕಾದರೆ ಯಾವುದಾದರೊಂದು ಪ್ರಿಯವೋ ಹಿತವೋ ಮಹತ್ವ ವಿಶಿಷ್ಟವೋ ಆದ ವಿಷಯದ ಸದ್ಭಾವವು ಬೇಕೇ ಬೇಕು. ಅದರಿಂದ ಮೊದಮೊದಲು

---

13 ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ । ತತ್ತದೇವಾವಗಚ್ಛ ತ್ವಂ ಮಮ ತೇಜೋಂಶಸಂಭವಂ ॥ಭ.ಗೀ.॥

14 ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ । ತೈರ್ದತ್ತಾನ ಪ್ರದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ ॥ಭ.ಗೀ.॥

15 ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ ಬ್ರಹ್ಮ ॥ಛಾಂ.ಉ॥

16 ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ । ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ಭ.ಗೀ.॥

ಭೌತಿಕವಿಗ್ರಹಗಳಲ್ಲಿ ಭಾವನೆಯನ್ನು ಸ್ಥಿರೀಕರಿಸುವುದಕ್ಕಾಗಿ ವಿಗ್ರಹಾರಾಧನೆಯು. ಇರುವವರಷ್ಟೇ ಮುಂದಿ ಇದ್ದಿದ್ದರೆ ಪ್ರಗತಿಯು ನಿತ್ಯವಾಗುತ್ತಿತ್ತು. ಹೊಸ ಹೊಸ ಸಂತಾನಗಳು ಇರುವಷ್ಟು ಸಂಖ್ಯೆಯಲ್ಲಿಯೇ ಜನಿಸುತ್ತಾ ಹೋಗುವುದರಿಂದ ಮೊದ ಲೆಂಬುದೂ ಒಂದು ಶಾಶ್ವತವಾದ ಸೃಷ್ಟಿನಿಯಮವು. ಅದಕ್ಕಾಗಿ ಅರ್ಚನೆಯ ಸಂಪ್ರದಾಯವು ಸತತವಾಗಿ ನಡೆಯುತ್ತಲೇ ಇರಬೇಕು, ಪ್ರಗತಿಯನ್ನು ಪಡೆದ ವಿಜ್ಞರೂ ಅಜ್ಞರಿಗಾಗಿ ಅದನ್ನಾಚರಿಸುತ್ತಿರಬೇಕು.[17]

ವಿಗ್ರಹಗಳ ಸ್ವರೂಪವನ್ನೂ ವಿಮರ್ಶಿಸೋಣ. ರೂಪವನ್ನೂ ನಾಮವನ್ನೂ ಕಲ್ಪಿಸುವ ಕಾರ್ಯವನ್ನು ವ್ಯಕ್ತಿಯ ಐಚ್ಛಿಕಕ್ಕೇ ಬಿಟ್ಟರೆ ಯಾರುಯಾರಿಗೆ ಯಾವು ಯಾವುದು ಇಷ್ಟವೋ, ಅಥವಾ ಯಾವಯಾವಾಗ ಯಾವುಯಾವುದು ಪ್ರಿಯವೋ, ಅದದನ್ನೇ ಕಲ್ಪಿಸಿಕೊಳ್ಳುತ್ತಾ ಹೋಗುತ್ತಾರೆ. ಅದರಿಂದ ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ನಿತ್ಯವೈವಿಧ್ಯಗಳು ಪ್ರಾಪ್ತವಾಗುತ್ತಾ ಅನನ್ವಯಕ್ಕೂ ಯಥಾಯಥಕ್ಕೂ ಇಟ್ಟುಕೊಳ್ಳುತ್ತದೆಯಾಗಿ ನಿತ್ಯಾರಂಭದಲ್ಲೇ ಪರಿಭ್ರಮಿಸುತ್ತಿರ ಬೇಕಾಗುತ್ತದೆ; ಸ್ಥಿರತ್ವಶಾಶ್ವತತ್ತ್ವಗಳಿಗೆ ಅವಕಾಶವೇ ಇರುವುದಿಲ್ಲ. ಅದಕ್ಕಾಗಿ ವ್ಯಕ್ತಿಸ್ವಾತಂತ್ರ್ಯಕ್ಕೆ ಬಿಡದೆ ದೂರದರ್ಶಿಗಳಾದ ಮಹಾತ್ಮರು ಹಲವು ವಿಶೇಷರೂಪ ಗಳನ್ನಾರಿಸಿ ತಾವೂ ಸೇವಿಸಿ ಸಿದ್ಧಪಡಿಸಿಟ್ಟಿದ್ದಾರೆ. ಆ ರೂಪವಿಶೇಷಗಳಲ್ಲೊಂದನ್ನೋ ಕೆಲವನ್ನೋ ಲಿಂಗಲಾಂಛನವಾಗಿಟ್ಟುಕೊಂಡು ಆರಾಧಿಸಬೇಕು. ಯಾವುದೋ ದೇವರ ನಾಮರೂಪವನ್ನಾಗಲೀ, ದೇವರ ಯಾವುದೋ ನಾಮರೂಪವನ್ನಾಗಲೀ ಅರ್ಚಿಸುವುದಿಲ್ಲ. ಸಿದ್ಧಪಡಿಸಿರುವ ರೂಪಗಳು ಆಕರ್ಷಣೀಯವೂ, ಕಾಮಕ್ರೋಧ ಗಳನ್ನು ಬಿಡಿಸುವುವೂ, ಭಕ್ತಿಶ್ರದ್ಧೆಯನ್ನಭಿವೃದ್ಧಿ ಮಾಡುವುವೂ ಭಯವಿಸ್ಮಯ ಗಳಿಗಾಕರವೂ, ಶಮಸಾಂತ್ವಗಳಿಗೆ ಆದರ್ಶವೂ, ಆದುವು; ಅಸುರೀಭಾವದ ಪರಮಾ ವಧಿಗೇರಿ ಅತಿ ದೃಪ್ತರೂ ದುಷ್ಟರೂ ಬಲಿಷ್ಠರೂ ಆದ ಅಸುರರನ್ನು ನಿಗ್ರಹಿಸಿದ ಪರಮಾತ್ಮನ ಮಹಾಸತ್ತ್ವಯುಕ್ತವಾದ ಅವತಾರಸ್ವರೂಪದವೂ ಆದುವು.[18] ಮೂರು ಲೋಕವನ್ನು ಜಯಿಸಿ ಇಂದ್ರಾದಿಗಳನ್ನುರುಳಿಸಿ ಭಕ್ತಶಿರೋಮಣಿಯಾದ ಪ್ರಹ್ಲಾದ ನನ್ನು ಘೋರವಾಗಿ ಹಿಂಸಿಸಿದ ಹಿರಣ್ಯಕನನ್ನು ಉಕ್ಕಿನ ಕಂಭವನ್ನು ಭೇದಿಸಿ ಕೊಂಡು ಬಂದು ಸೀಳಿಹಾಕಿ ಭಕ್ತನನ್ನುದ್ಧರಿಸಿದ ನೃಸಿಂಹದೇವನನ್ನೂ, ಮಾನವನ

---

17 ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಸ್ಸಮಾಚರನ್ ॥ಭ. ಗೀ.॥

18 ಯ ಏವ ದೇವಾ ಹಂತಾರಸ್ತಾನ್ ಲೋಕೋऽರ್ಚಯತೇ ಭೃಶಂ। ಹಂತಾ ರುದ್ರಸ್ತಥಾ ಸ್ಕಂದಶ್ಶಕ್ರೋಽಗ್ನಿರ್ವರುಣೋ ಯಮಃ ॥ ಹಂತಾ ಕಾಲಸ್ತಥಾ ಮೃತ್ಯುರ್ವಾಯುರ್ವೈಶ್ರವ ಣೋ ರವಿಃ । ವಸವೋ ಮರುತಸ್ಸಾಧ್ಯಾ ವಿಶ್ವೇದೇವಾಶ್ಚಭಾರತ ॥ ಏತಾನ್ ದೇವಾನ್ನಮ ಸ್ಯಂತಿ ಪ್ರತಾಪಪ್ರಣತಾ ಜನಾಃ । ನ ಬ್ರಹ್ಮಾಣಂ ನ ಧಾತಾರಂ ನ ಪೂಷಾಣಂ ಕಥಂಚನ ॥ ಮಧ್ಯಸ್ಥಾನ್ ಸರ್ವಭೂತೇಷು ದಾಂತಾನ್ ಶಮಪರಾಯಣಾನ್ । ಯಜಂತೇ ಮಾನವಾಃ ಕೇಚಿತ್ಪ್ರಶಾಂತಾಸ್ಸರ್ವಕರ್ಮಸು ॥ಮ. ಭಾ-ಶಾಂತಿಪ.—ರಾಜಧರ್ಮ॥

ಚಿತ್ತದಂತೆ ಅತಿ ಚಪಲಪ್ರಕೃತಿಯ ಕಪಿಗಳನ್ನು ಶಿಸ್ತಿನಿಂದ ಕಟ್ಟಿ ವಾಹಿನಿಯನ್ನು ರಚಿಸಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸಿ ರಾಕ್ಷಸರನ್ನು ಕೊಲ್ಲಿಸಿ, ಅತಿಕಾಮಿಯಾದ ದಶಗ್ರೀವನನ್ನು ತಾನೂ ಸಂಹರಿಸಿದ, ಕೋಪದಲ್ಲಿ ಕಾಲಾಗ್ನಿಗೂ ಕ್ಷಮೆಯಲ್ಲಿ ಪೃಥಿವಿಗೂ ಸಮನಾದ, ಸತ್ಯಸಂಧ ಶ್ರೀರಾಮಚಂದ್ರನ ಗಂಭೀರಮೂರ್ತಿಯನ್ನೂ, ಗೊಲ್ಲನಂತೆ ಗೋವುಗಳನ್ನು ಕಾಯ್ದು, ಗವ್ಯಸಮೃದ್ಧಿಯನ್ನು ಮಾಡಿ, ಹೀಗೆ ತಿನ್ನಬೇಕೆಂದು ಸಾಮಾನ್ಯ ಜನರಿಗೆ ತಿಂದು ತೋರಿಸಿದ, ಉಪನಿಷದ್ರೂಪದ ಗೋವುಗಳಿಂದ ಗೀತಾಮೃತರೂಪದ ದುಗ್ಧವನ್ನು ಜ್ಞಾನಿಗಳ ಪ್ರಾಶನೆಗಾಗಿ ಕರೆದಿಟ್ಟ,[19] ಶ್ರೀಕೃಷ್ಣನ ಭವ್ಯರೂಪವನ್ನೂ, ಸಮುದ್ರಮಥನಕಾಲದಲ್ಲಿ ಕಾಲಕೂಟವು ಉದ್ಭವಿಸಿ ಜಗತ್ತೇ ನಿಶ್ಚೇಷ್ಟಿತವಾದಾಗ ಅಭಯವನ್ನಿತ್ತು ಅದನ್ನು ಕಬಲಿಸಿದ,[20] ಜಗತ್ತನ್ನೆಲ್ಲ ಮೋಹಿಸಿ ತನ್ನನ್ನೂ ಅಟ್ಟಿಸಿಕೊಂಡು ಬಂದ ಮನ್ಮಥನನ್ನು ನಿಮಿಷದ ಶತಾಂಶದಲ್ಲಿ ಭಸ್ಮಮಾಡಿದ ಶಂಕರನನ್ನೂ, ಆದಿಶಕ್ತಿಯೂ ಲೋಕಮಾತೆಯೂ ಸರ್ವಮಂಗಳೆಯೂ ಓಂಕಾರಸ್ವರೂಪಿಣಿಯೂ ಆದ ಶಿವೆಯನ್ನೂ, ಮಹಾಕಾಯನೂ ಮಹಾಬಲಿಷ್ಠನೂ ವಿಘ್ನನಿವಾರಕನೂ ಸಿದ್ಧಿದಾಯಕನೂ ಆದ ಗಣಪತಿಯನ್ನೂ, ತಮಸ್ಸನ್ನು ನಿಶ್ಶೇಷಮಾಡಿ ಬುದ್ಧಿಯನ್ನು ಶ್ರೇಯಸ್ಸಿನ ಕಡೆಗೆ ನಡೆಯುವಂತೆ ಪ್ರೇರೇಪಿಸುವ ಆದಿತ್ಯನನ್ನೂ, ಮುಂತಾದ ಆಸುರೀಭಾವ ಭಂಜಕವೂ ದೈವೀಸಂಪತ್ಪ್ರದವೂ ಆದ ಸ್ವರೂಪಗಳನ್ನೂ ಅರ್ಚಿಸುವುದು. ಬ್ರಹ್ಮನನ್ನೂ ಶಂಕರನನ್ನೂ ಆದಿತ್ಯನನ್ನೂ ವಿಷ್ಣುವನ್ನೂ ಅಥವಾ ಅವರವರ ಇಷ್ಟದೇವರನ್ನು ಭಕ್ತಿಯಿಂದ ಮಂತ್ರೋಕ್ತವಾಗಿ ನಿತ್ಯವೂ ಪೂಜಿಸಬೇಕು.[21] (ಬ್ರಹ್ಮನನ್ನು ಪೂಜಿಸುವ ಸಂಪ್ರದಾಯವಿಲ್ಲ; ಮೇಲಿನ ವಚನದಲ್ಲಿದು ಸೂಚಿತವಾಗಿದೆ) ಈ ದೇವರುಗಳೆಲ್ಲ ಪರಮಾತ್ಮನ ಆವಿರ್ಭಾವಗಳೇ. ಸಮಸ್ತ ಭೂತಗಳಲ್ಲಿಯೂ ಪರಮಾತ್ಮನಾದ ನಾನು ಅಂತರ್ಗತನಾಗಿದ್ದೇನೆ, ದ್ವಾದಶಾದಿತ್ಯರಲ್ಲಿ ವಿಷ್ಣುವೂ, ಸ್ವಯಂ ಪ್ರಕಾಶಮಾನವಾದ ಜ್ಯೋತಿಗಳಲ್ಲಿ ಆದಿತ್ಯನೂ, ಏಕಾದಶರುದ್ರರಲ್ಲಿ ಶಂಕರನೂ, ಅಷ್ಟವಸುಗಳಲ್ಲಿ ಪಾವಕನೂ ಸಹ ನಾನೇ ಎಂದು ಭಗವದ್ವಾಕ್ಯವಿದೆ.[22] ಭಕ್ತನು ಪರಮಾತ್ಮನ ಯಾವ ರೂಪವಿಶೇಷ

19 ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ । ಪಾರ್ಥೋ ವತ್ಸಸ್ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂಮಹತ್ ॥

20 ಪ್ರಕ್ರಾಂತೇ ಗರಳೇ ದ್ರುತೇ ಸುರಗಣೇ ನಿಶ್ಚೇಷ್ಟಿತೇ ವಿಷ್ಟಪೇ ಮಾಭೈಷ್ಟೇತಿ ಗಿರಾಽವಿರಾಸ ಧುರಿ ಯೋ ದೇವಸ್ತಮೇವ ಸ್ತುಮಃ ॥

21 ಬ್ರಹ್ಮಾಣಂ ಶಂಕರಂ ಸೂರ್ಯಂ ತಥೈವ ಮಧುಸೂಧನಂ । ಅನ್ಯಾಂ ಶ್ಚಾಭಿಮತಾನ್ ದೇವಾನ್ ಭಕ್ತ್ಯಾ ಚಾಕ್ರೋಧನೋಽರ್ಚಯೇತ್॥ ಸ್ವೈರ್ಮಂತ್ರೈರರ್ಚಯೇನ್ನಿತ್ಯಂ ಪತ್ರೈಃ ಪುಷ್ಪೈಸ್ತಥಾಂಬುಭಿಃ ॥ಕೂರ್ಮಪುರಾಣ॥

22 ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ । . .ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್॥ ರುದ್ರಾಣಾಂ ಶಂಕರಶ್ಚಾಸ್ಮಿ .। ವಸೂನಾಂ ಪಾವಕಶ್ಚಾಸ್ಮಿ ॥ಭ.ಗೀ.॥

ವನ್ನು ಶ್ರದ್ಧೆಯಿಂದ ಅರ್ಚಿಸುವನೋ ಅವನಿಗಾರೂಪದಲ್ಲಿಯೇ ಶ್ರದ್ಧೆಯು ಹುಟ್ಟಿ ಅದನ್ನೇ ಅವನು ಅರ್ಚಿಸುತ್ತಿರುವಂತೆ ವಿಧಾಯಕ ಮಾಡುತ್ತೇನೆ ಎಂದೂ ಭಗವದ್ವಚನವಿದೆ.[23] ಎಲ್ಲಾ ಕರ್ಮಗಳೂ ಜ್ಞಾನದಲ್ಲಿಯೇ ಪರಿಸಮಾಪ್ತವಾಗುವುದು.[24] ಜ್ಞಾನದಿಂದಲೇ ಮುಕ್ತಿಯು.[25] ಜ್ಞಾನಾರ್ಜನೆಗೆ ಸಗುಣೋಪಾಸನೆಯೇ ಸುಲಭವಾದ ಮಾರ್ಗ.[26] ಸಗುಣಬ್ರಹ್ಮನಲ್ಲಿ ಮನಸ್ಸನ್ನೂ ಬುದ್ಧಿಯನ್ನೂ ಸ್ಥಿರವಾಗಿಟ್ಟು ಸಾಯುಜ್ಯವನ್ನು ಪಡೆಯಬೇಕು; (ಇದು ಪರಮಸೋಪಾನವು) ಹಾಗೆ ಸ್ಥಿರವಾಗಿ ನಿಲ್ಲಿಸಲು ಅಸಮರ್ಥನಾದರೆ ಚಿತ್ತವೃತ್ತಿಯನ್ನು ನಿಗ್ರಹಿಸಲು ಯೋಗವನ್ನು ಅಭ್ಯಾಸ ಮಾಡಬೇಕು; (ಇದು ಮಧ್ಯಮಸೋಪಾನವು.) ಅದೂ ಸಾಧ್ಯವಿಲ್ಲದಿದ್ದರೆ ಭಗವತ್ಪ್ರೀತ್ಯರ್ಥವಾಗಿ ದೇವತಾರ್ಚನೆ, ವ್ರತೋಪವಾಸ, ಭಗವನ್ನಾಮಸಂಕೀರ್ತನೆ, ಇತ್ಯಾದಿ ಕರ್ಮಗಳನ್ನಾಚರಿಸಬೇಕು, ಅದರಿಂದಲೂ ಸಿದ್ಧಿಯನ್ನು ಪಡೆಯಬಹುದು; (ಇದು ಆರಂಭಸೋಪಾನವು).[27] ಎಂದು ಭಗವಂತನು ಅನುಗ್ರಹಿಸಿದ್ದಾನೆ. ಇದನ್ನೇ ಮಹರ್ಷಿಗಳು ವ್ಯಕ್ತಪಡಿಸಿದ್ದಾರೆ—ಜಲ ಅಗ್ನಿ ಹೃದಯ ಸೂರ್ಯ ಸ್ಥಲ ಪ್ರತಿಮೆ ಈ ಆರರಲ್ಲೂ ಹರಿಯನ್ನರ್ಚಿಸಬಹುದು. ಯಜ್ಞಮಾಡುವವರಿಗೆ ಅಗ್ನಿಯಲ್ಲಿಯೂ, ವಿದ್ವಾಂಸರಿಗೆ ರವಿಯಲ್ಲಿಯೂ, ಅಲ್ಪಜ್ಞರಿಗೆ ಪ್ರತಿಮೆಯಲ್ಲಿಯೂ, ಯೋಗಿಗಳಿಗೆ ಹೃದಯದಲ್ಲಿಯೂ, ಭಾವಿತಾತ್ಮರಿಗೆ ಸ್ಥಲಜಲದಲ್ಲಿಯೂ ಹರಿಯ ಸದ್ಭಾವವು ಭಾಸವಾಗುವುದು.[28]

ಪ್ರತಿಮೆಗಳು ಎರಕದಿಂದ ತೆಗೆದುದನ್ನು ತೆಗೆದಹಾಗೆಯೇ ಪೂಜಿಸುವುದಿಲ್ಲ. ಶಿಲಾಮಯವಾದುದನ್ನು ಶಿಲ್ಪಿಯು ಕೊಟ್ಟಹಾಗೆಯೇ ಅರ್ಚಿಸುವುದಿಲ್ಲ. ಅಗ್ನಿತಪ್ತ

---

23 ಯೋ ಯೋ ಯಾಂ ಯಾಂ ತನುಂ ಭಕ್ತಶ್ಶ್ರದ್ಧಯಾರ್ಚಿತುಮಿಚ್ಛತಿ। ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ॥ ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ॥ಭ.ಗೀ.॥

24 ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ಭ.ಗೀ.॥

25 ಜ್ಞಾನಾದೇವ ತು ಕೈವಲ್ಯಂ ॥ಶ್ರುತಿ॥

26 ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ। ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ಭ.ಗೀ.॥

27 ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ। ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ॥ ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ। ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ॥ ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ। ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ಭ.ಗೀ.॥

28 ಅಪ್ಸ್ವಗ್ನೌ ಹೃದಯೇ ಸೂರ್ಯೇ ಸ್ಥಂಡಿಲೇ ಪ್ರತಿಮಾಸು ಚ। ಷಟ್ಸ್ವೇತೇಷು ಹರೇಸ್ಸಮ್ಯಗರ್ಚನಂ ಮುನಿಭಿಸ್ಸ್ಮೃತಂ॥ ಅಗ್ನೌ ಕ್ರಿಯಾವತಾಂ ದೇವಃ ರವೌ ದೇವೋ ಮನೀಷಿಣಾಂ। ಪ್ರತಿಮಾಸ್ವಲ್ಪಬುದ್ಧೀನಾಂ ಯೋಗಿನಾಂ ಹೃದಯೇ ಹರಿಃ॥ ತಸ್ಯ ಸರ್ವಗತತ್ವಾಚ್ಚ ಸ್ಥಂಡಿಲೇ ಭಾವಿತಾತ್ಮನಾಂ ॥ಅಗ್ನಿಪುರಾಣ॥

ವಾದುದಕ್ಕೂ ಟಂಕೋಪಹತವಾದುದಕ್ಕೂ ಶಾಂತಿಯನ್ನು ಮಾಡಿ, ಮನೆಯಲ್ಲಿ ಪೂಜಿಸುವವುಗಳಿಗೆ ನಿತ್ಯವೂ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿಯೂ, ಗುಡಿಯಲ್ಲಿ ಅರ್ಚಿಸುವುದಕ್ಕೆ ಪ್ರಾಣಪ್ರತಿಷ್ಠೆ ಮಾಡಿ ಪ್ರತಿಷ್ಠೆ ಮಾಡುವ ಮೂಲಕವೂ, ಅರ್ಚಿಸುವುದು. ರಾಷ್ಟ್ರಧ್ವಜಕ್ಕೆ ಆರೋಹಣ ಮಾಡುವಾಗಲೆಲ್ಲವೂ, ಮಹಾಪುರುಷರ ಭಾವಚಿತ್ರಕ್ಕೆ ಅನಾವರಣ ಮಾಡುವಾಗಲೂ, ಸಂಸ್ಕಾರವಾಗುವಂತೆ ಪ್ರತಿಮೆಗಳಿಗೂ ಸಂಸ್ಕಾರವಾಗುವುದು.

ಉಪಾಸನೆಯನ್ನು ಯುಕ್ತಿಯಿಂದಲೂ ಸಾಧಿಸಬಹುದು. ಜೀವಾತ್ಮ ಪರಮಾತ್ಮರಲ್ಲಿ ಪರಮಾತ್ಮನೇ ದೊಡ್ಡದು. ದೊಡ್ಡದರಲ್ಲಿ ಚಿಕ್ಕದಕ್ಕೆ ಪೂಜ್ಯಭಾವನೆಯಾಗುವುದು ಸಹಜವು. ಪೂಜ್ಯರಲ್ಲಿರುವ ಅನುರಾಗವೇ ಭಕ್ತಿಯು.[29] ಭಕ್ತಿಯೇ ಪೂಜೆಗೆ ಹೇತುವು. ನೈಜಪ್ರವೃತ್ತಿಗನುಗುಣವಾಗಿ ನಡೆಯುವುದೇ ಸುಗಮವು, ಮತ್ಸ್ಯದಂತೆ ಪ್ರವಾಹವನ್ನೆದುರಿಸಿ ಈಜುವುದು ಕಷ್ಟ, ನಾವೆಯಂತೆ ಪ್ರವಾಹದೊಡನೆ ತೇಲಿ ಹೋಗುವುದು ಸುಲಭ, ನಿರ್ಗುಣೋಪಾಸನೆಯು ಕಷ್ಟ, ಸಗುಣೋಪಾಸನೆಯು ಸುಲಭ. ಇದೊಂದು ಯುಕ್ತಿವಾದ. ಇನ್ನೊಂದೇನೆಂದರೆ—ಆತ್ಮಕ್ಕೂ ಜೀವಕ್ಕೂ ಬಿಂಬಪ್ರತಿಬಿಂಬನ್ಯಾಯ. ಆತ್ಮವು ಸತ್ಪದಾರ್ಥವು, ನಿರ್ವಿಕಲ್ಪವಾದುದು. ಜೀವವು ಕೇವಲ ದೃಶ್ಯಮಾನವಾದುದು, ಪ್ರತಿದೇಹಭಿನ್ನವಾದುದು. ಮಾಯಾವಿಷ್ಟಿತವಾದ ಜೀವವು ಶರೀರವನ್ನಾಶ್ರಯಿಸಿ ಸ್ತ್ರ್ಯನ್ನಪಾನಾದಿ ವಿಚಿತ್ರಭೋಗಗಳನ್ನು ಅಪೇಕ್ಷಿಸುತ್ತದೆ. ಪಾದ್ಯಾರ್ಘ್ಯಾಚಮನಸ್ನಾನಾದಿಗಳಿಗೆ ಶುದ್ಧೋದಕವು ಬೇಕು, ಕ್ಷುತ್ಪಿಪಾಸೆಗಳ ಶಮನಕ್ಕೆ ಅನ್ನಪಾನಾದಿಗಳು ಬೇಕು, ಶೀತವಾತ ನಿವಾರಣೆಗೆ ವಸ್ತ್ರಗಳಾಗಬೇಕು, ತಮಸ್ಸನ್ನು ಪರಿಹರಿಸಲು ದೀಪವು ಬೇಕು, ಉಪಭೋಗಗಳಿಗೆ ಗಂಧ ಪುಷ್ಪ ಧೂಪ ತಾಂಬೂಲ ಶಯನಾಸನಗಳಾಗಬೇಕು, ಮೆರೆಯುವುದಕ್ಕೆ ಅಲಂಕಾರಗಳೂ ರಾಜಭೋಗಗಳೂ ಬೇಕು. ಪ್ರತಿಬಿಂಬಕ್ಕೆ ಇವನ್ನು ಸಲ್ಲಿಸುವುದು ಹೇಗೆ? ನೇರವಾಗಿ ಸಲ್ಲಿಸಲಾಗುವುದಿಲ್ಲ, ಬಿಂಬಕ್ಕೆ ಸಲ್ಲಿಸಿದರೆ ಪ್ರತಿಬಿಂಬಕ್ಕೆ ತಾನಾಗಿ ಲಭಿಸುತ್ತದೆ. ಹೀಗೆ ಬಿಂಬಪ್ರತಿಬಿಂಬನ್ಯಾಯದಿಂದ ತನಗೆ ಅಭೀಷ್ಟವಾದುದನ್ನು ಪರಮಾತ್ಮನಿಗೆ ಸಮರ್ಪಿಸಿ ತಾನೇ ಪರ್ಯಾಯದಿಂದ ಪಡೆಯುವುದು. ಹೀಗೆ ಸರ್ವಪ್ರಕಾರದಿಂದಲೂ ಅರ್ಚನೆಯು ಸಮರ್ಥಿಸಲ್ಪಟ್ಟಿದೆ.

## ೨. ಉಪಾಸನ ವಿಧಾನ

ದೇವತಾರ್ಚನೆಯು ಅನೇಕ ವಿಧವಾಗಿದೆ—ಮೊದಲನೆಯದು ಹಸ್ತಪಾದಾದ್ಯವಯಗಳುಳ್ಳ, ನೇತ್ರಶ್ರೋತ್ರಾದೀಂದ್ರಿಯಯುತನಾದ, ಕಿರೀಟಕೌಸ್ತುಭಹಾರಾಂಗದ ಭೂಷಿತನಾದ, ಶಂಖಚಕ್ರಗದಾಪದ್ಮಗಳನ್ನು ಧರಿಸಿದ ಚತುರ್ಭುಜನಾದ

29 ಪೂಜ್ಯೇಷ್ವನುರಾಗೋ ಭಕ್ತಿಃ ॥

ವಿಷ್ಣುಸ್ವರೂಪದಂಥಾ ಅಥವಾ ಬೇರೆ ಇಷ್ಟದೇವಸ್ವರೂಪದಂಥಾ, **ಮೂರ್ತಿಯನ್ನು** ಸ್ಥಾಪಿಸಿ ಅದಕ್ಕೆ ಪ್ರಾಣಪ್ರತಿಷ್ಠೆಯನ್ನು ಮಾಡಿ, ಆತ್ಮವನ್ನೇ ದೇವನೆಂದು ಭಾವಿಸಿ ಆವಾಹನ ಆಸನ ಪಾದ್ಯ ಅರ್ಘ್ಯ ಆಚಮನ ಸ್ನಾನ ವಸ್ತ್ರ ಯಜ್ಞೋಪವೀತ ಗಂಧ ಅಕ್ಷತೆ ಪುಷ್ಪ ಧೂಪ ದೀಪ ನೈವೇದ್ಯ ತಾಂಬೂಲ ನೀರಾಜನಗಳೆಂಬ ಷೋಡಶೋಪ ಚಾರಗಳನ್ನು ಸಲ್ಲಿಸಿ ನಮಸ್ಕರಿಸಿ ಛತ್ರಚಾಮರಾದಿ ರಾಜೋಪಚಾರಗಳನ್ನು ಮಾಡು ವುದು. ಇದರಲ್ಲಿ ಮೇಲೆ ಹೇಳಿದಂತೆ ನಮಗೆ ಪ್ರಿಯವಾದ ಉಪಚಾರಗಳನ್ನೇ ದೇವರಿಗೂ ಮಾಡುವುದು, ನೈವೇದ್ಯಕ್ಕೆ ಮೊದಲು ದೀಪವನ್ನೂ ಆಮೇಲೆ ನೀರಾಜನ ವನ್ನೂ ಎತ್ತುವುದೆರಡೇ ಹೆಚ್ಚು. ದೀಪ ವರ್ಜ್ಯವಾಗಿ ಮಿಕ್ಕೆಲ್ಲ ಉಪಚಾರಗಳೂ ಮನೆಗೆ ದಯಮಾಡಿಸಿದ ಮಹಾತ್ಮರಿಗೆ ಮಾಡುವ ಪ್ರಕಾರವೇ. ಈ ವಿಧದ ಅರ್ಚನೆ ಯಲ್ಲಿ ನಾವು ದೊಡ್ಡವರಿಗೆ ಮಾಡುವ, ಮತ್ತು ನಮಗೆ ಹಿತವಾದ, ಉಪಚಾರಗಳೇ ನಡೆಯುವುದರಿಂದ ದೇವರೂ ಅವುಗಳಿಂದ ಸಂತುಷ್ಟನಾಗುತ್ತಾನೆಂಬ ನಂಬಿಕೆಯು ಸಹಜವಾಗಿ ಉಂಟಾಗುತ್ತದೆ, ದೇವರು ಸಂತುಷ್ಟನಾದನೆಂಬ ಭಾವನೆಯಿಂದ ನಮಗೂ ಸಂತುಷ್ಟಿಯಾಗುತ್ತದೆ. ಈ ಅರ್ಚನೆಯು ಅವರವರ ಅವಕಾಶಾನುಗುಣ ವಾಗಿ ದೀರ್ಘವಾಗಿಯೂ ಹ್ರಸ್ವವಾಗಿಯೂ ನಡೆಯಬಹುದು, ಅದಕ್ಕೆ ತಕ್ಕಂತೆ ಮಂತ್ರಗಳು ದೀರ್ಘವಾಗಿಯೂ ಹ್ರಸ್ವವಾಗಿಯೂ ಉಕ್ತವಾಗಿವೆ ಇದು ಮಂದಾಧಿ ಕಾರಿಗೆ ಉಕ್ತವಾದ ಅರ್ಚನೆಯ ಪ್ರಕಾರವು.

ಇನ್ನೂ ಹೆಚ್ಚು ಸಂಸ್ಕಾರವಾದವನಿಗೆ ಮೇಲೆ ಹೇಳಿದಂಥಾ ವಿಗ್ರಹಗಳ ಅವಶ್ಯ ವಿಲ್ಲ. ಆದಿಶಕ್ತಿ ಮಹಾವಿಷ್ಣು ಆದಿತ್ಯ ಗಣಪತಿ ಮಹಾದೇವ ಎಂಬ ಐದು ಪ್ರಧಾನ ದೇವರ ಚಿಹ್ನೆಗಳಾದ ಅಂಬಿಕೆ ಸಾಲಗ್ರಾಮ ಸ್ಫಟಿಕ ಶೋಣಭದ್ರಶಿಲೆ ನರ್ಮದಾಲಿಂಗ ಎಂಬ **ಪಂಚಾಯತನ**ಗಳೇ ಸಾಕು. ಅಂಥಾವನು ಅದೇ ಸಾಕಾದರೂ ಕುಟುಂಬದಲ್ಲಿ ಅಸಂಸ್ಕೃತರೂ ಇರುವುದರಿಂದ ಅವರಿಗಾಗಿ ಜತೆಯಲ್ಲಿ ವಿಗ್ರಹಗಳನ್ನೂ ಸ್ಥಾಪಿಸಿರುತ್ತಾನೆ ಪ್ರತಿಮೆಗಳಿಗೆ ಪ್ರಾಣಪ್ರತಿಷ್ಠೆಯನ್ನು ಮಾಡ ಬೇಕೇ ವಿನಾ ಪಂಚಾಯತನಕ್ಕಿಲ್ಲ. ಅವುಗಳಲ್ಲಿ ಆಯಾ ದೇವರುಗಳ ಸಾನ್ನಿಧ್ಯವಿದ್ದೇ ಇರುವುದೆಂದು ಭಾವನೆ. ಇಂಥಿಂಥಾವು ಇಂಥಿಂಥಾ ದೇವರೆಂದು ಕಲ್ಪಿತವಲ್ಲ, ಆಯಾ ಚಿಹ್ನೆಗಳ ವರ್ಣಲಕ್ಷಣಾದಿಗಳಿಂದಲೇ ವ್ಯಕ್ತವಾಗುವುದು. ಥಳಥಳಿಸುತ್ತಾ ನೇತ್ರವನ್ನೂ ಚಿತ್ತವನ್ನೂ ಆಕರ್ಷಿಸುವ ಅಂಬಿಕೆಯು ಮಾಯಾಸ್ವರೂಪಳಾದ ಆದಿ ಶಕ್ತಿಯು. ಕೃಷ್ಣವರ್ಣದ ಚಕ್ರಾಂಕಿತವಾದ ಸಾಲಗ್ರಾಮವು ನೀಲಮೇಘಶ್ಯಾಮ ನಾದ ಮಹಾವಿಷ್ಣುವು. ಸ್ವಚ್ಛವಾದ ಸ್ಫಟಿಕವು ತೇಜಃಪುಂಜನಾದ ಆದಿತ್ಯನು. ಮಾಸಿದ ಕೆಂಪುಬಣ್ಣದ ಶೋಣಭದ್ರಶಿಲೆಯು ಕಪಿಲವರ್ಣದ ಗಣಪತಿಯು. ಮುತ್ತಿ ನಂತೆ ಹೊಳೆವ ಲಿಂಗಾಕೃತಿಯ ನರ್ಮದಾಶಿಲೆಯು ಸಾತ್ವಿಕಶುದ್ಧವಿಗ್ರಹನಾದ ಮಹಾದೇವನು. ಅಷ್ಟೇ ಅಲ್ಲ—ಮುಕ್ತಾ(ಮುತ್ತು) ವಿದ್ರುಮ(ಹವಳ) ಹೇಮ (ಚಿನ್ನ) ನೀಲ(ನೀಲಿ) ಧವಳ(ಬಿಳಿ) ಎಂಬೈದು ಬಗೆ ಬಣ್ಣದ ಗಾಯತ್ರೀಮುಖಗಳನ್ನು

ನರ್ಮದಾಲಿಂಗ, ಶೋಣಭದ್ರಶಿಲೆ, ಅಂಬಿಕೆ, ಸಾಲಗ್ರಾಮ, ಸ್ಫಟಿಕಗಳು ಕ್ರಮವಾಗಿ ಸೂಚಿಸುವುದರಿಂದ ಗಾಯತ್ರಿಯಂತೆಯೇ ತತ್ತ್ವಾರ್ಥಸೂಚಕವೆಂದೂ, ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ, ಈಶಾನವೆಂಬ ಮಹಾದೇವನ ಸದೃಶ ವರ್ಣದ ಪಂಚಮುಖಗಳನ್ನು ಹೋಲುವುದರಿಂದ ಐದು ಮುಖಗಳಿದ್ದರೂ ಮಹಾದೇವನೊಬ್ಬನೇ ಆದಹಾಗೆ ಐದೂ ಒಬ್ಬನೇ ದೇವನ ಮುಖಗಳೆಂದೂ, ಸೂಚಿಸುವುವು. ಪಂಚಾಯತನವನ್ನು ಷೋಡಶೋಪಚಾರಾದಿಗಳಿಂದ ಅರ್ಚಿಸಿ ಐದಾದರೂ ಗಾಯತ್ರಿಯಂತೆಯೂ ಮಹಾದೇವನಂತೆಯೂ ದೇವರೊಬ್ಬನೇ ಎಂಬ ನಿರ್ಧಾರಕ್ಕೆ ಕ್ರಮವಾಗಿ ಬರಬೇಕು. ಪಂಚಾಯತನಾರ್ಚನೆಯಲ್ಲಿ ಒಂದ್ವೈತಿಹ್ಯವಿದೆ. ಐದೂ ಬೇರೆ ಬೇರೆಯೆಂದಾಗಲೀ ಒಂದೇ ಎಂದಾಗಲೀ ಭಾವನೆಯಾಗಿದ್ದರೆ ಬಾಧಕವಿರಲಿಲ್ಲ. ಮೊದಲಣ ಸ್ಥಿತಿಯಲ್ಲಿ ಮೇಲಕ್ಕೇರುವ ಅವಕಾಶವಿರುತ್ತಿತ್ತು, ಎರಡನೆಯದರಲ್ಲಿ ಮೇಲಕ್ಕೆ ಹತ್ತಿದುದಾಗಿರುತ್ತಿತ್ತು. ಎರಡೂ ಬಿಟ್ಟು ಅವನತಿಗಿಳಿಯಿತು—ಅಧೋಗತಿಯು ವಿಶ್ವತೋಮುಖವಾಗುವುದು ಸಹಜ. ಪಂಚಾಯತನಗಳಲ್ಲಿ ಒಂದೊಂದಧಿದೇವನನ್ನೂ ಅಧಿಕರಿಸಿ ಶೈವ ವೈಷ್ಣವ ಸೌರ ಶಾಕ್ತೇಯ ಗಾಣಾಪತ್ಯಗಳೆಂಬ ಐದು ಪ್ರಕಾರದ ಅರ್ಚನಾ ಸಂಪ್ರದಾಯಗಳೆದ್ದು ದುರಭಿಮಾನಗಳುಂಟಾಗಿ ಒಂದೊಂದು ಸಂಪ್ರದಾಯದವರೂ ಬೇರೆ ಸಂಪ್ರದಾಯದವರರ್ಚಿಸುವ ದೇವರನ್ನೂ ಅರ್ಚಿಸುವವರನ್ನೂ ದೂಷಿಸುವ ಸ್ಥಿತಿಗೆ ಬಂದಿತ್ತು. ಆಗ ಶ್ರೀಶಂಕರಭಗವತ್ಪಾದರು ಉಪಾಯವಾಗಿ ವಿರೋಧವನ್ನು ಪರಿಹರಿಸಿದರಂತೆ:—ಶೈವರು ನರ್ಮದಾಲಿಂಗವನ್ನೂ, ವೈಷ್ಣವರು ಸಾಲಗ್ರಾಮವನ್ನೂ, ಸೌರರು ಅದಿತ್ಯವನ್ನೂ, ಶಾಕ್ತೇಯರು ಅಂಬಿಕವನ್ನೂ, ಗಾಣಾಪತ್ಯರು ಶೋಣಭದ್ರಶಿಲೆಯನ್ನೂ 'ಮಧ್ಯೆ ಇಟ್ಟರೆ ಅವರವರ ಮತಗಳ ಪ್ರಕಾರ ಪೂಜಿಸಲು ಯೋಗ್ಯವಾಗುವುದೆಂದು ಬೋಧಿಸಿ ವೈಷಮ್ಯವನ್ನು ನಿವಾರಿಸುವ ಏರ್ಪಾಡು ಮಾಡಿದರಂತೆ—ಹಾಗೆಯೇ ಎಲ್ಲುದಕ್ಕೂ ಅತ್ಯಂತ ವಿರುದ್ಧವಾದ ಕಾಪಾಲಿ ಮತವನ್ನೂ ಶೋಧಿಸಿದರಂತೆ—ಅದರಿಂದ ಷಣ್ಮತಸ್ಥಾಪನಾಚಾರ್ಯರೆಂದು ಅವರಿಗೆ ಬಿರುದು ಬಂತಂತೆ. ಹೀಗೆ ನಶಿಸಿಹೋಗುತ್ತಿದ್ದ ಪಂಚಾಯತನಾರ್ಚನೆಯು ಊರ್ಜಿತವಾಯಿತು. ಈ ಐದು ದೇವರನ್ನೂ ಪ್ರಸಿದ್ಧ ದೇವಾಲಯಗಳಲ್ಲಿ ಆಯಾ ಸಂಪ್ರದಾಯಾನುಸಾರವಾಗಿ ಪ್ರಧಾನವನ್ನು ಮಧ್ಯದಲ್ಲಿಯೂ ಮಿಕ್ಕ ನಾಲ್ಕನ್ನು ನಾಲ್ಕುಕಡೆಗಳಲ್ಲಿಯೂ ಸ್ಥಾಪಿಸಿರುವುದನ್ನು ಈಗಲೂ ಕಾಣಬಹುದು. (ವಿನ್ಯಾಸಪ್ರಕಾರವನ್ನು ನಿರ್ಣಯಸಿಂಧುವಿನಲ್ಲಿ ನೋಡಬಹುದು.)

ಪಂಚಾಯತಾರ್ಚನೆಗಿಂತಲೂ **ಮಾನಸಿಕಾರ್ಚನೆ**ಯು ಮೇಲ್ಪಟ್ಟದ್ದು. ಈ ಸಂಪ್ರದಾಯದಲ್ಲಿ ಯಾವ ಚಿಹ್ನೆಗಳೂ ಇಲ್ಲ—ಆರಾಧ್ಯದೇವನು-ಅಂತರ್ಯಾಮಿಯು, ಪೂಜಾದ್ರವ್ಯಗಳು—ಭೌತಿಕಗಳಲ್ಲ, ಮಾನಸಿಕಗಳು, ಸಮರ್ಪಣೆಯು—ಕಾರ್ಯಗತವಲ್ಲ—ಸಂಕಲ್ಪಾತ್ಮಕವು ವಿಶೇಷವೇನೆಂದರೆ ಪೂಜಾಸಂಭಾರಗಳು ಮನಸ್ಸಿನ ಅಪರಿಮಿತ ಕಲ್ಪನಾಶಕ್ತಿಯಿಂದ ಭಾವಿತವಾಗುವುದರಿಂದ ಸರ್ವೋತ್ಕೃಷ್ಟವಾದುವು.

ಆರಾಧ್ಯನು ಅಂತಸ್ಥನಾಗಿರುವುದರಿಂದಲೂ ಆರಾಧನೆಯು ಸಂಕಲ್ಪದಿಂದಲೇ ನಡೆಯುವುದರಿಂದಲೂ, ದೇಶಕಾಲಾವಸ್ಥೆಗಳ ನಿರ್ಬಂಧವಿಲ್ಲದೆ, ಎಲ್ಲಿದ್ದರಲ್ಲಿ, ಯಾವಾಗ ಎಂದರಾಗ, ಎಷ್ಟಾವೃತ್ತಿಯೆಂದರಷ್ಟಾವೃತ್ತಿ ನಡೆಯಬಹುದು. ದೇಹವೇ ದೇವಾಲಯವು ಜೀವವೇ ಪರಮಾತ್ಮನು, ಅಜ್ಞಾನವೇ ಪರಿಹಾರ್ಯವಾದ ನಿರ್ಮಾಲ್ಯವು, ಸೋಽಹಂಭಾವದಿಂದಲೇ ಪೂಜಿಸುವುದು [1] ಇದಕ್ಕೆ ಶಿವಮಾನಸಿಕಪೂಜೆಯೇ ಉದಾಹರಣೆ [2]—ಮೊದಲ ಮೂರು ಶ್ಲೋಕಗಳಲ್ಲಿ ಷೋಡಶೋಪಚಾರಗಳು ಮನಸ್ಸಿನಲ್ಲೇ ಕಲ್ಪಿತವಾಗಿ ಅಂತರಾತ್ಮನಿಗೆ ಅರ್ಪಿತವಾಗುವ ಕ್ರಮವು ಉಕ್ತವಾಗಿದೆ. ಕೊನೆಯದರಲ್ಲಿ ಇಂಥಾ ಉಚ್ಚ ರೀತಿಯ ಫಲವಾದ ಆತ್ಮಾರ್ಪಣವಿದೆ:-ಎಲೈ ಅಂತರ್ಯಾಮಿಯಾದ ಶಂಭುವೇ, ನನ್ನ ಆತ್ಮವೇ ನೀನು, ಮತಿಯೇ ನಿನ್ನ ಅರ್ಧಾಂಗಿ, ಪ್ರಾಣಗಳೇ ನಿನ್ನ ಸಹಚರರು, ಶರೀರವೇ ದೇವಾಲಯವು, ವಿಷಯೋಪಭೋಗಗಳೇ ನಿನ್ನ ಪೂಜೆಯು, ನಿದ್ರೆಯೇ ಸಮಾಧಿ, ಸಂಚಾರವೇ ಪ್ರದಕ್ಷಿಣೆ, ಮಾತುಗಳೇ ಸ್ತೋತ್ರ, ಅಥವಾ ಈ ವಿಸ್ತಾರವೇಕೆ, ನಾನು ಮಾಡುವ ಕೆಲಸ ಕಾರ್ಯಗಳೆಲ್ಲವೂ ನಿನ್ನ ಆರಾಧನೆಯೇ. ಹೀಗೆ ಭಗವದಾರಾಧನೆಯಲ್ಲಿಯೇ ಸದಾ ನಿರತನಾಗಿರುತ್ತೇನೆಂಬ ಕರ್ಮಸಂನ್ಯಾಸದ ಉದಾತ್ತ ವಿಧಾನವಿದು. ಅಲ್ಲಿಗೆ ತತ್ವಮಸಿ ಅಹಂಬ್ರಹ್ಮಾಸ್ಮಿ(ಅವಂ ನೀಂ, ನಾನವಂ) ಎಂಬ ಮಹಾವಾಕ್ಯಗಳ ತತ್ತ್ವದ ನಿಕಟಾನುಭವವು ಸಿದ್ಧಿಸಿದಹಾಗಾಯಿತು.

**ಪರಾಪೂಜೆ**ಯು ಇನ್ನೂ ಮೇಲ್ಮಟ್ಟದ್ದು. ಇದರಲ್ಲಿ ಷೋಡಶೋಪಚಾರಗಳು ನಡೆಯುವುದಿಲ್ಲ, ಪರಮಾತ್ಮನ ಸ್ವರೂಪವನ್ನು ಸ್ಮರಿಸುತ್ತಾ ಯಾವ ಉಪಚಾರಕ್ಕೂ ಅವಕಾಶವಿಲ್ಲವಲ್ಲ ಎಂದು ಜಿಜ್ಞಾಸಮಾಡುವುದೇ ಈ ವಿಧಾನವು. ಇದು ಸಗುಣ ನಿರ್ಗುಣೋಪಾಸನಗಳ ಸಂಧಿಯು ಉದಾಹರಣೆಗಾಗಿ "ಪೂರ್ಣಸ್ಯಾವಹನಮಿ

1 ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಸ್ಸನಾತನಃ । ತ್ಯಜೇದಜ್ಞಾನ ನಿರ್ಮಾಲ್ಯಂ ಸೋಽಹಂಭಾವೇನ ಪೂಜಯೇತ್ ॥

2 ರತ್ನೈಃ ಕಲ್ಪಿತಮಾಸನಂ ಹಿಮಜಲೈಸ್ಸ್ನಾನಂ ಚ ದಿವ್ಯಾಂಬರಂ ನಾನಾರತ್ನವಿಭೂಷಣಂ ಮೃಗಮದಾಮೋದಾಂಕಿತಂ ಚಂದನಂ । ಜಾತೀಚಂಪಕಬಿಲ್ವಪತ್ರರಚಿತಂ ಪುಷ್ಪಂ ಚ ಧೂಪಂ ತಥಾ ದೀಪಂ ದೇವ ದಯಾನಿಧೇ ಪಶುಪತೇ ಹೃತ್ಕಲ್ಪಿತಂ ಗೃಹ್ಯತಾಂ ॥೧॥ ಸೌವರ್ಣೇ ಮಣಿಖಂಡರತ್ನಖಚಿತೇ ಪಾತ್ರೇ ಘೃತಂ ಪಾಯಸಂ ಭಕ್ಷ್ಯಂ ಪಂಚವಿಧಂ ಪಯೋದಧಿಯುತಂ ರಂಭಾಫಲಂ ಪಾನಸಂ । ಶಾಕಾನಾಮಯುತಂ ಜಲಂ ರುಚಿಕರಂ ಕರ್ಪೂರಖಂಡೋಜ್ಜ್ವಲಂ ತಾಂಬೂಲಂ ಮನಸಾ ಮಯಾ ವಿರಚಿತಂ ಭಕ್ತ್ಯಾ ಪ್ರಭೋ ಸ್ವೀಕುರು ॥೨॥ ಛತ್ರಂ ಚಾಮರಯೋರ್ಯುಗಂ ವ್ಯಜನಕಂ ಚಾದರ್ಶನಂ ನಿರ್ಮಲಂ ವೀಣಾಭೇರಿಮೃದಂಗಕಾಹಳಕಲಾಗೀತಂ ಚ ನೃತ್ಯಂ ತಥಾ । ಸಾಷ್ಟಾಂಗಂ ಪ್ರಣತಿಸ್ಸ್ತುತಿರ್ಬಹುವಿಧಾ ಹ್ಯೇತತ್ಸಮಸ್ತಂ ಮಯಾ ಸಂಕಲ್ಪೇನ ಸಮರ್ಪಿತಂ ತವ ವಿಭೋ ಪೂಜಾಂ ಗೃಹಾಣ ಪ್ರಭೋ ॥೩॥ ಆತ್ಮಾ ತ್ವಂ ಗಿರಿಜಾ ಮತಿಸ್ಸಹಚರಾಃ ಪ್ರಾಣಾಶ್ಶರೀರಂ ಗೃಹಂ ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ । ಸಂಚಾರಃ ಪದಯೋಃ ಪ್ರದಕ್ಷಿಣವಿಧಿಸ್ಸ್ತೋತ್ರಾಣಿ ಸರ್ವಾಗಿರೋ ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್ ॥೪॥ ಶಿವಮಾನಸಿಕಪೂಜಾ॥

ತ್ಯಾದಿ" ಪರಾಪೂಜಾಕ್ರಮವನ್ನೇ ವಿಮರ್ಶಿಸೋಣ–ಪರಮಾತ್ಮನು ಸರ್ವವ್ಯಾಪಿಯು, ಅವನಿಲ್ಲದ ಸ್ಥಳವೇ ಇಲ್ಲವಲ್ಲ,[3] ಅವನನ್ನು ಎಲ್ಲಿಗೆ **ಆವಾಹನೆ** ಮಾಡುವುದು ? ನಿರಾಲಂಬನಲ್ಲ ಅವನನ್ನು **ಸಿಂಹಾಸನದ** ಮೇಲೆ ಕೂರಿಸುವುದೆಂತು ? ಸ್ವಚ್ಛನಲ್ಲ ಅವನಿಗೆ **ಪಾದ್ಯ**ವೇಕೆ **ಅರ್ಘ್ಯ**ವೇಕೆ ? ಶುದ್ಧನಲ್ಲ[4]—**ಶುದ್ಧಾಚಮನ**ವೇಕೆ ? ನಿರ್ಮಲನಿಗೆ **ಸ್ನಾನ**ವೇಕೆ ? ವಿಶ್ವವೇ ಅವನ ಅಂತರ್ಗತವಾಗಿರುವಾಗ, **ವಸ್ತ್ರ**ವನ್ನು ಹೊದಿಸುವುದು ಹೇಗೆ ? ನಿರಾಲಂಬನಿಗೆ **ಯಜ್ಞೋಪವೀತ**ವನ್ನು ಹೇಗೆ ಹಾಕುವುದು ? ರಮ್ಯನಿಗೆ **ಆಭರಣ**ವೇಕೆ ?[5] ನಿರ್ಲಿಪ್ತನಿಗೆ[6] **ಗಂಧ**ವನ್ನು ಲೇಪಿಸುವುದಕ್ಕಾಗುತ್ತದೆಯೇ ? ವಾಸನಾರಹಿತನಿಗೆ **ಪುಷ್ಪ**ದಿಂದೇನು ಪ್ರಯೋಜನ ? (**ಧೂಪ**ವು ತಾನೆ ಏಕೆ ?) ನಿತ್ಯತೃಪ್ತನಿಗೆ ನೈವೇದ್ಯವೆಂಥಾದ್ದು ? ವಿಶ್ವಕ್ಕೇ ವಿಭುವಾದವನಿಗೆ **ತಾಂಬೂಲ**ವನ್ನು ನಾವೇ ಕೊಡುವವರು, ಅವನದೇ ಅಲ್ಲವೆ ಅದು ? ಸ್ವಯಂಪ್ರಕಾಶಮಾನನಾದ ಪರಂಜ್ಯೋತಿಗೆ[7] ಮಿರುಗುವ ಸಣ್ಣ **ನೀರಾಜನ**ವೊಂದು ಬೆಳಕೇ ? ಅನಂತನಿಗೆ[8] **ಪ್ರದಕ್ಷಿಣೆ**ಮಾಡಿ ಮುಗಿಸುವುದು ಸಾಧ್ಯವೆ ? ಅದ್ವಯನಿಗೆ[9] **ನಮಸ್ಕಾರ**ವನ್ನು ಮಾಡುವವರು ಯಾರು ? ಇನ್ನೊಬ್ಬನಿದ್ದರಲ್ಲವೆ ನಮಸ್ಕಾರಕ್ರಿಯೆ ? ಈ ಪ್ರಕಾರವಾಗಿ ಜಿಜ್ಞಾಸವನ್ನು ಮಾಡುತ್ತಾ ಪರಾತ್ಪರನಿಗೆ ಯಾವ ಉಪಚಾರ ಮಾಡುವುದೂ ಸಾಧ್ಯವಿಲ್ಲವೆಂದು ನಿರ್ಧರಿಸುವುದು ಪರಾಪೂಜೆಯು.[10] ಪೂಜೆ ಮಾಡುವುದೇ ಸಾಧ್ಯವಲ್ಲ ಎನ್ನುವುದು ಪೂಜೆಯೋ ಎಂದು ಕೇಳಬಹುದು. ಮೋಹಾಲಸ್ಯಪ್ರಮಾದಗಳಿಂದ ಕರ್ಮ ಮಾಡುವುದನ್ನು ಬಿಡುವ ತಾಮಸ ತ್ಯಾಗವಲ್ಲ, ಕಾಯಕ್ಲೇಶ ಕಾಲಹರಣ ವ್ಯರ್ಥವ್ಯವಸಾಯ ಬುದ್ಧಿಯಿಂದ ಬಿಡುವ ರಾಜಸವಲ್ಲ, ಸಮ್ಯಜ್ಞಾನಜನ್ಯವಾದ ಪರಮಾತ್ಮನ ನಿಜಸ್ವರೂಪವನ್ನು ಧ್ಯಾನಿಸುತ್ತಾ "ನೇತಿ ನೇತಿ" ಇದಲ್ಲ ಇದಲ್ಲ ಎಂದು

---

3 ಏಕೋ ದೇವಸ್ಸರ್ವಭೂತೇಷು ಗೂಢಸ್ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ॥ ಶ್ವೇ. ಉ. ॥ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ॥ ಈಶಾವಾಸ್ಯೋಪನಿಷತ್ತು ॥ 4 ನಿತ್ಯಶುದ್ಧಬುದ್ಧಮುಕ್ತಃ ಪರಮಾತ್ಮಾ ॥

5 ಕಿಮಿವ ಹಿ ಮಧುರಾಣಾಂ ಮಣ್ಡನಂ ನಾಽಽಕೃತೀನಾಂ ॥ ಕಾಲಿದಾಸ ॥

6 ನ ಮಾಂ ಕರ್ಮಾಣಿ ಲಿಂಪಂತಿ ॥ ಭ. ಗೀ. ॥

7 ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ವಿಶ್ವಮಿದಂ ವಿಭಾತಿ ॥ ಮುಂಡಕೋಪನಿಷತ್ತು ॥ 8 ಸತ್ಯಂ ಜ್ಞಾನಮನಂತಂ ಬ್ರಹ್ಮ ॥ ತೈ. ಉ. ॥

9 ಏಕಮೇವಾದ್ವಿತೀಯಂ ಬ್ರಹ್ಮ ॥ ಛಾಂ. ಉ. ॥

10 ಪೂರ್ಣಸ್ಯಾವಾಹನಂ ಕುತ್ರ ನಿರಾಲಂಬಸ್ಯ ಚಾಸನಂ । ಸ್ವಚ್ಛಸ್ಯ ಪಾದ್ಯಮರ್ಘ್ಯಂ ಚ ಶುದ್ಧಸ್ಯಾಚಮನಂ ಕುತಃ ॥ ನಿರ್ಮಲಸ್ಯ ಕುತೋ ಸ್ನಾನಂ ವಸ್ತ್ರಂ ವಿಶ್ವೋದರಸ್ಯ ಚ । ನಿರಾಲಂಬಸ್ಯೋಪವೀತಂ ರಮ್ಯಸ್ಯಾಭರಣಂ ಕುತಃ ॥ ನಿರ್ಲೇಪಸ್ಯ ಕುತೋ ಗಂಧಃ ಪುಷ್ಪಂ ನಿರ್ವಾಸನಸ್ಯ ಚ । ನಿತ್ಯತೃಪ್ತಸ್ಯ ನೈವೇದ್ಯಂ ತಾಂಬೂಲಂ ಚ ಕುತೋ ವಿಭೋಃ ॥ ಸ್ವಯಂ ಪ್ರಕಾಶಮಾನಸ್ಯ ಕುತೋ ನೀರಾಜನಂ ಭವೇತ್ । ಪ್ರದಕ್ಷಿಣಾ ಹ್ಯನಂತಸ್ಯ ಹ್ಯದ್ವಯಸ್ಯ ಕುತೋ ನತಿಃ ॥ ಪರಾಪೂಜಾ ॥

ನಿದಿಧ್ಯಾಸಮಾಡುವ ಸಾತ್ವಿಕಪ್ರವೃತ್ತಿಯು. ಮುಕ್ತಿಮಾರ್ಗದಲ್ಲಿ ಬಿಡುವುದೇ ಕ್ರಿಯೆಯು. ಸಗುಣನಿರ್ಗುಣೋಪಾಸನೆಯ ಸಂಧಿಯಲ್ಲಿ ನಿರ್ಗುಣೋಪಾಸನೆಯ ಕಡೆಗೆ ಓಲುವಾಗ ಪೂರ್ವಾಭ್ಯಸ್ತವಾದ ಭಾಷೆಯನ್ನೇ ಪ್ರಯೋಗಿಸಿ ಪೂಜೆಯೆಂದು ಅಂದರೂ ವಾಸ್ತವವಾಗಿ ನಡೆಯುವುದು ಧ್ಯಾನರೂಪದ ಆರಾಧನೆ ಅಥವಾ ಧ್ಯಾನ ಯೋಗವೇ ಅದು. ಅದರ ಪ್ರಶಂಸೆಯು ಗೀತೆಯಲ್ಲಿ ಹೀಗಿದೆ—ಅಭ್ಯಾಸಕ್ಕಿಂತಲೂ ಜ್ಞಾನವೂ ಜ್ಞಾನಕ್ಕಿಂತಲೂ ಧ್ಯಾನವೂ ಶ್ರೇಷ್ಠವು,[11] ಅಂದರೆ ಜ್ಞಾನೋದಯಕ್ಕೆ ಮೊದಲು ನಡೆಯುವ ಅಭ್ಯಾಸಯೋಗಕ್ಕಿಂತಲೂ ಶಾಸ್ತ್ರಪ್ರಮಾಣದಿಂದಲೂ ಯುಕ್ತಿ ನ್ಯಾಯದಿಂದಲೂ ಪ್ರಾಪ್ತವಾಗುವ ಜ್ಞಾನಯೋಗವು ಶ್ರೇಷ್ಠವು, ಜ್ಞಾನದ ಶ್ರವಣ ಮನನಾದಿಗಳಾದಮೇಲೆ ನಡೆಯುವ ನಿದಿಧ್ಯಾಸರೂಪದ ಧ್ಯಾನವು ಜ್ಞಾನಕ್ಕಿಂತಲೂ ಮೇಲ್ಪಟ್ಟದ್ದು. ಧ್ಯಾನವು ಆರಾಧನೆಯಲ್ಲವೆಂದರೆ ಅಭ್ಯಾಸಕಾಲದಲ್ಲಿ ಮಾಡುವ ಸ್ತುತಿನತಿಗಳೂ ಭಜನೆಕೀರ್ತನೆಗಳೂ ಎಲ್ಲವೂ ಆರಾಧನೆಯೇ ಅಲ್ಲವೆನ್ನಬೇಕಾದೀತು.

ಸಂಗ್ರಹವೇನೆಂದರೆ—ಆರಾಧನೆಯು ಅಧಿಕಾರಿಭೇದಕ್ಕನುಗುಣವಾಗಿ ಮೆಟ್ಟಿಲುಮೆಟ್ಟಿಲಾಗಿ ಏರ್ಪಟ್ಟಿದೆ. ಅಭ್ಯಾಸಕ್ಕಿದು ಅವಶ್ಯವು. ಆರಾಧನೆಯ ಕ್ರಮ ದಲ್ಲಿ ಕಾಣುವ ತಾರತಮ್ಯವು ಸಾಪೇಕ್ಷವಾದುದು,[12] ನಿತ್ಯವಲ್ಲ[13] ಆಯಾಯಾ ಅಧಿಕಾರಿಗಳಿಗೆ ಆಯಾಯಾ ವಿಧಾನಗಳು ಸಾಧುವಾದುವೇ. ತೀವ್ರತರಾಧಿಕಾರಿಗಳಿಗೆ ಅವು ಅಲ್ಲವೆಂದು ಕಾಣುವುದು. ಮೊದಮೊದಲು ಹಸ್ತಪಾದಾದ್ಯವಯವಗಳೂ ನೇತ್ರಶ್ರೋತ್ರಾದೀಂದ್ರಿಯಗಳೂ ಕಿರೀಟಕೌಂಸ್ತುಭಾಧ್ಯಾಭರಣಗಳೂ ಉಳ್ಳ ಭವ್ಯ ಮೂರ್ತಿಯನ್ನು ಸ್ಥಾಪಿಸಿ ಪೂಜಿಸುವುದು, ಆಮೇಲೆ ಅವಯವಾತ್ಮಕವಾದ ಮೂರ್ತಿ ಯನ್ನು ಬಿಟ್ಟು ಗುಣಾತ್ಮಕವಾದ ಪಂಚಾಯತನವನ್ನೂ, ಅದೂ ಆದಮೇಲೆ ಬಾಹ್ಯ ಸ್ಥಾಪನೆಯನ್ನು ಬಿಟ್ಟು ಅಂತರಂಗದಲ್ಲಿ ಆರಾಧ್ಯನನ್ನು ಧ್ಯಾನಿಸಿ ಅರ್ಚಿಸುವುದು, ಆಮೇಲೆ ಪರಮಾತ್ಮನ ಸ್ವರೂಪವನ್ನು ಧ್ಯಾನಿಸುವುದು, ಹೀಗೆ ಉತ್ತರೋತ್ತರ ಪ್ರಶಸ್ತತರವಾದ ಕ್ರಮವು ಸೂಚಿತವಾಗಿದೆ. ಯಾವುದನ್ನು ಮಾಡುತ್ತಿದ್ದರೂ ಪರಮಧ್ಯೇಯವನ್ನು ಬಿಟ್ಟು ಮಾಡುವುದಿಲ್ಲವೆಂಬುದು ಮಂತ್ರಗಳಿಂದಲೇ ವ್ಯಕ್ತ ವಾಗುವುದು. ಎಲ್ಲಾ ಅಷ್ಟೋತ್ತರನಾಮಗಳಲ್ಲಿಯೂ ಕೊನೆಯಲ್ಲಿ ತತ್ತ್ವಾರ್ಥ ಯುಕ್ತವಾದ ನಾಮಗಳ ಪ್ರಯೋಗವೇ ಉದಾಹರಣೆ. ಪೂಜಿಸಿ ಚೆನ್ನಾಗಿ ಪೂಜಿಸಿ ಪ್ರೀತಿಯಿಂದ ಪೂಜಿಸಿ ಮಕ್ಕಳಿರಾ ಪೂಜಿಸಿ ನಿಮ್ಮ ಪುರವನ್ನಾಕ್ರಮಿಸಿದವನನ್ನು ಪೂಜಿಸುತ್ತೀರಿ, ದೇವರನ್ನು ಬೇಡವೆ—ಪೂಜಿಸಿ ಎಂದು ಶ್ರುತಿಯು ಹೇಳುತ್ತಿದೆ.[14]

---

11 ಶ್ರೇಯೋ ಹಿ ಜ್ಞಾನಮಭ್ಯಾಸಾತ್ ಜ್ಞಾನಾದ್ಧ್ಯಾನಂವಿಶಿಷ್ಯತೇ ॥ಭ.ಗೀ.॥

12 Relative term. 13 Not an absolute term.

14 ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ । ಅರ್ಚಂತ ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥ಋ.ವೇ-ಅ. ೬-ಅ. ೫-ವ. ೭॥

# ೧೧ನೆಯ ಪ್ರಕರಣ—ಆಹಾರ

## ೧. ಆಹಾರದ ಅವ್ಯವಸ್ಥೆ

ಆಹಾರವು ಪ್ರಾಣಿಸಾಮಾನ್ಯವಾದ ನೈಸರ್ಗಿಕಾವಶ್ಯಕತೆಯು. ದೇಹವು ಸಪ್ತ ಧಾತುಮಯವಾದುದು.[1] ಏಳು ಧಾತುಗಳೂ ಆಹಾರವೂ ದೇಹವನ್ನು ಧರಿಸುತ್ತವೆ.[2] ಆಹಾರದ ಅಪೇಕ್ಷೆಯೇ ಹಸಿವು, ಹಸಿವಿನ ನಿವಾರಣೆಗಾಗಿಯೇ ಆಹಾರದಲ್ಲಾಸಕ್ತಿಯಾಗುವುದು. ಶರೀರಭರಣವೇ ಆಹಾರದ ಪ್ರಯೋಜನವು. ಇತರ ಪ್ರಾಣಿಗಳಲ್ಲಿ ಆಹಾರಸೇವನೆಯು ಆಯಾ ಜಾತಿಪ್ರಕೃತಿಗನುಗುಣವಾಗಿ ಶರೀರಭರಣದ ಮಿತಿಯಲ್ಲಿ ನಡೆಯುತ್ತದೆ. ಮಾನವನಿಗೆ ಮಿತಿನಿಯಮಗಳಿಲ್ಲ, ಆಚಾರ ಅಭ್ಯಾಸ ಮಾನ ಅಭಿಮಾನ ಪ್ರತಿಷ್ಠೆ ಪ್ರದರ್ಶನ ಸತ್ಕಾರ ಬಲಾತ್ಕಾರ ಇತ್ಯಾದಿ ವೈಯಕ್ತಿಕ ಸಾಮಾಜಿಕ ಪ್ರಾರಬ್ಧಗಳ ದೆಸೆಯಿಂದ ಅವ್ಯವಸ್ಥೆಗಿಟ್ಟುಕೊಂಡು ಮಿತಿಯನ್ನು ಮೀರಿದೆ. ಹೊಟ್ಟೆಯು ಅನ್ನಕ್ಕೆ ಆತುರಪಟ್ಟರೆ, ದೇಹವು ಪುಷ್ಟಿಯನ್ನು ಅಪೇಕ್ಷಿಸಿದರೆ, ನಾಲಿಗೆಯು ರುಚಿಗಾಗಿ ಚಪಲವಡುವುದು. ಚಾಪಲ್ಯದಲ್ಲಿ ಯುಕ್ತಾಯುಕ್ತ ವಿವೇಚನೆಗೆ ಅವಕಾಶವಿಲ್ಲ. ಪರಿಣಾಮದಲ್ಲಿ ಊಟದ ಮೂಲವೇ ಮರೆತುಹೋಗಿ ಅರ್ಥವಿಲ್ಲದ ವ್ಯರ್ಥವೂ ಅನರ್ಥಮೂಲವೂ ಆದ ದುರಭ್ಯಾಸಗಳು ಉಪಸ್ಥಿತವಾಗಿವೆ. ಈ ಪರಿಸ್ಥಿತಿಯಲ್ಲಿ ಏನನ್ನು ಉಣಬೇಕು, ಎಷ್ಟು ಉಣಬೇಕು, ಯಾವಾಗ ಉಣಬೇಕು, ಏತಕ್ಕೆ ಉಣಬೇಕು, ಎಂಬ ಪರಿಜ್ಞಾನವೇ ಇಲ್ಲವಾಗಿದೆ. ದಿನಕ್ಕೆ ಎರಡು ರೂಪಾಯಿ ಸಂಪಾದಿಸುವವನು ಅರ್ಧ ಸಂಪಾದನೆಯನ್ನು ತನ್ನೊಬ್ಬನ ತುಷ್ಟಿಗಾಗಿ ಹೋಟಲಿನಲ್ಲಿ ತೆತ್ತು ಇನ್ನರ್ಧದಲ್ಲಿ ಕುಟುಂಬಭರಣವನ್ನು ಮಾಡಲು ಯತ್ನಿಸುತ್ತಾನಲ್ಲ ಇದಕ್ಕಿಂತ ದೊಡ್ಡ ಹುಚ್ಚಿನ್ನಿದೆಯೇ? ಅಲ್ಪಾಹಾರ ಅತ್ಯಾಹಾರ ದುಷ್ಟಾಹಾರದ ಪರಿಣಾಮವಾಗಿ ರೋಗಾದಿಗಳು ಕಿತ್ತು ತಿನ್ನುತ್ತವೆ. ಅಂತೂ ಇಂತೂ ತಾವೂ ಕೆಟ್ಟು ತಮ್ಮವರನ್ನೂ ಕೆಡಿಸಿ ಹಾಲಿನವರಿಗೂ ಹೋಟಲಿನವರಿಗೂ ಮಾರಾಟದವರಿಗೂ ಔಷಧಿ ತಯಾರಿಸುವವರಿಗೂ ಯಥೇಚ್ಛವಾಗಿ ಸಂಪತ್ತನ್ನೊದಗಿಸುವುದಾಗಿದೆ. ಊಟವೇನೂ ಕರ್ಮವಲ್ಲ ನಿಯಮವಲ್ಲ ನಿಷ್ಠೆಯಲ್ಲ, ಆದರೂ ಸುಲಭವಾದ ಸಮಸ್ಯೆ

1 ರಸಾಸೃಙ್ಮಾಂಸಮೇದೋಽಸ್ಥಿಮಜ್ಜಶುಕ್ರಾಣಿಧಾತವಃ ॥ಅ. ಸಂ-ಆಯುಷ್ಕಾಮೀಯ॥

2 ಶರೀರಂ ಧಾರಯಂತ್ಯೇತೇ ಧಾತ್ವಾಹಾರಾಶ್ಚ ಸರ್ವದಾ ॥ಅ, ಸಂ-ಆಯುಷ್ಕಾಮೀಯ॥

ಯಲ್ಲ. ಧಾತುಗಳಂತೆಯೇ ಆಹಾರವೂ ಸಮವಾಗಿದ್ದರೆ ವೃದ್ಧಿ, ವಿಷಮವಾದರೆ ಹಾನಿ.[3] ನಾವು ತಿನ್ನುವುದರಿಂದ ಅನ್ನ, ನಮ್ಮನ್ನು ತಿನ್ನುವುದರಿಂದ ಅನ್ನ—ಎಂದು ಉಪನಿಷತ್ತು ತತ್ತ್ವವನ್ನು ಸಾರುತ್ತಿದೆ.[4] ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ—ಎಂದು ಗಾದೆಯು ಕೂಗುತ್ತಿದೆ. ಒಪ್ಪೊತ್ತುಂಡವ ಯೋಗಿ, ಎರಡು ಹೊತ್ತುಂಡವ ಭೋಗಿ, ಮೂರು ಹೊತ್ತುಂಡವ ರೋಗಿ, ನಾಲ್ಕು ಹೊತ್ತುಂಡವನನ್ನು.....ಕೊಂಡುಹೋಗಿ ಎಂದು ನಾಣ್ಣುಡಿಯು ಮೊರೆಯುತ್ತಿದೆ. ಅತ್ಯಾಹಾರ ನಿರಾಹಾರಗಳೆರಡೂ ಕೆಟ್ಟದ್ದು, ವಿಹಾರದಲ್ಲಿ ಹೇಗೋ ಹಾಗೆ ಆಹಾರದಲ್ಲಿಯೂ ಯುಕ್ತತ್ವವಿರಬೇಕೆಂದು ಭಗವದ್ವಚನವೂ ಇದೆ[5] ಕೇಳುವುದಕ್ಕೆ ಕಿವಿಯು ಬೇಕು, ಬಾಳುವುದಕ್ಕೆ ಬುದ್ಧಿಯು ಬೇಕು.

## ೨. ಕಾಲಸ್ಥಾನ ನಿಯಮಗಳು

ಹಗಲನ್ನು ಎಂಟು ಭಾಗ ಮಾಡಿದರೆ ಒಂದೊಂದು ಭಾಗಕ್ಕೆ ಒಂದೂವರೆ ಘಂಟೆಯಾಗುತ್ತದಷ್ಟೆ—ಇಂಥಾ ಐದನೆಯ ಭಾಗದಲ್ಲಿ ಊಟವನ್ನು ಮಾಡಬೇಕು—ಅಂದರೆ ಮಧ್ಯಾಹ್ನ ೧೨ ಘಂಟೆಯ ಮೇಲೆ ೧॥ ಗಂಟೆಯೊಳಗೆ ಭೋಜನಕ್ಕೆ ಮುಖ್ಯ ಕಾಲ,[1] ಮುಖ್ಯ ಕಾಲವು ಕಳೆದ ಮೇಲೆ ಸ್ವಲ್ಪ ಹೊತ್ತಿನಲ್ಲೇ ಮಾಡುವುದು ಗೌಣ ಕಾಲ. ರಾತ್ರಿಯಲ್ಲಿ ಉಕ್ತಕರ್ಮಗಳು ಮುಗಿದ ಕೂಡಲೇ ಊಟವನ್ನು ಮಾಡುವುದು,[2] ರಾತ್ರಿಯ ಕರ್ಮಕಲಾಪಗಳು ಹೆಚ್ಚಾಗಿಲ್ಲವಾಗಿ ರಾತ್ರಿಯ ಮೊದಲನೆ ಜಾವದಲ್ಲೇ ರಾತ್ರಿಯ ಊಟವೆಂದಹಾಗಾಯಿತು. ಹೀಗೆ ಹಗಲೊಂದು ರಾತ್ರಿಯೊಂದು

---

3 ವೃದ್ಧಿಸ್ಸಮಾನೈಸ್ಸರ್ವೇಷಾಂ ವಿಪರೀತೈರ್ವಿಪರ್ಯಯಃ ॥ಅ. ಸಂ-ಆಯುಷ್ಕಾಮೀಯ॥ (ಸರ್ವೇಷಾಂ=ಧಾತ್ವಾಹಾರಾಣಾಂ)

4 ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ಪ್ರಕೀರ್ತಿತ ಇತಿ ॥ತೈ. ಉ.॥ ಅದ್ಯತೇ ಇತಿ ಅನ್ನಂ=ನಮ್ಮಿಂದ ತಿನ್ನಲ್ಪಡುವುದರಿಂದ ಅನ್ನ, ಅತ್ತೀತಿ ಅನ್ನಂ=ನಮ್ಮನ್ನೇ ತಿಂದುಬಿಡುವುದರಿಂದ ಅನ್ನ ; ಅನ್ನಶಬ್ದದ ಪ್ರಕ್ರಿಯೆ. ಏಕೋ ಹಿ ಭಕ್ಷಯತ್ಯನ್ನಮಪರೋಽನ್ನೇನ ಭಕ್ಷ್ಯತೇ ॥ದಕ್ಷಃ॥ ಒಬ್ಬನು ಅನ್ನವನ್ನು ತಿನ್ನುತ್ತಾನೆ, ಮತ್ತೊಬ್ಬನು ಅನ್ನದಿಂದ ತಿನ್ನಲ್ಪಡುತ್ತಾನೆ ಎಂದರ್ಥ.

5 ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾನ್ತಮನಶ್ನತಃ ॥ .. ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು । ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ಭ. ಗೀ. ॥

1 ಭುಕ್ತವತ್ಸ್ವಥ ವಿಪ್ರೇಷು ಸ್ವೇಷು ಭೃತ್ಯೇಷು ಚೈವ ಹಿ । ಭುಂಜೀಯಾತಾಂ ತತಃ ಪಶ್ಚಾತ್ ಗೃಹಸ್ಥಶ್ಶೇಷಭುಗ್ಭವೇತ್ ॥ಮ-iii-೧೧೬॥

2 ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಹುತ್ವಾಗ್ನೀನ್ ಸ್ತಾನುಪಾಸ್ಯ ಚ । ಭೃತ್ಯೈಃ ಪರಿವೃತೋ ಭುಕ್ತ್ವಾ ನಾತಿತೃಪ್ತ್ಯಾಥ ಸಂವಿಶೇತ್ ॥ಯಾ-i-೧೧೪॥

ಎರಡು ಊಟ ಮಾತ್ರವೇ—ಮಧ್ಯೆ ಮತ್ತೆ ಭೋಜನಮಾಡುವುದು ನಿಷಿದ್ಧವು.[3] ರಾತ್ರಿ ಸರಿಹೊತ್ತಿನಲ್ಲಿಯೂ, ಹಗಲು ಹೊತ್ತು ನೆತ್ತಿಯಮೇಲಿರುವಾಗಲೂ, ಎರಡು ಸಂಧ್ಯಾಕಾಲಗಳಲ್ಲಿಯೂ, ಊಟಮಾಡಬಾರದು.[4] ಈ ನಿಯಮವು ಕಾರಣಾಂತರದಿಂದ ಸಕಾಲದಲ್ಲಿ ಊಟಮಾಡದೆ ಇರುವವರಿಗೆ ಹೇಳಿರುವುದು, ಹಸಿವೆಯಾಗುತ್ತಿದ್ದರೂ ಮಾಡಬಾರದೆಂದರ್ಥ. ಈ ನಿಯಮಗಳು ಮನೆಯಲ್ಲಿ ಹಿರಿಯರಿಗೆಲ್ಲರಿಗೂ ಗೊತ್ತಾದ ವಿಷಯವೇ, ಅವರು ಹೇಳುತ್ತಲೇ ಇರುತ್ತಾರೆ.

ಹಳ್ಳತಿಟ್ಟುಗಳಿಲ್ಲದೆ ಸಮವಾಗಿ ನಯವಾಗಿರುವ ಚೊಕ್ಕಟವಾಗಿ ನಾರಿಸಿ ಗುಡಿಸಿ ಶುಚಿಯಾದ ಸ್ಥಳದಲ್ಲಿ ಊಟಮಾಡಬೇಕು. ಅಂಥಾ ಸ್ಥಳಕ್ಕೆ ಮೇಲೆ ಆವರಣವಿರಬೇಕು, ಅದು ತೆರೆದಿರಬಾರದು.[5] ದೇವಾಲಯದಲ್ಲಿಯೂ ಇತರ ಪೂಜಾ ಸ್ಥಾನದಲ್ಲಿಯೂ, ಯಾರೂ ವಾಸವಿಲ್ಲದ ಮನೆಯಲ್ಲಿಯೂ, ಶ್ಮಶಾನದಲ್ಲಿಯೂ, ಭೋಜನವು ನಿಷಿದ್ಧವು[6]

## ೩. ಉಪಕರಣ (ಪಾತ್ರೆ)

ಭೋಜನಪಾತ್ರೆಯು ಪ್ರಶಸ್ತವೂ ಶುದ್ಧವೂ ಆಗಿರಬೇಕು.[1] ಚಿನ್ನದ ಬೆಳ್ಳಿಯ ತಾಮ್ರದ ಪಾತ್ರೆಗಳೂ ತಾವರೆಎಲೆಯೂ ಮುತ್ತುಗದೆಲೆಯೂ ಪ್ರಶಸ್ತವಾದವು. (ತಾಮ್ರದ ಪಾತ್ರೆಯು ನೀರು ಕುಡಿಯುವುದಕ್ಕೆ ಊಟಕ್ಕಲ್ಲ) ಒಂದಾವೃತ್ತಿ ಊಟ ಮಾಡಿದ ಎಲೆಯನ್ನು ಮತ್ತೆ ಉಪಯೋಗಿಸಬಾರದು. ಕಂಚಿನ ಪಾತ್ರೆಯಾದರೆ ಅವರವರದನ್ನು ಅವರವರೇ ಉಪಯೋಗಿಸಬೇಕು—ಒಬ್ಬರುಂಡುದನ್ನು ಮತ್ತೊಬ್ಬರು ಉಪಯೋಗಿಸಬಾರದು. ಚಿನ್ನ ಬೆಳ್ಳಿ ಪಾತ್ರೆಗಳಿಗೀ ನಿಯಮವಿಲ್ಲ. ಹೀಗೆ ಮಾಡುವುದರಿಂದ ಆಯುಸ್ಸೂ ಪ್ರಜ್ಞೆಯೂ ಬಲವೂ ಯಶಸ್ಸೂ ಹೆಚ್ಚುವುವು.[2] ಒಡಕು

---

3 ಸಾಯಂ ಪ್ರಾತರ್ದ್ವಿಜಾತೀನಾಮಶನಂ ಶ್ರುತಿಚೋದಿತಂ। ನಾಂತರಾ ಭೋಜನಂ ಕುರ್ಯಾದಗ್ನಿಹೋತ್ರಸಮೋ ವಿಧಿಃ ॥ಇತಿಮನುಸ್ಮರಣಾತ್॥ ದ್ವಿಜಾತೀನಾಂ ಎಂದಿರುವುದರಿಂದ ಶ್ರಮಜೀವಿಗಳು ಬೆಳಗಾಗ ಕೆಲಸಕ್ಕೆ ತೊಡಗುವುದಕ್ಕೆ ಮೊದಲು ಅಲ್ಪಾಹಾರವನ್ನು ಮಾಡಬಹುದು ಎಂದಹಾಗಾಯಿತು. ಸಾಯಂಪ್ರಾತಶ್ಶಬ್ದಗಳಿಗೆ ಹಗಲುರಾತ್ರಿಯೆಂದು ಲಕ್ಷಣಾರ್ಥವನ್ನು ಮಾಡಬೇಕು.

4 ನಾರ್ಧರಾತ್ರೇ ॥೧೦॥ ನ ಮಧ್ಯಾಹ್ನೇ ॥೧೧॥ ನ ಸಂಧ್ಯಯೋಃ ॥೧೨॥ ವಿಷ್ಣು-೬೮॥

5 ಉಪಲಿಪ್ತೇ ಸಮೇ ಸ್ಥಾನೇ ಶುಚೌ ಶ್ಲಕ್ಷ್ಣಸಮನ್ವಿತೇ ॥ಬೋಧಾಯನಃ॥

6 ನಾಗ್ನ್ಯಾಗಾರೇ ನ ಚಾಕಾಶೇ ನ ಚ ದೇವಾಲಯಾದಿಷು ॥ಕೂ.ಪು.॥ ಶೂನ್ಯಾಗಾರೇ ವಹ್ನಿಗೃಹೇ ದೇವಾಗಾರೇ ಕಥಂಚನ ॥ವಿ-೬೮-೪೭॥ ವಹ್ನಿಗೃಹೇ ಎಂದರೆ ಗೃಹ್ಯಾಗ್ನಿಯಿರುವ ಸ್ಥಳವೆಂದೂ ಬೆಂಕಿ ಉರಿಯುತ್ತಿರುವ ಕೋಣೆಯೆಂದೂ ಅರ್ಥಮಾಡಬಹುದು.

1 ಪ್ರಶಸ್ತಶುದ್ಧಪಾತ್ರೇಷು ಭುಂಜೀತಾಕುಪಿತೋ ದ್ವಿಜಃ ॥ಕೂ.ಪು.॥ (ಶುದ್ಧಿಯನ್ನು ಶುದ್ಧಿಪ್ರಕರಣದಲ್ಲಿ ಹೇಳಿದೆ)

2 ಸೌವರ್ಣೇ ರಾಜತೇ ಪಾತ್ರೇ ತಾಮ್ರೇ ಪದ್ಮಪಲಾಶಯೋಃ। ಭೋಜನೇ ಭೋಜನೇ ಚೈವ ತ್ರಿರಾತ್ರಫಲಮಶ್ನುತೇ ॥ ಏಕಏವ ತು ಯೋ ಭುಙ್ಕ್ತೇ ವಿಮಲೇ ಕಾಂಸ್ಯಭಾಜನೇ। ಚತ್ವಾರಿ ತಸ್ಯ ವರ್ಧನ್ತೇ ಆಯುಃ ಪ್ರಜ್ಞಾ ಯಶೋ ಬಲಂ ॥ಪೈಠೀನಸಿ॥

ಪಾತ್ರೆಯೂ ಹರಿದೆಲೆಯೂ ವರ್ಜ್ಯಗಳು.[3] ಮುರಿದ ಪೀಠ ಅಜಿನ ಮಂಚ ಹಾಸಿಗೆ ವಾಹನ ಇವುಗಳ ಮೇಲೆ ಕುಳಿತುಕೊಂಡೂ, ಊಟದ ಪಾತ್ರೆಯನ್ನು ತೊಡೆಯ ಮೇಲಿಟ್ಟುಕೊಂಡೂ, ಅನ್ನವನ್ನು ತುತ್ತು ಹಾಕಿಸಿಕೊಂಡೂ ಉಣಬಾರದು.[4] ತೊಡೆಯಮೇಲೆ ಬೇಡವೆನ್ನುವುದು ಅಧಃಕಾಯದಿಂದ ದೂರ ಇರಬೇಕೆಂದರ್ಥ. ತುತ್ತು ಬೇಡ ಎಂದಿರುವುದು ಮಿತಕ್ಕೂ ಹಿತಕ್ಕೂ ಬಾಧೆಯೆಂದರ್ಥ.

## ೪. ಊಟಮಾಡುವವರ ಕ್ರಮ

ಅತಿಥಿಗಳಿಗೆ ಅಗ್ರಭೋಜನವೆಂದು ಹೇಳಿದ್ದಾಗಿದೆ. ಆಮೇಲೆ ಊಟಮಾಡುವವರಲ್ಲೂ ಕ್ರಮವಿದೆ—ಅಂಥಾವರು ಮನೆಯವರು ಕೆಲವರು, ಮನೆಗೆ ಬಂದವರು ಕೆಲವರು. ಬಾಲರೂ ವೃದ್ಧರೂ ಕನ್ನಿಕೆಯರೂ (ಮದುವೆಯಿಲ್ಲದವರು) ಸ್ವವಾಸಿನಿಯರೂ (ಮದುವೆಯಾಗಿ ತೌರಿನಲ್ಲಿರುವವರೂ) ಸುವಾಸಿನಿಯರು (ಮನೆಗೆ ಬಂದ ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳು, ಸೊಸೆ ಮುಂತಾದವರು) ಗರ್ಭಿಣಿಯರೂ ಆತುರರೂ (ರೋಗಿಗಳೂ, ರೋಗದಿಂದೆದ್ದವರೂ) ದುಃಖಿಗಳೂ ಭೃತ್ಯರೂ ಇತ್ಯಾದಿಗಳು ಮನೆಯವರು; ಮಿತ್ರರೂ ಬೀಗರೂ ಬಾಂಧವರೂ ಅಶನಾರ್ಥಿಗಳೂ ಅಭ್ಯಾಗತರು; ಇವರೆಲ್ಲರಿಗೂ ಆದರಿಸಿ ಊಟವನ್ನಿಟ್ಟು ತೃಪ್ತಿಯಾದಮೇಲೆ ಮನೆಯ ಯಜಮಾನ ಯಜಮಾನಿತಿಯರಿಬ್ಬರೂ ಊಟಮಾಡಬೇಕು [1] ಇದೊಂದು ಸೂಕ್ಷ್ಮ ಪ್ರಸಂಗ—ರೋಗಿಗಳಿಗೂ ದುಃಖಿಗಳಿಗೂ ಊಟದಮೇಲೆ ಇಷ್ಟವಿರುವುದಿಲ್ಲ. ಮಿತ್ರರೂ ಬೀಗರೂ ಬಾಂಧವರೂ ಕನ್ನಿಕೆಯರೂ ಸುವಾಸಿನಿಯರೂ ಸ್ವವಾಸಿನಿಯರೂ ಅಶನಾರ್ಥಿಗಳೂ ಇಷ್ಟವಿದ್ದರೂ ಸಂಕೋಚಪಡುತ್ತಾರೆ. ಬಾಲರೂ ವೃದ್ಧರೂ ಆತುರರೂ (ರೋಗಿಗಳೂ ರೋಗದಿಂದೆದ್ದವರೂ) ಗರ್ಭಿಣಿಯರೂ ಶ್ರಮಜೀವಿಗಳೂ ಅನ್ನಕ್ಕಾಗಿ ತವಕಪಡುತ್ತಾರೆ. ಗರ್ಭಿಣಿಯರ ವಿಷಯದಲ್ಲಿನ್ನೊಂದು ಸೂಕ್ಷ್ಮವಿದೆ—ಗರ್ಭಿಣಿಗೂ ಗರ್ಭದಲ್ಲಿರುವ ಶಿಶುವಿಗೂ ಒಂದೇ ಧಮನಿಯ

---

3 ನ ಭಿನ್ನಪಾತ್ರೇ ಭುಂಜೀತ ॥ಮ-iv-೬೫॥ (ಪಾತ್ರಶಬ್ದವು ಪಾತ್ರೆಗೂ ಎಲೆಗೂ ಎರಡಕ್ಕೂ ಅನ್ವಯಿಸುತ್ತದೆ)

4 ನ ಭಿನ್ನಾಸನಗತಃ ॥೧೮॥ ನ ಶಯನಗತಃ ॥೧೯॥ ನೋತ್ಸಂಗೇ ॥೨೦॥ ನ ಪಾಣೌ ॥೨೩॥ ವಿ-೬೮॥ ನ ಚರ್ಮೋಪರಿ ಸಂಸ್ಥಶ್ಚ॥.. .ಹಸ್ತ್ಯಶ್ವರಥಯಾನೋಷ್ಟ್ರಮಾಸ್ಥಿತೋ ನೈವ ಭಕ್ಷಯೇತ್ ॥ಬ್ರಹ್ಮಾಂಡಪುರಾಣ॥

1 ಭುಕ್ತವತ್ಸ್ವಥ ವಿಪ್ರೇಷು ಸ್ವೇಷು ಭೃತ್ಯೇಷು ಚೈವ ಹಿ । ಭುಂಜೀಯಾತಾಂ ತತಃ ಪಶ್ಚಾದವಶಿಷ್ಟಂ ತು ದಂಪತೀ॥ಮ-iii-೧೧೬॥ ಭೃತ್ಯೇಷು-ಪೋಷ್ಯವರ್ಗೇಷು ॥ ಬಾಲಸ್ವವಾಸಿನೀವೃದ್ಧಗರ್ಭಿಣ್ಯಾತುರಕನ್ಯಕಾಃ। ಸಂಭೋಜ್ಯಾತಿಥಿಭೃತ್ಯಾಂಶ್ಚ ದಂಪತ್ಯೋಃಶೇಷಭೋಜನಂ ॥೧೦೫॥ ಭೋಜಯೇಚ್ಚಾಗತಾನ್ ಕಾಲೇ ಸಖಿಸಂಬಂಧಿಬಾಂಧವಾನ್ ॥೧೦೮॥ ಯಾ-i ॥ (ಸುವಾಸಿನೀತಿಪಾಠಾಂತರಶ್ಚ). ತತಸ್ಸುವಾಸಿನೀದುಃಖಿಗರ್ಭಿಣೀವೃದ್ಧಬಾಲಕಾನ್ । ಭೋಜಯೇತ್ಸಂಸ್ಕೃತಾನ್ನೇನ ಪ್ರಥಮಂ....॥ಕೂರ್ಮಪುರಾಣ॥

ಮೂಲಕ (ಅನ್ನ) ರಸಸಂಚಾರವಾಗುವುದರಿಂದ ತಾಯಿಯು ಹಸಿದಿದ್ದರೆ ಅವಳ ಧಮನಿಯಲ್ಲಿ ರಸದ ನ್ಯೂನತ್ವವು ಸಂಭವಿಸಿ ಶಿಶುವಿನಿಂದ ರಸವೂ ಓಜಸ್ಸೂ ಮಾತೃ ಶರೀರಕ್ಕೆ ಪ್ರವಹಿಸುತ್ತದೆ, ಅದು ಅಯುಕ್ತವು. ಇಷ್ಟವಿಲ್ಲದವರನ್ನು ಬಲವಂತ ಮಾಡಿ, ಸಂಕೋಚದವರನ್ನುಪಚರಿಸಿ, ತವಕಪಡುವವರಿಗೆ ಬೇಗ ಊಟವನ್ನಿಟ್ಟು, ಊಟಮಾಡಿಸುವುದು ಗೃಹಸ್ಥಧರ್ಮ. ಆದರಿಂದ ಅವರೆಲ್ಲರಿಗೂ ಅಗ್ರಭೋಜನವೂ ದಂಪತಿಗಳಿಗೆ ಶೇಷಭೋಜನವೂ ವಿಧಾಯಕವಾಗಿದೆ. ಈ ಕ್ರಮನಿಯಮದಲ್ಲಿ ಅಡಕವಾಗಿರುವ ತತ್ತ್ವವನ್ನರಿತು ಉಕ್ತಕ್ರಮವು ಉದಾಹರಣೆಯೆಂದು ತಿಳಿದು ಸಂದರ್ಭಾನುಸಾರವಾಗಿ ನಡೆಯಬೇಕು.

## ೫. ಇತರ ನಿಯಮಗಳು

ಬಾಯಿ ಕೈಕಾಲುಗಳನ್ನು ತೊಳೆದುಕೊಂಡು ಒರೆಸದೆ ಒದ್ದೆಯಾಗಿಟ್ಟುಕೊಂಡು ಊಟವನ್ನು ಮಾಡಬೇಕು [1] ಬಾಯಿ ಎರಡು ಕೈಗಳು ಎರಡು ಕಾಲುಗಳು ಒದ್ದೆಯಾಗುವುದಕ್ಕೆ ಋಷಿಗಳು ಪಂಚಾರ್ದ್ರತ್ವವೆನ್ನುತ್ತಾರೆ. ಗ್ರಾಮ್ಯಭಾಷೆಯಲ್ಲಿ ಈಗಲೂ ಮೂರು ನೀರು ಎನ್ನುವ ವಾಡಿಕೆಯಿದೆ—ಬಾಯಿಗೂ ಕೈಗಳಿಗೂ ಕಾಲುಗಳಿಗೂ ಮೂರಕ್ಕೂ ನೀರೆಂದರ್ಥ. ಊಟಕ್ಕೆ ಏಳುವಾಗ ಎಬ್ಬಿಸುವಾಗ ಮೂರು ನೀರು ಎಂಬುದನ್ನು ಪ್ರಯೋಗಿಸುತ್ತಾರೆ. ನೀರು ಕುಡಿಯುವ ಸಂದರ್ಭದಲ್ಲಿ ಎರಡು ನೀರು (ಅಂದರೆ ಕೈಬಾಯಿ ತೊಳೆದುಕೊಳ್ಳುವುದಕ್ಕೆ ನೀರು) ಎಂಬುದನ್ನು ಪ್ರಯೋಗಿಸುತ್ತಾರೆ. ಆಚಮನವನ್ನೂ ಮಾಡಬೇಕು, ಅನ್ನನಾಳವೂ ಒದ್ದೆಯಾಗುತ್ತದೆ, ಅಂತಶ್ಶುದ್ಧಿಯೂ ಆಗುತ್ತದೆ. ಗಂಧಪುಷ್ಪಾದಿಗಳಿಂದ ಅಲಂಕರಿಸಿಕೊಂಡು ಸಮಾಧಾನವಾಗಿ ಊಟಮಾಡಬೇಕು [2] ಅನ್ನವನ್ನು ಬಡಿಸಲು ಬಂದೊಡನೆಯೇ ಸಂತೋಷವಾಗಿ ಪ್ರಸನ್ನತೆಯಿಂದ ವಂದಿಸಿ ಅಭಿನಂದಿಸಿ ಪೂಜಿಸಿ ನಿಂದಿಸದೆ ಅಸಹ್ಯಪಡದೆ ಮೌನವಾಗಿ ಒಂದೇ ಮನಸ್ಸಿನಿಂದ ಊಟವನ್ನು ಮಾಡಬೇಕು.[3]

---

1 ಉಪಲಿಪ್ತೇ ಶುಚೌ ದೇಶೇ ಪಾದೌ ಪ್ರಕ್ಷಾಲ್ಯ ವೈ ಕರೌ । ಆಚಮ್ಯಾರ್ದ್ರಾನನೋಽಕ್ರೋಧಃ ಪಂಚಾರ್ದ್ರೋ ಭೋಜನಂ ಚರೇತ್ ॥ಕೂರ್ಮಪುರಾಣ॥ ಹಸ್ತಪಾದೌ ತಥೈವಾಸ್ಯಮೇಷಪಂಚಾರ್ದ್ರತಾ ಮತಾ ॥ವ್ಯಾಸಃ॥

2 ಸುಮನಾಸ್ಸಮ್ಯಗನುಲಿಪ್ತಶ್ಚ ॥ವಿ.೩೮-೪೩॥

3 ಪೂಜಯೇದಶನಂ ನಿತ್ಯಮದ್ಯಾಚ್ಚೈತದಕುತ್ಸಯನ್ । ದೃಷ್ಟ್ವಾ ಹೃಷ್ಯೇತ್ಪ್ರಸೀದೇಚ್ಚ ಪ್ರತಿನಂದೇಚ್ಚ ಸರ್ವಶಃ ॥೫೪॥ ಪೂಜಿತಂಹ್ಯಶನಂ ನಿತ್ಯಂ ಬಲಮೂರ್ಜಂ ಚ ಯಚ್ಛತಿ ॥೫೫॥ ಮ-ii ॥ ಅನ್ನಂ ನ ನಿಂದ್ಯಾತ್ । ತದ್ವ್ರತಂ ॥ತೈ.ಉ.॥ ಅನ್ನಪಾನವಿಧಾನೇನ ಭುಂಜೀತಾನ್ನಂ ವಿನಾತ್ಯಯಾತ್। ಅಭಿನಂದ್ಯ ಪ್ರಸನ್ನಾತ್ಮಾ ಹುತ್ವಾ ದತ್ತ್ವಾ ಚ ಶಕ್ತಿತಃ ॥ ಪಾಕಂ ಸಜಲಮೇಕಾಂತೇ ಯಥಾಸುಖಮವಿಬ್ರುವನ್ ॥ಅ.ಸಂ-ದಿನಚರ್ಯ॥ ಅಶ್ನೀಯಾತ್ತನ್ಮನಾ ಭೂತ್ವಾ ॥ವಿ.ಪು.॥

ಮತ್ತೊಬ್ಬರ ಮನೆ ಅಡಿಗೆಯ ರುಚಿಯನ್ನು ಬಯಸಬಾರದು.[4] ಅದು ಸಿಗುವುದಿಲ್ಲ, ಸಿಕ್ಕಿದುದು ರುಚಿಸುವುದಿಲ್ಲ, ಚಾರಿತ್ರಕ್ಕೂ ಭಂಗವಾಗುತ್ತದೆ. ರಸಭೇದದಿಂದ ಅನ್ನವು ಮಧುರ(ಸಿಹಿ) ತಿಕ್ತ(ಕಹಿ) ಅಮ್ಲ(ಹುಳಿ) ಲವಣ(ಉಪ್ಪು) ಕಟು(ಖಾರ) ಕಷಾಯ(ಒಗರು) ಎಂದಾರುಪ್ರಕಾರವಾದುದು.[5] ಪಾಕಭೇದದಿಂದ ದ್ರವ (ನೀರಾದುದು) ಕಠಿಣ(ಗಟ್ಟಿಯಾದುದು) ಎಂದೆರಡು ಪ್ರಕಾರವಾದುದು. ಸಿಹಿಯನ್ನು ಮೊದಲೂ, ಉಪ್ಪು ಹುಳಿಯನ್ನು ಮಧ್ಯದಲ್ಲಿಯೂ ಕಹಿ ಖಾರವನ್ನು ಕೊನೆಯಲ್ಲಿಯೂ, ಹಾಗೆಯೇ ನೀರಾದುದನ್ನು ಮೊದಲೂ ಗಟ್ಟಿಯಾದುದನ್ನು ಮಧ್ಯದಲ್ಲಿಯೂ ನೀರಾದುದನ್ನು ಮತ್ತೆ ಕೊನೆಯಲ್ಲಿಯೂ ಊಟಮಾಡಬೇಕು. ಈ ಕ್ರಮವನ್ನು ಅನುಸರಿಸುವುದರಿಂದ ಬಲವೂ ಕಡಿಮೆಯಾಗುವುದಿಲ್ಲ, ಆರೋಗ್ಯವೂ ಕೆಡುವುದಿಲ್ಲ.[6] ಜೀರ್ಣವಾಗುವುದರಿಂದ ಬಲವೃದ್ಧಿ, ಅಜೀರ್ಣವಾಗದಿರುವುದರಿಂದ ಆರೋಗ್ಯ ಕೆಡದಿರುವುದು, ಎಂದಭಿಪ್ರಾಯ. ಒಂದಾವೃತ್ತಿ ಬಾಯಿಗೆ ಹಿಡಿಯುವಷ್ಟನ್ನಕ್ಕೆ ಒಂದು ಗ್ರಾಸವೆನ್ನುತ್ತಾರೆ.[7] ಮುನಿಗಳಿಗೆ ಎಂಟು ಗ್ರಾಸವೂ ವಾನಪ್ರಸ್ಥರಿಗೆ ಹದಿನಾರೂ ಗೃಹಸ್ಥರಿಗೆ ಮೂವತ್ತೆರಡೂ ಆಶ್ರಮಾನುಗುಣವಾಗಿ ವಿಧಾಯಕವಾಗಿದೆ. ಬ್ರಹ್ಮಚಾರಿಗಳು ಬೆಳೆಯುವವರೂ ಓದುವವರೂ ಭಿಕ್ಷಾನ್ನದಿಂದ ಜೀವಿಸುವವರೂ ಆದುದರಿಂದ ಅವರಿಗೆ ಗ್ರಾಸನಿಯಮವನ್ನು ಹೇಳಿಲ್ಲ.[8] ಊಟದಿಂದ ತೊಂದರೆಯಾಗಬಾರದೆಂಬುದೇ ಆಶಯ[9] ಶೇಷಕ್ಕೆ ಶೇಷಭಾಗಿಗಳಾದ ಜೀವಿಗಳಿವೆಯೆಂದರಿತು, ಹಾಲು ಮೊಸರು ತುಪ್ಪ ಜೇನುತಪ್ಪ ಮಾಂಸ ಮೋದಕಗಳನ್ನು ಬಿಟ್ಟು, ಮಿಕ್ಕ ಆಹಾರಗಳಲ್ಲಿ ಶೇಷವನ್ನುಳಿಸಿ ಊಟಮಾಡಬೇಕು.[10] ಪಂಕ್ತಿಯಲ್ಲಿ ಕುಳಿತಾಗ ಎಲ್ಲರೂ ಜತೆಯಲ್ಲಿ ಊಟಮಾಡಬೇಕು, ಮೊದಲು ಮಾಡಲೂಬಾರದು,

---

4 ಪರಪಾಕರುಚಿರ್ನ ಸ್ಯಾತ್ ॥ಯಾ-1.೧೧೨॥

5 ರಸಾಸ್ಸ್ವಾದ್ವಮ್ಲಲವಣತಿಕ್ತೋಷಣಕಷಾಯಕಾಃ ॥ಅ.ಸಂ-ಆಯುಷ್ಕಾಮೀಯ॥

6 ಅಶ್ನೀಯಾತ್ತನ್ಮನಾ ಭೂತ್ವಾ ಪೂರ್ವಂ ತು ಮಧುರಂ ರಸಂ। ಲವಣಾಮ್ಲೌ ತಥಾ ಮಧ್ಯೇ ಕಟುತಿಕ್ತಾದಿಕಾಸ್ತತಃ ॥ ಪ್ರಾಗ್ದ್ರವಂ ಪುರುಷೋಽಶ್ನೀಯಾನ್ಮಧ್ಯೇ ತು ಕಠಿನಾಶನಂ। ಅಂತೇಪುನದ್ರ್ರವಾಶೀ ತು ಬಲಾರೋಗ್ಯೇ ನ ಮುಂಚತಿ ॥ವಿಷ್ಣುಪುರಾಣೇ॥

7 ವಕ್ತ್ರಪ್ರಮಾಣಪಿಂಡಾಶ್ಚ ಗ್ರಸೇದೇಕೈಕಶಃ ಪುನಃ ॥ಅಶ್ವಮೇಧಿಕೇ॥

8 ಅಷ್ಟೌ ಗ್ರಾಸಾಮುನೇರ್ಭಕ್ಷ್ಯಾಃ ಷೋಡಶಾರಣ್ಯವಾಸಿನಃ। ದ್ವಾತ್ರಿಂಶಸ್ತು ಗೃಹಸ್ಥಸ್ಯ ಹ್ಯಮಿತಂ ಬ್ರಹ್ಮಚಾರಿಣಃ ॥ಆಪಸ್ತಂಬಃ॥ (ಪರಮಾವಧಿಯನ್ನು ಹೇಳಿದ್ದಾರೆ.)

9 ಯಥಾಽನ್ನೇನ ವ್ಯಥಾ ನ ಸ್ಯಾತ್ತಥಾ ಭುಂಜೀತ ನಿತ್ಯಶಃ ॥ಅಶ್ವಮೇಧಿಕೇ॥

10 ಭೋಜನಂ ತು ನ ನಿಶ್ಶೇಷಂ ಕುರ್ಯಾತ್ಪ್ರಾಜ್ಞಃ ಕಥಂಚನ। ಅನ್ಯತ್ರದಧಿಸಕ್ತ್ವಾಜ್ಯಂ ಪಲಂ ಕ್ಷೀರಂ ಚ ಮಧ್ವಪಃ ॥ಪುಲಸ್ತ್ಯಃ॥ ಭುಕ್ತೋಚ್ಛಿಷ್ಟಂ ಸಮಾದಾಯ ಸರ್ವಸ್ಮಾತ್ಕಿಂಚಿದಾಚರ್ಮ। ಉಚ್ಛಿಷ್ಟಭಾಗಧೇಯೇಭ್ಯಸ್ಸೋದಕಂ ನಿರ್ವಪೇದ್ಭುವಿ ॥ದೇವಲಃ॥ (ಊಟದ ತಣಿಗೆಯಲ್ಲಿ ಮಿಕ್ಕುದನ್ನು ತಂದು ನೀರು ಹಾಕಿ ಅದಕ್ಕಾಗಿ ಕಾದಿರುವ ಪ್ರಾಣಿಗಳಿಗೆ ಸುರಿಯುವ ಈ ಸತ್ಸಂಪ್ರದಾಯವು ಹಳ್ಳಿಗಳಲ್ಲಿನ್ನೂ ನಡೆಯುತ್ತಿದೆ.)

ಮೊದಲು ಏಳಲೂಬಾರದು, ಇತ್ಯಾದಿ ಸೌಜನ್ಯ ಸಭ್ಯತ್ವ ನಿಯಮಗಳು ಅನೇಕ ವಾಗಿವೆ. ಅತಿಯಾಗಿ ಊಟಮಾಡಬಾರದು, ರಾತ್ರಿಯ ಹೊತ್ತಂತೂ ಮಿತವಾಗಿ ಉಣಬೇಕು.[11] ಅಜೀರ್ಣದಲ್ಲಿಯೂ ಅತಿ ಹಸಿವೆಯಾದಾಗಲೂ ಊಟಮಾಡ ಬಾರದು [12] ಅಜೀರ್ಣದಲ್ಲಿ ಮಾಡಿದರೆ ಅರಗುವುದಿಲ್ಲ, ಕೊಂದರೆಯು ಹೆಚ್ಚುತ್ತದೆ, ಅತಿ ಹಸಿವೆಯಲ್ಲಿ ಮಾಡಿದರೆ ಮಿತಿಯಾಗಿ ಆಗುವುದಿಲ್ಲ ಅಲ್ಲಿಯವರೆಗೂ ಬಿಡದೆ ಮೊದಲೇ ಊಟಮಾಡಬೇಕು ಎಂದಭಿಪ್ರಾಯ.

ಊಟವು ಹೊಟ್ಟೆಯ ಪೂಜೆ, ಅಥವಾ ನಾಲಿಗೆಯ ಸೇವೆ, ಎಂದು ಭಾವಿಸ ಬಾರದು. ಹಾಗೆ ಮಾಡುತ್ತಿರುವುದೇ ಈಗಾಗಿರುವ ಅವ್ಯವಸ್ಥೆಯು ಯಾರಾದರೂ ಊಟದ ವಿಷಯದಲ್ಲಿ ನಿಯಮವನ್ನು ಪಾಲಿಸಿದರೆ ಅವರನ್ನು ದೂಷಿಸುವುದೊಂದು ಕುಚೋದ್ಯವೂ ನಡೆಯುತ್ತಿದೆ. ನಮ್ಮ ರಾಷ್ಟ್ರಪಿತರು ಆಹಾರದ ವಿಷಯದಲ್ಲಿ ಮಿತತ್ವವನ್ನು ಪಾಲಿಸುತ್ತಿದ್ದರು ಉಪವಾಸವು ಅವರ ಐಷೀಕಾಸ್ತ್ರವಾಗಿತ್ತು. ಉಣುವುದು ಬದುಕಿರುವುದಕ್ಕೆ, ಬದುಕಿರುವುದು ಉಣುವುದಕ್ಕಲ್ಲ, ಎಂಬ ನೀತಿ[13] ಯನ್ನು ಅಕ್ಷರಶಃ ಅನುಸರಿಸಿ ಮಾರ್ಗದರ್ಶಿಗಳಾಗಿದ್ದರು ಜೀವನದ ಅವಶ್ಯಕತೆ ಯನ್ನು ಚಾಪಲ್ಯಕ್ಕೆ ತಿರುಗಿಸಬಾರದೆಂಬುದೇ ಸಂಗ್ರಹವು.

## ೬. ಭೋಜ್ಯಾಽಭೋಜ್ಯ ವಿಚಾರ

ತಿನ್ನಬಹುದಾದುದು (ಭಕ್ಷ್ಯ ಭೋಜ್ಯ,) ತಿನ್ನಬಾರದುದು (ಅಭಕ್ಷ್ಯ ಅಭೋಜ್ಯ,) ಎಂಬುದನ್ನು ಅವರವರ ಮಟ್ಟಕ್ಕೆ ಅವರವರು ವ್ಯವಸ್ಥೆ ಮಾಡಿಕೊಂಡು ಆ ಪ್ರಕಾರ ನಡೆಯುತ್ತಿರುತ್ತಾರೆ. ಈ ವಿಷಯದಲ್ಲಿ ಸಾರ್ವಜನಿಕವಾಗಿಯೂ ಸಾರ್ವಕಾಲಿಕವಾಗಿಯೂ ನಿರ್ಣಯಿಸುವುದೂ ನಿರ್ಣಯದಂತೆ ನಡೆಯುವುದೂ ಸಹ ಸಾಧ್ಯವಲ್ಲ. ದೇಶ ಕಾಲ ಅವಸ್ಥೆ ಪರಿಸ್ಥಿತಿ ಅನುಕೂಲ ಆಚಾರ ಅಭ್ಯಾಸ ಅಭಿರುಚಿ ಸಂದರ್ಭ ಲಭ್ಯಾಲಭ್ಯ ಜನ ಜನಾಂಗ ಇತ್ಯಾದಿ ವೈವಿಧ್ಯಗಳಿಗನುಗುಣವಾಗಿ ವ್ಯವಸ್ಥೆಯಾಗಬೇಕಾದುದು. ಅವರವರ ವ್ಯವಸ್ಥೆಯ ಪ್ರಕಾರ ನಡೆಯುತ್ತಿರುವುದ ರಿಂದ ಭೋಜ್ಯದ ವಿಷಯದಲ್ಲಿ ಹೇಳಬೇಕಾದುದೇನೂ ಇಲ್ಲ. ಅಭೋಜ್ಯದ ವಿಷಯದಲ್ಲಿ ತತ್ತ್ವಬೋಧಕವಾದ ಕೆಲವು ಸೂಚನೆಗಳನ್ನು ಮಾತ್ರ ಕೊಟ್ಟರೆ ಸಾಕು. ಅದಕ್ಕಾಗಿ ಅಭೋಜ್ಯವನ್ನು ಸ್ಥೂಲವಾಗಿ (1) ದುರನ್ನ (2) ದೂಷಿತಾನ್ನ (3) ನಿಂದಿತಾನ್ನ (4) ಅಹಿತಾನ್ನ (5) ಸಂಕೀರ್ಣಾನ್ನ ಎಂದು ಐದಾಗಿ ವಿಂಗಡಿಸ

11 ವರ್ಜಯೇಚ್ಚಾತಿಭೋಜನಂ ॥ಯಾ-i-೧೧೨॥ (ರಾತ್ರೌ) ನಾತಿತೃಪ್ಯಾಥ ಸಂವಿಶೇತ್ ॥ಯಾ-i-೧೧೪॥ ಸಾಯಂ ಭುಕ್ತ್ವಾ ಲಘು ಹಿತಂ ॥ಅ.ಸಂ-ದಿನಚರ್ಯಾ॥

12 ನಾಜೀರ್ಣೇ ಭೋಜನಂ ಕುರ್ಯಾತ್ಕುರ್ಯಾನ್ನಾತಿಬುಭುಕ್ಷಿತಃ ॥ಬ್ರಹ್ಮಾಂಡೇ॥

13 Some people eat to live, others live to eat.

ಬಹುದು. ಹೀಗೆ ವರ್ಗಗಳನ್ನು ವಿಂಗಡಿಸಿಕೊಂಡು ಅನುಭವದಿಂದಲೂ ಶಾಸ್ತ್ರದ ಸಹಾಯದಿಂದಲೂ ಯುಕ್ತಾಯುಕ್ತವನ್ನು ಅರಿಯಬೇಕು.

(1) **ದುರನ್ನ**ವೆಂದರೆ ಅನ್ನದ ಅಥವಾ ಪದಾರ್ಥದ ದೋಷದಿಂದಲೇ ತಿನ್ನಬಾರದಾದುದು. ಗಿಣ್ಣು ಹಾಲು, ಫಲಕ್ಕೆ ಬಂದ ಹಸುವಿನ ಎಮ್ಮೆಯ ಹಾಲು, ಕರುಸತ್ತ ಹಸುವಿನ ಹಾಲು, ಒಂಟೆಯ ಹಾಲು, ಕುದುರೆ ಮುಂತಾದ ಒಂದು ಗೊರಸಿನ ಪ್ರಾಣಿಯ ಹಾಲು ಕಾಡೆಮ್ಮೆಯೊಂದು ವಿನಾ ಇತರ ಕಾಡುಮೃಗಗಳ ಹಾಲು ನಾಯಿಕೊಡೆ ಮರ ಒಡೆದು ಪ್ರಸವಿಸುವ ಕೆಂಪು ರಸ ಇತ್ಯಾದಿಗಳು. (2) **ದೂಷಿತಾನ್ನ**ವೆಂದರೆ ಶುದ್ಧವಾದ ಆಹಾರಕ್ಕೆ ಶುದ್ಧವಾದ ಮತ್ತೊಂದು ವಸ್ತುಸಂಪರ್ಕವಾಗಲೀ, ಅಶುದ್ಧವಾದುದರ ಸಂಪರ್ಕವಾಗಲೀ ಆಗುವುದು. ಹಾಲಿಗೆ ಹುಳಿ, ಪಾಯಸಕ್ಕೆ ಉಪ್ಪು, ಬೆರೆದರೆ ಹುಳಿ ಉಪ್ಪು ಎರಡೂ ತಿನ್ನುವ ಪದಾರ್ಥವೇ ಆದರೂ ಹಾಲೂ ಪಾಯಸವೂ ದೂಷಿತವಾಗುವುವು—ಶುದ್ಧಕ್ಕೆ ಶುದ್ಧವು ಮಿಶ್ರವಾಗಿ ಕೆಡುವುದಕ್ಕೆ ಇದು ಉದಾಹರಣೆ. ಶುದ್ಧವಾದ ಅನ್ನವು ಕ್ರಿಮಿಕೀಟಾದಿಗಳೂ ನಖಕೇಶಾದಿಗಳೂ (ಶರೀರದಿಂದ ಬೇರ್ಪಟ್ಟವು) ಬೀಳುವುದೂ ಉಗುಳು ಬೀಳುವುದೂ ಹೆಕ್ಕಿಯು ಎಂಜಲು ಮಾಡುವುದೂ ಹಸುವು ಮೂಸಿನೋಡುವುದೂ ಇತ್ಯಾದಿಗಳಿಂದ ದೂಷಿತವಾಗುತ್ತದೆ. ಇದು ಶುದ್ಧಕ್ಕೆ ಅಶುದ್ಧಸಂಪರ್ಕವಾಗುವುದಕ್ಕೆ ಉದಾಹರಣೆ. ಇದನ್ನು ಶುದ್ಧಿಪ್ರಕರಣದಲ್ಲಿ ವಿವರಿಸಿದೆ. ರೋಗಿಗಳ ಕ್ರೂರಿಗಳ ಕೃತಘ್ನರ ಲೋಭಿಗಳ ಸ್ತ್ರೀಜಿತರ ಪತಿತರ ಕಳ್ಳರ ವೇಶ್ಯೆಯರ ಮುಂತಾದವರ ಅನ್ನವೂ ದೂಷಿತವೇ, ಅದರಲ್ಲಿ ದೋಷವು ನಾನಾ ಪ್ರಕಾರವಾದವು. (3) **ನಿಂದಿತಾನ್ನ**—ಶುದ್ಧವೇ ಆದರೂ ಕಾರಣಾಂತರದಿಂದ ಕೆಡುವುದು. ಸತ್ಕಾರವಿಲ್ಲದೆ ಅಥವಾ ತಿರಸ್ಕಾರದಿಂದ ಇಟ್ಟ ಅನ್ನವು ನಿಂದಿತವು. ಯಾರು ಬರುತ್ತೀರೋ ಬನ್ನಿರೋ ಎಂದು ಕೂಗಿ ಊಟಕ್ಕೆ ಇಡುವ ಅನ್ನವು ಸಂಘುಷ್ಟಾನ್ನವು, ಅದೂ ನಿಂದಿತವೇ. ಈ ಎರಡು ಪ್ರಕಾರದ ಅನ್ನದಲ್ಲಿಯೂ ತಿರಸ್ಕಾರವೂ ಆತ್ಮಾವಹೇಳನವೂ ಆಗುವುದು. ಬಹು ಮಂದಿ ಸೇರಿ ಬೇಕಾದಷ್ಟು ಜನರಿಗೆ ಮಾಡುವ ಅನ್ನವು ಗಣಾನ್ನವು, ಅದೂ ನಿಂದಿತವೇ.[1] ಅದರಲ್ಲಿ ಯಾವ ಸತ್ಕಾರವೂ ಇಲ್ಲ, ಯಾರ ಜವಾಬ್ದಾರಿಯೂ ಇಲ್ಲ, ಯಾರನ್ನು ನಂಬುವುದು, ಯಾರಿಗಾಗಿ ಊಟಮಾಡುವುದು, ಅನ್ನಕಾಣದ ಕಂಗಾಳಿಗಳಂತೆ ತಿನ್ನುವುದಾಗುತ್ತದೆ. ಯಾರದೋ ಅನ್ನವನ್ನು ಯಾರೋ ಇನ್ನೊಬ್ಬನು ಯಾರಿಗೋ ಇಡುತ್ತೇನೆಂದು ಭ್ರಮಿಸಿ ಯಾರೋ ಮತ್ತೊಬ್ಬನಿಗಿಟ್ಟದ್ದೂ ನಿಂದಿತವೇ. ಅಂಥಾದ್ದರಲ್ಲಿ ದ್ರೋಹವೂ ಅವ್ಯವಸ್ಥೆಯೂ ಮೊದಲಿನಿಂದ ಕೊನೆಯವರೆಗೂ ಇರುತ್ತದೆ. ಅಂಥಾದ್ದೂ ನಿಂದಿತವೇ. ತಾನು ಉಂಡು ಬಿಟ್ಟ, ಪರರು ಉಂಡು ಬಿಟ್ಟ, ಅನ್ನವು ಎಂಜಲು—ಕಂಡಹಾಗೆಯೇ ಅದು ನಿಂದಿತವು. (4) **ಅಹಿತಾನ್ನ**—ಅನ್ನವೇ

1 **Too many cooks spoil the borth** ಎಂಬ ನ್ಯಾಯವೇ ಅದರಲ್ಲಿ.

ಅಹಿತವಾದರೂ ಅಹಿತರಿಟ್ಟ ಅನ್ನವಾದರೂ ಅಹಿತಾನ್ನವು. ಅಹಿತರು ಅಂದರೆ ಶತ್ರುಗಳೂ ಶತ್ರುಗಳ ಪರವಾದವರೂ, ಅವರ ಅನ್ನವು ಅಹಿತಾನ್ನವೆಂದೇ ಭಾವನೆ. ಏಕೆಂದರೆ ಅದರಲ್ಲಿ ಕೇಡಾಗುವ ಸಂಭವವಿರುತ್ತದೆ. ಪ್ರಮಾದವಾದೀತೆಂದು ಅದನ್ನು ಉಣಬಾರದು. ಅನ್ನವು ಸ್ವತಃ ಅಹಿತವಾಗುವುದು ಅನೇಕ ಕಾರಣಗಳಿಂದ. ಅಡಿಗೆ ಮಾಡಿದುದನ್ನು ಬಹಳ ಹೊತ್ತು ಇಟ್ಟರೆ ತಾಮಸಾನ್ನವಾಗುವುದು—ಉಂಡರೆ ನಿದ್ದೆ ಆಲಸ್ಯ ಪ್ರಮಾದಗಳು ಸಂಭವಿಸುತ್ತವೆ. ಈಹೊತ್ತು ಮಾಡಿದ್ದನ್ನು ನಾಳೆಯವರೆಗೂ ಇಟ್ಟರೆ ಅದು ಪರ್ಯುಷಿತ (ತಂಗೂಳು) ಆಗುತ್ತದೆ. ಮಧುರವಾದ ಪದಾರ್ಥವನ್ನು ಹೆಚ್ಚು ಕಾಲ ಇಟ್ಟರೆ ಹುಳಿಯಾಗುವುದುಂಟು. ಹಾಗೆ ಹುಳಿಯಾದುದು ಶುಕ್ತವು. ತಾಮಸವೂ ಪರ್ಯುಷಿತವೂ ಶುಕ್ತವೂ ಸಾಮಾನ್ಯವಾಗಿ ಅಭೋಜ್ಯಗಳು. ತುಪ್ಪದಲ್ಲಿ ಎಣ್ಣೆಯಲ್ಲಿ ಕರಿದ ಭಕ್ಷ್ಯಗಳು ತಾಮಸವಾಗುವುದಿಲ್ಲ. ತಂಬಿಟ್ಟು ಚಿಗಳಿ ಗುಡಪಾವುಟಿ ರವೆಉಂಡೆ ಮುಂತಾದವು ಒಂದು ರಾತ್ರಿ ಕಳೆದರೂ ಪರ್ಯುಷಿತವಾಗುವುದಿಲ್ಲ. ಹಾಲು ಹುಳಿಯಾಗಿ ಮೊಸರಾದರೆ ಶುಕ್ತವಲ್ಲ. ಇವನ್ನು ಕೆಲಕಾಲಪರ್ಯಂತ ಉಪಯೋಗಿಸಬಹುದು. ಇವನ್ನೂ ಬಹಳ ಕಾಲವಾದಮೇಲೆ ತಿನ್ನಬಾರದು. ಮೊಸರೂ ತಿಲಸಂಬಂಧವಾದುದೂ ರಾತ್ರಿಯಹೊತ್ತು ಉಂಡರೆ ಅಹಿತವು.[2] (5) **ಸಂಕೀರ್ಣಾನ್ನ**ವು ಅನೇಕ ಕಾರಣಗಳಿಂದಲೂ ಕೆಲಕೆಲವು ಸಮಯಗಳಲ್ಲಿಯೂ ಅಭೋಜ್ಯವಾಗುವುವು. ಇವೆಲ್ಲವನ್ನೂ ವರ್ಗವರ್ಗಗಳಾಗಿ ವಿಂಗಡಿಸುವುದು ವಿಸ್ತಾರದ ಕೆಲಸ. ಕೆಲವು ಮುಖ್ಯ ಮುಖ್ಯವಾದುವನ್ನು ಸೂಚಿಸಿದರೆ ಪ್ರಕೃತಕ್ಕೆ ಸಾಕು. ಎಳ್ಳುಪುಡಿ ಹಾಕಿ ಮಾಡುವ ಹುಳಿಯನ್ನ ಎಳ್ಳುಪುಡಿ ಅನ್ನ, ಹೆಸರುಬೇಳೆ ಬೆರಸಿ ಮಾಡುವ ಹುಗ್ಗಿ, ಮುಂತಾದವು ಕೃಸರಾನ್ನಗಳು. ತುಪ್ಪ ಹಾಲು ಬೆಲ್ಲ ಗೋಧಿಹಿಟ್ಟು ರವೆ ಇವುಗಳಿಂದ ಮಾಡುವ ಒಬ್ಬಟ್ಟು ಗುಡಪಾವುಟಿ ಇವು ಸಂಯಾವಗಳು. ವಡೆ ಗಾರಿಗೆ ಚಿರೋಟಿ ಅತಿರಸ ಮುಂತಾದವುಗಳು ಅಪೂಪಗಳು. ಇಂಥಾ ರಸವತ್ತಾದ ಆಹಾರವನ್ನು ತನಗಾಗಿ ಮಾಡಿಕೊಳ್ಳಬಾರದು. ಇಂಥಾವನ್ನು ದೇವರಿಗೂ ಯಜ್ಞಕ್ಕೂ ಸಮಾರಾಧನೆಗೂ ಮಾಡಿದರೆ ಆ ಪ್ರಕೃತಗಳು ಜರುಗಿದ ಮೇಲೆ ಸೇವಿಸಬೇಕು. ಅಲ್ಲಿಯವರೆಗೂ ಮೀಸಲಾದುದರಿಂದ ಅಭೋಜ್ಯವು.[3] ಮೃತರಿಗಾಗಿ ಸಪಿಂಡೀಕರಣದವರೆಗೂ ಮಾಡುವ ಅನ್ನವೂ ಅಭೋಜ್ಯವು. ತಿಂದರೂ ತೃಪ್ತಿಯಾಗದುದೂ ಬಾಣಂತಿಯರಿಗೂ ರೋಗಿಗಳಿಗೂ ಮಾಡಿದುದೂ ಅಭೋಜ್ಯವೇ.

---

2 (ದಧಿ) ನೈವಾದ್ಯಾನ್ನಿಶಿ ॥ ಸರ್ವಂ ಚ ತಿಲಸಂಬದ್ಧಂ ನಾದ್ಯಾದಸ್ತಮಿತೇರವೌ ॥ ಅ. ಸಂ-ದಿನಚರಿ॥ ಮ-iv-೭೫॥

3 ವೃಥಾಕೃಸರಸಂಯಾವಂ ಪಾಯಸಾಪೂಪಮೇವ ಚ । ಅನುಪಾಕೃತಮಾಂಸಾನಿ ದೇವಾನ್ನಾನಿ ಹವೀಂಷಿ ಚ ॥ಮ-v-೭॥ ದೇವತಾದ್ಯನುದ್ದೇಶೇನ ಆತ್ಮಾರ್ಥಂ ಪಚ್ಯತೇ ತದ್ವೃಥಾ । (ನಪಚೇದನ್ನಮಾತ್ಮನೇ ಇತ್ಯುಕ್ತತ್ವಾತ್) ದೇವಾನ್ನಾನಿ ನೈವೇದ್ಯಾತ್ಪ್ರಾಕ್, ಹವೀಂಷಿ ಪುರೋಢಾಶಾದೀನಿ ಹೋಮಾತ್ಪ್ರಾಕ್, ವರ್ಜಯೇತ್ ॥ಕುಲ್ಲೂಕಃ॥

ಇತ್ಯಾದಿ ಅಭೋಜ್ಯಗಳ ವಿಷಯದಲ್ಲಿ ವೈದ್ಯಶಾಸ್ತ್ರದ ಆಧಾರವೂ ಇದೆ.[4] ಈ ಪ್ರಕರಣದಲ್ಲಿ ಅನ್ನವೆಂದರೆ ಊಟಮಾಡುವ ಪದಾರ್ಥವೆಂದರ್ಥಮಾಡಿಕೊಳ್ಳಬೇಕು—ಅಕ್ಕಿಯಿಂದ ಮಾಡಿದುದೆಂಬ ರೂಢಾರ್ಥವೊಂದೇ ಅಲ್ಲ.

ಸಜೀವ ಪದಾರ್ಥವನ್ನೇ ತಿಂದು ಜೀವಿಸಬೇಕು, ನಿರ್ಜೀವದಿಂದ ಜೀವಿಸುವುದಕ್ಕಾಗುವುದಿಲ್ಲ—ಸಜೀವವಸ್ತುಗಳು ಸ್ಥಾವರ ಜಂಗಮಗಳೆಂದೆರಡು ವಿಧ ಬತ್ತ ಗೋಧಿ ಕಾಳುಕಡ್ಡಿ ಗೆಡ್ಡೆ ಗೆಣಸು ಕಾಯಿಸೊಪ್ಪು ಮುಂತಾದವು ಸ್ಥಾವರಗಳು; ಪಶು ಪಕ್ಷಿ ಜಲಚರಗಳು ಜಂಗಮಗಳು. ತಿನ್ನುವಾಗ ಅಡಿಗೆ ಮಾಡುವಾಗ ಸ್ಥಾವರಗಳಿಗಾಗುವ ಹಿಂಸೆಯು ಪ್ರತ್ಯಕ್ಷವಲ್ಲ, ಜಂಗಮಗಳದು ಪ್ರತ್ಯಕ್ಷ. ಆದರಿಂದ ಹಿಂಸೆ(ದ್ರೋಹ)ಯ ದೃಷ್ಟಿಯಿಂದ ಸ್ಥಾವರಗಳ ಆಹಾರವು ಶ್ರೇಷ್ಠವು ಜಂಗಮಗಳದಲ್ಲ ಎನ್ನುವುದಕ್ಕಾಗುವುದಿಲ್ಲ.[5] ಹಾಗೆ ನೋಡಿದರೆ ಸ್ಥಾವರಗಳನ್ನು ತಿನ್ನುವುದರಿಂದ ಆಗುವ ಹಿಂಸೆಯೇ ಅಪರಿಮಿತ. ಪ್ರಕೃತಿನಿಯತವಾದ ಆಹಾರವನ್ನು ಈಶ್ವರನಿಯಾಮಕದಿಂದ ಸದಾಚಾರವನ್ನನುಸರಿಸಿ ತಿನ್ನುತ್ತೇವೆ, ಇದರಲ್ಲಿ ಪುರುಷಕಾರವಿಲ್ಲ, ಈಶ್ವರಾರ್ಪಣವೆಂಬ ಭಾವನೆಯಿಂದ ಉಂಡರೆ ಪಾಪವಿಲ್ಲ, ಎಂದುಕೊಳ್ಳಬೇಕು.[6]



4 ನಾನ್ನಮದ್ಯಾನ್ಮೂರ್ಖಾಣಾಂ ಮೃತಾನಾಂ ದುಃಖಜೀವಿನಾಂ। ಸ್ತ್ರೀಜಿತಕ್ಲೀಬಪತಿತಕ್ರೂರದುಷ್ಕೃತಕಾರಿಣಾಂ॥ ಗಣ್ಯಾರಿಗಣಿಕಾಸತ್ರಧೂರ್ತಾನಾಂ ಪಾಣಿಕಂ ಚ ನ॥ ಅ.ಸಂ-ದಿನಚರ್ಯಾ॥

5 ನ ಮಾಂಸಭಕ್ಷಣೇ ದೋಷೋ ನ ಮದ್ಯೇ ನ ಚ ಮೈಥುನೇ। ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾ॥ಮ-೫-೫೬॥ ಮಾಂಸದ ತ್ಯಾಗಕ್ಕೆ ಐಹಿಕಫಲವೂ ಪಾರಲೌಕಿಕಫಲವೂ ಉಕ್ತವಾಗಿವೆ॥ಮ-೫.೪೮, ೪೯॥

6 ಪ್ರಾಣಸ್ಯಾನ್ನಮಿದಂ ಸರ್ವಂ ಪ್ರಜಾಪತಿರಕಲ್ಪಯತ್। ಸ್ಥಾವರಂ ಜಂಗಮಂ ಚೈವ ಸರ್ವಂ ಪ್ರಾಣಸ್ಯ ಭೋಜನಂ॥ಮ-೫-೨೮॥ ಯಜ್ಜುಹೋಷಿ ಯದಶ್ನಾಸಿ ಯತ್ಕರೋಷಿ ದದಾಸಿ ಯತ್। ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ॥ಭ.ಗೀ.॥

# ೧೨ನೆಯ ಪ್ರಕರಣ—ಧರ್ಮಜೀವನ

ಧರ್ಮನಿಯಮಗಳು ಅನಂತವಾಗಿವೆ. ಹೊಸ ಹೊಸ ನಿಯಮಗಳೂ ಅವಶ್ಯವಾಗುತ್ತವೆ. ಅಷ್ಟೆಲ್ಲವನ್ನೂ ಅನುಷ್ಠಾನಮಾಡುವುದು ಸಾಧ್ಯವೆ ಎನ್ನಬಹುದು. ಮಾಡಿದರೆ ಎಲ್ಲವನ್ನೂ ಒಟ್ಟಿಗೆ ಮಾಡಬೇಕು ಎಂಬ ನಿಯಮವೇನೂ ಇಲ್ಲ. ಧರ್ಮವನ್ನು ಎಷ್ಟೆಷ್ಟು ಆಚರಿಸಿದರೆ ಅಷ್ಟಷ್ಟೇ ಶ್ರೇಯಸ್ಸು. ಮಾಡುತ್ತಾ ಮಾಡುತ್ತಾ ಧರ್ಮಜೀವನದ ವೈಶಾಲ್ಯವು ಹೆಚ್ಚುತ್ತಾ ಹೋಗುವುದು. ಆತುರವೂ ಪಡಬಾರದು, ಆತುರದಲ್ಲಿ ಧರ್ಮದ ಯಾಥಾರ್ಥ್ಯವು ಬೋಧೆಯಾಗುವುದಿಲ್ಲ. ಧರ್ಮದ ಹೆಸರಿನಲ್ಲಿ ಅಧರ್ಮವೂ ಆತ್ಮಪರಪೀಡೆಯೂ ಸಂಭವಿಸಬಹುದು ಗೆದ್ದಲು ಹುತ್ತವನ್ನು ಕಟ್ಟುವಂತೆ ಧರ್ಮವನ್ನು ಸ್ವಲ್ಪ ಸ್ವಲ್ಪವಾಗಿ ಶೇಖರಿಸುತ್ತಾ ಹೋಗಬೇಕು.[1] ಹುಟ್ಟುವಾಗಲೂ ಒಬ್ಬನೇ, ಹೋಗುವಾಗಲೂ ಒಬ್ಬನೇ, ಸುಕೃತದುಷ್ಕೃತಗಳನ್ನು ಅನುಭವಿಸುವವನೂ ಒಬ್ಬನೇ. ಯಾರೂ ಜತೆಯಲ್ಲಿ ಬರುವುದಿಲ್ಲ, ಧರ್ಮವೊಂದೇ ಜತೆಯಲ್ಲಿ ಬರುವುದು.[2] ಧರ್ಮಕರ್ಮಗಳ ಫಲಪ್ರಾಪ್ತಿಯ ವಿಷಯದಲ್ಲಿ ಆಸೆಯೂ ನಿರಾಸೆಯೂ ತ್ವರೆಯೂ ತಾಮಸವೂ ಇರಬಾರದು. ಫಲಾಪೇಕ್ಷೆಯಿಂದ ಮಾಡುವುದು ರಾಜಸವು.[3] ಫಲಾನುಬಂಧವಿಲ್ಲದೆ ಕರ್ತವ್ಯವೆಂದು ಮಾಡುವುದೇ ಸಾತ್ವಿಕವು.[4] ಫಲದೋಷಗಳ ಅನುಬಂಧವಿಲ್ಲದೆ ಆತ್ಮಸಂತುಷ್ಟಿಗಾಗಿ ಮಾಡುವುದೇ ಧರ್ಮವು.[5] ಫಲವು ಈಶ್ವರಾಧೀನವು, ನಮ್ಮ ಅಧಿಕಾರಕ್ಕೊಳಪಟ್ಟುದಲ್ಲ. ನಿಷ್ಕಾಮಕರ್ಮವು ಸಿದ್ಧರಿಗೆ ಸಾಧ್ಯ, ಸರ್ವರಿಗೂ ಅಲ್ಲ. ಸಾಧಾರಣ ಜನರಿಗೆ ಪುಣ್ಯದ ಫಲವು ಅಭೀಷ್ಟವೇ, ಅದಕ್ಕಾಗಿಯೇ ಮಾಡುತ್ತಾರೆ. ಮಾಡುತ್ತಿದ್ದ ಹಾಗೆಯೇ ಫಲಪ್ರಾಪ್ತಿ

---

1 ಧರ್ಮಂ ಶನೈಸ್ಸಂಚಿನುಯಾದ್ವಲ್ಮೀಕಮಿವ ಪುತ್ತಿಕಾಃ । ಪರಲೋಕಸಹಾಯಾರ್ಥಂ ಸರ್ವಭೂತಾನ್ಯಪೀಡಯನ್ ॥ಮ. iv-೨೩೮॥

2 ಏಕಃ ಪ್ರಜಾಯತೇ ಜಂತುರೇಕ ಏವ ಪ್ರಲೀಯತೇ । ಏಕೋಽನುಭುಙ್ತೇ ಸುಕೃತಮೇಕ ಏವ ಚ ದುಷ್ಕೃತಂ ॥೨೪೦॥ . ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥೨೪೧॥ ಮ. iv ॥ ಯನ್ಮಯಾ ಪರಿಜನಸ್ಯಾರ್ಥೇ ಕೃತಂ ಕರ್ಮ ಶುಭಾಶುಭಂ । ಏಕಾಕೀ ತೇನ ದಹ್ಯೇಽಹಂ ಗತಾಸ್ತೇ ಫಲಭೋಗಿನಃ ॥ ಗರ್ಭೋಪನಿಷತ್ತು ॥

3 ಅಭಿಸಂಧಾಯ ತು ಫಲಂ ದಂಭಾರ್ಥಮಪಿಚೈವ ಯತ್ । ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಂ ॥ ಭ. ಗೀ. ॥

4 ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ । ಯಷ್ಟವ್ಯಮೇವೇತಿ ಮನಸ್ಸಮಾಧಾಯ ಸ ಸಾತ್ವಿಕಃ ॥ ಭ. ಗೀ. ॥

5 ಫಲತೋಽಪಿ ಚ ಯತ್ಕರ್ಮ ನಾನರ್ಥೇನಾನುಬಧ್ಯತೇ । ಕೇವಲಪ್ರೀತಿಹೇತುತ್ವಾತ್ತದ್ಧರ್ಮ ಇತಿ ಕೀರ್ತ್ಯತೇ ॥

ಯಾಗುವುದಿಲ್ಲವಲ್ಲ ಎಂದು ತವಕವೂ ಪಡಬಾರದು, ನಿರಾಶರೂ ಆಗಬಾರದು. ಕ್ರಿಯೆಯೂ ಫಲವೂ ಒಟ್ಟಿಗಿರುವುದೂ ಉಂಟು, ದೂರವಾಗಿರುವುದೂ ಉಂಟು. ಬೆಂಕಿಯು ಮುಟ್ಟುತ್ತಿದ್ದಹಾಗೆಯೇ ಸುಡುವುದು, ಔಷಧವನ್ನು ನುಂಗುತ್ತಿದ್ದ ಹಾಗೆಯೇ ರೋಗವು ಗುಣವಾಗುವುದಿಲ್ಲ. ಧರ್ಮದ ಫಲವು ಇಹದಲ್ಲಿಯೂ ಪರದಲ್ಲಿಯೂ ಜನ್ಮಾಂತರದಲ್ಲಿಯೂ ಪ್ರಾಪ್ತವಾಗುವುದು. ಇಹವುಂಟು, ಪರವುಂಟು, ಜನ್ಮಾಂತರವುಂಟು, ಎಂದು ಶಾಸ್ತ್ರವಿದೆ, ಯುಕ್ತಿಯಿಂದಲೂ ಸಿದ್ಧವಾಗುತ್ತದೆ. ಪುಣ್ಯವನ್ನು ಮಾಡುವವನಿಗೆ ದುರ್ಗತಿಯಿಲ್ಲವೆಂದು ಭಗವದ್ವಚನವಿದೆ[6] ಫಲಪ್ರಾಪ್ತಿಯ ವಿಷಯದಲ್ಲಿ ಸಂಶಯವಿರಬಾರದು—ಸಂಶಯಾತ್ಮರು ಧೈರ್ಯವಾಗಿ ಪಾಪವನ್ನೂ ಮಾಡಲಾರರು, ಶ್ರದ್ಧೆಯಿಂದ ಪುಣ್ಯವನ್ನೂ ಮಾಡುವುದಿಲ್ಲ. ಅವರಿಗೆ ಉಭಯಭ್ರಷ್ಟತ್ವವು ತಪ್ಪದು.[7]

ಧರ್ಮವು ಸೂಕ್ಷ್ಮವಾದುದು, ಎಷ್ಟು ವಿಸ್ತರಿಸಿದರೂ ಎಷ್ಟೋ ಬಿಟ್ಟುಹೋಗುವುದು. ಆದುದರಿಂದ ಸರ್ವರಿಗೂ ಅನುಷ್ಠಾನಕ್ಕೆ ಸರಾಗವಾಗಲೆಂದು ಧರ್ಮಸರ್ವಸ್ವವನ್ನು ಹೀಗೆ ಸಂಗ್ರಹಿಸಿದ್ದಾರೆ:—ಧರ್ಮದ ಲಕ್ಷಣಗಳು ಹತ್ತು-(1) **ಧೃತಿ**ಯೆಂದರೆ ಇಷ್ಟನಾಶ ಅನಿಷ್ಟಪ್ರಾಪ್ತಿ ಯಾವುದು ಸಂಭವಿಸಿದರೂ ಚಿತ್ತಸ್ಥೈರ್ಯವನ್ನು ತ್ಯಜಿಸದಿರುವುದು. (2) **ಕ್ಷಮೆ(ಅಕ್ರೋಧ)**ಯೆಂದರೆ ಅಪಕಾರಿಗಳಿಗೆ ಪ್ರತಿಯಾಗಿ ಅಪಕಾರ ಮಾಡದಿರುವುದು. (3) **ದಮ**ವೆಂದರೆ ಚಿತ್ತವಿಕಾರಕ್ಕೆ ತಕ್ಕ ವಿಷಯವಿದ್ದರೂ ವಿಕೃತಿಗೆ ಅವಕಾಶ ಕೊಡದಿರುವುದು. (4) **ಅಸ್ತೇಯ**ವೆಂದರೆ ಪರದ್ರವ್ಯವನ್ನಪಹರಿಸದಿರುವುದು. (5) **ಶೌಚ**ವೆಂದರೆ ಬಾಹ್ಯಾಽಭ್ಯಂತರ ಶುದ್ಧಿಯು. (6) **ಇಂದ್ರಿಯನಿಗ್ರಹ**ವೆಂದರೆ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವುದು. (7) **ಧೀ**ಯೆಂದರೆ ಶಾಸ್ತ್ರದಿಂದಲೂ ಅನುಭವದಿಂದಲೂ ಹಿತಾಽಹಿತವನ್ನರಿಯುವ ಬುದ್ಧಿಯು. (8) **ವಿದ್ಯೆ**ವೆಂದರೆ ತತ್ತ್ವಜ್ಞಾನವು—ಆತ್ಮಜ್ಞಾನವು. (9) **ಸತ್ಯ**ವೆಂದರೆ ಯಥಾರ್ಥಚಿಂತನ ಮತ್ತು ಯಥಾರ್ಥಭಾಷಣ. (10) **ಅಕ್ರೋಧ**ವೆಂದರೆ ಕೋಪ ಬರುವ ಪ್ರಸಂಗವಿದ್ದರೂ ಕೋಪಿಸದಿರುವುದು.[8] ಯಾಜ್ಞವಲ್ಕ್ಯರು

---

6 ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ । ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಸ್ಸಮಾಃ ॥ ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥ ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ । ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಂ ॥ಭ. ಗೀ.॥

7 ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ । ...ಸಂಶಯಾತ್ಮಾ ವಿನಶ್ಯತಿ ॥ಭ. ಗೀ.॥

8 ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ । ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ ॥ಮ-vi-೯೨॥

ಕ್ಷಮೆ ಎನ್ನುವುದಕ್ಕೆ ಬದಲಾಗಿ ಹ್ರೀ ಎಂದಿದ್ದಾರೆ. ಹ್ರೀ ಎಂದರೆ ಅಕಾರ್ಯಕರಣ ದಲ್ಲಿ ನಾಚುವುದು.[9] ಹೀಗೆ ದಶಲಕ್ಷಣಾನ್ವಿತವಾದ ಧರ್ಮವು ಸರ್ವರಿಗೂ ಅನು ಷ್ಠೇಯವು—ನಾನಿಂಥಾ ಆಶ್ರಮಿ, ನಾನು ಮಾಡಬೇಕು, ನಾನು ಮಾಡಬಾರದು ಎಂಬ ಭೇದವಿಲ್ಲ.[10] ಧರ್ಮಸಾರಸ್ವವನ್ನು ವ್ಯಾಸರೂ ಯಾಜ್ಞವಲ್ಕ್ಯರೂ ಒಂದೇ ಮಾತಿನಲ್ಲಿ ಹೇಳಿದ್ದಾರೆ—ನಮಗೆ ಪ್ರತಿಕೂಲವಾದುದನ್ನು ಮತ್ತೊಬ್ಬರಿಗೆ ಮಾಡ ಬಾರದು ಎಂದು.[11]

ಇದೆಲ್ಲವನ್ನೂ ಪರಿಶೀಲಿಸಿದರೆ ಧರ್ಮವು ಸ್ವಾನುಷ್ಠಾನಕ್ಕೋಸ್ಕರ ಉಕ್ತ ವಾಗಿದೆಯೇ ಹೊರತು ಪರಾರ್ಥವಾಗಲ್ಲ. ಧರ್ಮಾಚರಣದಲ್ಲಿ ತಪ್ಪು ಮಾಡುವವ ರಿಬ್ಬರು. ನಾನು ದೊಡ್ಡವನು, ನನ್ನನ್ನು ಎಲ್ಲರೂ ನಿರೀಕ್ಷಿಸುತ್ತಿದ್ದಾರೆ, ಧರ್ಮವನ್ನು ಮಾಡದಿದ್ದರೆ ಮಾನವಲ್ಲ, ಎಂದು ಮಾಡುವವರೊಂದು ವಿಧದವರು. ನಾನೇ ಲೋಕಕ್ಕೆ ಆದರ್ಶಪುರುಷ, ನನ್ನನ್ನೇ ಎಲ್ಲರೂ ಅನುಕರಿಸುತ್ತಾರೆ, ಎನ್ನುವವರಿನ್ನೊ ಬ್ಬರು. ಇಂಥಾ ಮಾನಾಭಿಮಾನಗಳಿಂದ ಮಾಡುವುದು ತಪ್ಪು. ಧರ್ಮವಾದುದ ರಿಂದ ಮಾಡುತ್ತೇವೆ, ಮಾಡೆಂದು ಅಂತರಾತ್ಮವು ಪ್ರೇರಿಸುತ್ತದೆಯಾಗಿ ಮಾಡುತ್ತೇವೆ, ಎಂದು ಮಾಡಬೇಕು. ಧರ್ಮವನ್ನು ಮತ್ತೊಬ್ಬರಿಗೆ ಬೋಧಿಸುವುದಕ್ಕೂ ಹೋಗ ಬಾರದು, ಅದು ಶಿಷ್ಟರ ಅಧಿಕಾರ. ಧರ್ಮಾಚರಣವು ನಮ್ಮನ್ನು ಸುಶಿಕ್ಷಿತರನ್ನಾಗಿ ಮಾಡಿ ಸತ್ಪ್ರಜೆಗಳಾಗಿಯೂ ಸತ್ಪುರುಷರಾಗಿಯೂ ಮಾಡಿ ಸ್ವಶ್ರೇಯಸ್ಸನ್ನು ಸಾಧಿಸಲು ವಿಧಾಯಕವಾಗಿದೆ. ಧರ್ಮಜಿಜ್ಞಾಸವು ಸದಾ ಇದ್ದೇ ಇರುತ್ತದೆ. ವಿಷಯುಗಳನ್ನು ತಿಳಿಯುತ್ತಾ ಹೋದಷ್ಟೂ ಜಿಜ್ಞಾಸವೂ ಹೆಚ್ಚುತ್ತದೆ. ನಾನು ಯಾರು, ಎಲ್ಲಿಂದ ಬಂದೆ, ಏಕೆ ಬಂದೆ, ಏಕೆ ಇದ್ದೇನೆ, ಎಲ್ಲಿಗೆ ಹೋಗಬೇಕು, ಎಂಬ ವಿಚಾರವಂತೂ ಸರ್ವರನ್ನೂ ಸರ್ವಕಾಲದಲ್ಲಿಯೂ ಬಾಧಿಸುತ್ತಿರುತ್ತದೆ. ಜಿಜ್ಞಾಸದಿಂದಲೇ ಕಾರ್ಯಾಕಾರ್ಯ ವಿವೇಚನೆ, ಅದರಿಂದಲೇ ಪ್ರಗತಿ, ಎನ್ನಬೇಕು. ಧರ್ಮವನ್ನು ಅರಿತು ಧರ್ಮವನ್ನಾಚರಿಸಿ ಧರ್ಮಜೀವಿಗಳಾಗಿ ಶ್ರೇಯಸ್ಸನ್ನು ಸಾಧಿಸಿಕೊಳ್ಳಬೇಕು, ನಮ್ಮೊಳಗಿರುವ ಅರಿಷಡ್ವರ್ಗಗಳನ್ನು ಜಯಿಸಿ ಅಸಾರವಾದ ದೇಹದಿಂದ ಸಾರವನ್ನು

---

9 ಸತ್ಯಮಸ್ತೇಯಮಕ್ರೋಧೋ ಹ್ರೀಶ್ಶೌಚಂ ಧೀರ್ಧೃತಿರ್ದಮಃ । ಸಂಯತೇಂ ದ್ರಿಯತಾ ವಿದ್ಯಾ ಧರ್ಮಸ್ಸರ್ವ ಉದಾಹೃತಃ ॥ಯಾ-iii-೬೬॥

10 ನಾಶ್ರಮಃ ಕಾರಣಂ ಧರ್ಮೇ ಕ್ರಿಯಮಾಣೋ ಭವೇದ್ಧಿ ಸಃ ॥ಯಾ-iii-೬೫॥ ದೂಷಿತೋಽಪಿ ಚರೇದ್ಧರ್ಮಂ ಯತ್ರಯತ್ರಾಶ್ರಮೇ ವಸನ್ । ಸಮಸ್ಸರ್ವೇಷು ಭೂತೇಷು ನ ಲಿಂಗಂ ಧರ್ಮಕಾರಣಂ ॥ಮ-vi-೬೬॥

11 ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾಚಾಪ್ಯವಧಾರ್ಯತಾಂ । ಆತ್ಮನಃ ಪ್ರತಿ ಕೂಲಾನಿ ನ ಪರೇಷಾಂ ಸಮಾಚರೇತ್ ॥ವ್ಯಾಸಃ॥ ಅತೋ ಯದಾತ್ಮನೋಽಪಥ್ಯಂ ಪರೇ ಷಾಂ ನ ತದಾಚರೇತ್ ॥ಯಾ-iii-೬೫॥

ತೆಗೆಯಬೇಕು.[12] ಧರ್ಮಾಚರಣದಲ್ಲಿ ವಿಲಂಬಮಾಡಬಾರದು. ಪ್ರತಿಕ್ಷಣವೂ ದೇಹಾಂತದ ಭೀತಿಯನ್ನಿಟ್ಟು ಧರ್ಮವನ್ನು ಆಚರಿಸಬೇಕು.[13] ಪ್ರತಿಯೊಬ್ಬರೂ ಹೀಗೆ ನಡೆದರೆ ಇದೇ ಸ್ವರ್ಗ, ಇಲ್ಲಿಯೇ ಮುಕ್ತಿ.



12 ದಶಧರ್ಮವರ್ಧಾನ್ ರಕ್ಷೇತ್ ಜಯೇನ್ನಾಽಭ್ಯಂತರಾನರೀನ್ । ...ಆದದೀತ ಸದಾ ದೇಹಾದಿತ್ಥಂ ಸಾರಮಸಾರತಃ ॥ಅ.ಸಂ ದಿನಚರ್ಯಾ॥

13 ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥ನೀತಿ॥

# ಶುದ್ಧಾಽಶುದ್ಧ ಪತ್ರಿಕೆ

| ಪುಟ | ಪಙ್ಕ್ತಿ | ಅಶುದ್ಧ | | ಶುದ್ಧ |
|---|---|---|---|---|
| 1 | 3 | ಈಚೀಚಿಗಂತೂ | .. | ಈಚೀಚೆಗಂತೂ |
| 3 | 21 | ಸ್ಥಾಪಕಾಚಾರ್ಯರು | . | ಸ್ಥಾಪನಾಚಾರ್ಯರು |
| 13 | 22 | ಪ್ರವೃತ್ರಿಮಾರ್ಗ | ... | ಪ್ರವೃತ್ತಿಮಾರ್ಗ |
| 14 | 1 | ಪರಧರ್ಮವು | .. | ಪರಮಧರ್ಮವು |
| 19 | 31 | ಮಚ್ಛಕಟಿಕ | .. | ಮೃಚ್ಛಕಟಿಕ |
| 20 | 21 | ಮೂಢಭಕ್ತಿಯೆಂದಾ | ... | ಮೂಢಭಕ್ತಿಯಿಂದಾ |
| 22 | 26 | ದೇವಿತೆಗಳ | .. | ದೇವತೆಗಳ |
| ,, | 28 | ದತ್ತಾವಾನಖಿಲಾರ್ | .. | ದತ್ತವಾನಖಿಲಾರ್ |
| ,, | 30 | ಇತಿಭಾತೋಃ | . | ಇತಿಧಾತೋಃ |
| 24 | 19 | ವಿರುದ್ಧವಾದ | .. | ಅವಿರುದ್ಧವಾದ |
| ,, | 26 | ಪ್ರಶಾಂತಿತ್ವೇತಿ | .. | ಪ್ರಶಾಂತತ್ವೇತಿ |
| ,, | 31 | ವಿಚಕಿತ್ಸಾವಾ | . | ವಿಚಿಕಿತ್ಸಾವಾ |
| 25 | 13 | ತ್ರೈವಿದ್ಯವ್ಯದ್ಧಾ | .. | ತ್ರೈವಿದ್ಯವೃದ್ಧಾ |
| 26 | 17 | ಸ್ಮತಿಯು | .. | ಸ್ಮೃತಿಯು |
| ,, | 28 | ಪ್ರಕೃತಿಜ್ಯೇರ್ಗುಣೈಃ | .. | ಪ್ರಕೃತಿಜೈರ್ಗುಣೈಃ |
| 27 | 30 | ವಿನ್ಧ್ಯೇನಮಿಹ | . | ವಿದ್ಧ್ಯೇನಮಿಹ |
| 28 | 25 | ಧರ್ಮಮನುಶಿಷ್ಠರ್ | .. | ಧರ್ಮಮನುತಿಷ್ಠರ್ |
| 31 | 6 | ಧರ್ಮಚನಗಳ | ... | ಧರ್ಮವಚನಗಳ |
| 32 | 8 | ಇವುಳಗ | . | ಇವುಗಳ |
| ,, | 25 | ಕರ್ಮಾದಿಷ್ಟಪ್ಯನ್ನೇಯಂ | ... | ಕರ್ಮಾದಿಷ್ವಪ್ಯನ್ನೇಯಂ |
| ,, | 26 | ದ್ಯವ್ಯಂ | .. | ದ್ರವ್ಯಂ |
| 36 | 29 | ಕಿಮುಸಿಷ್ಯತಿ | .... | ಕಿಮುಶಿಷ್ಯತಿ |
| 39 | 6 | ಐಹಿಂಕಫಲಾಪ್ರಾಪ್ತಿಗೇ | .... | ಐಹಿಕಫಲಪ್ರಾಪ್ತಿಗೆ |
| ,, | 25 | ಪರಿಪಾಮೇ | .. | ಪರಿಣಾಮೇ |
| ,, | 27 | ಯತ್ರವಗ್ರೇ | . | ಯತ್ರದಗ್ರೇ |
| 43 | 28 | ಪರಿಷೋತ್ಸರ್ಜನಂ | ... | ಪುರೀಷೋತ್ಸರ್ಜನಂ |
| 44 | 14 | ಪ್ರ ವರ್ತಯೇತ್ರಚಲಿತಂ | ... | ಪ್ರವರ್ತಯೇತ್ರಚಲಿತಂ |
| 47 | 19-20 | ಅರ್ಥೇಷ್ಟ್ಯರ್ಥಾನು | .. | ಅರ್ಥೇಃಷ್ವರ್ಥಾನು |
| 48 | 31 | ಆಯುಸ್ಯೇಃನ್ನ | ... | ಆಯುಸ್ಯೇನ್ನ |
| 49 | 20 | ಭುತ್ವಾ | .... | ಭುಕ್ತ್ವಾ |
| ,, | 31 | ನಪರ್ಯಯೇ | . | ವಿಪರ್ಯಯೇ |
| 51 | 17 | ಕೂಪೋಧ್ಯಾನ | .... | ಕೂಪೋದ್ಯಾನ |

| ಪುಟ | ಪಙ್ಕ್ತಿ | ಅಶುದ್ಧ | | ಶುದ್ಧ |
|---|---|---|---|---|
| 51 | 23 | ಸೃಣವೀಂ | ... | ವೈಣವೀಂ |
| ,, | 23 | ಧಾರಯೇದ್ಯೃಷ್ಟಿಂ | ... | ಧಾರಯೇದ್ಯಷ್ಟಿಂ |
| 55 | 16 | ರಾಜೇದ್ರ | .. | ರಾಜೇಂದ್ರ |
| 60 | 27 | ತ್ರೇಷ್ವೇವ | | ತೇಷ್ವೇವ |
| ,, | 31 | ಯೂನಸ್ವ್ಥವಿರ | | ಯೂನಸ್ಸ್ಥವಿರ |
| 61 | 19 | ಅಭಿವಾದಯೇದ್ವೃದ್ಧಾಂಶ್ವ | | ಅಭಿವಾದಯೇದ್ವೃದ್ಧಾಂಶ್ಚ |
| 62 | 20 | ಪ್ರಾಣಮ್ಯ | - | ಪ್ರಣಮ್ಯ |
| ,, | 21 | ಪಿಪ್ರೋ | - | ವಿಪ್ರೋ |
| ,, | 28 | ವಿದಿವದ್ವಂದನಂ | ... | ವಿಧಿವದ್ವಂದನಂ |
| ,, | 32 | ಮಾತೇತಿ ನಾ | . | ಮಾತೇತಿ ವಾ |
| 64 | 30-31 | ಜನವದಸ್ಯಾರ್ಥೇಃ | . | ಜನಪದಸ್ಯಾರ್ಥೇ |
| 69 | 20 | ಸಂಗ್ರಣಂ | .. | ಸಂಗ್ರಹಣಂ |
| 72 | 30 | ದ್ವೇಷ್ವೇ | ... | ದ್ವೇಷ್ಯೇ |
| 73 | 3 | ಆದೃಷ್ಟಾಂಗ | ... | ಆದ್ಯಷ್ಟಾಂಗ |
| 77 | 32 | ಮಿ-೬೩-೧೮ | ... | ವಿ-೬೩-೧೮ |
| 78 | 5 | ಆತ್ಯಂಗ | ... | ಅತ್ಯಂತ |
| 79 | 27-28 | ಚತುಷ್ಟಧಂ | . | ಚತುಷ್ಪಧಂ |
| 80 | 5 | ದಾರಿಯುನ್ನ | .... | ದಾರಿಯನ್ನು |
| ,, | 24 | ಪ್ರಧಾವೇಚ್ಛ | ... | ಪ್ರಧಾವೇಚ್ಚ |
| 84 | 17 | ಆದಾಗದಿದ್ದರೆ | ... | ಆದಾಗದಿದ್ದರೆ |
| ,, | 22 | ಶುಷ್ಧಂ | ... | ಶುದ್ಧಾಂ |
| 86 | 19 | ಶೀಲೋಂಛ | | ಶಿಲೋಂಛ |
| ,, | 27 | ಧಾನ್ಯಾಧಿ | .... | ಧಾನ್ಯಾದಿ |
| ,, | 31 | ಕೊಲ್ಲೂಕಃ | .. | ಕುಲ್ಲೂಕಃ |
| 88 | 8 | ಸತ್ತುಗಳ | | ಸ್ವತ್ತುಗಳ |
| 90 | 33 | ಚ್ಞಾನಂ | - | ಜ್ಞಾನಂ |
| 92 | 19 | ನಿಶೇವೇತ | ... | ನಿಷೇವೇತ |
| ,, | 24 | 1, 2ನೇ | - - | 18, 19ನೇ |
| 93 | 10 | ನಿಕ್ತ್ಯಕರ್ಮ | ... | ನಿತ್ಯಕರ್ಮ |
| 96 | 5 | ಜಾನವು | . | ಜ್ಞಾನವು |
| 100 | 26 | ಗಚ್ಯಂತಿ | - - | ಗಚ್ಛಂತಿ |
| 109 | 8 | ನೀರಸ್ತೆತ್ತಿ | ... | ನೀರನ್ನೆತ್ತಿ |
| ,, | 25 | ತಾಟಾಕಾನಾಂ | - - | ತಟಾಕಾನಾಂ |
| 110 | 5 | ಎಲ್ಣಾ | - - | ಎಲ್ಲಾ |
| 111 | 8 | ಕ್ಷುದ್ರಜೀವಗಳ | - - | ಕ್ಷುದ್ರಜೀವಿಗಳ |
| 119 | 27 | ಶೈಶೂರ್ಕ್ಯವೆಂದರೆ | .... | ಶೈಶೂನ್ಯವೆಂದರೆ |

| ಪುಟ | ಪಜ್ತಿ | ಅಶುದ್ಧ | | ಶುದ್ಧ |
|---|---|---|---|---|
| 131 | 19 | ಏತಸ್ಸರ್ವಂ | ... | ಏತತ್ಸರ್ವಂ |
| ,, | 34 | ದಾತೃ್ಯಾಣಾಂ | ... | ದಾತ್ಯಾಣಾಂ |
| 135 | 10 | ಆವರಿಸಿಲ್ಲ. ಅಂತರಿಕ್ಷದಂತೆ | | ಆವರಿಸಿಲ್ಲ. ನಾನು ನಾನೇ, ನೀನು ನೀನೇ. ಅಂತರಿಕ್ಷದಂತೆ |
| 137 | 1 | ಸೇರಿಹೋಗುಳವು | .. | ಸೇರಿಹೋಗುವಳು |
| 138 | 15 | ಅನುಹ್ರಹಿಸು | .. | ಅನುಗ್ರಹಿಸು |
| 141 | 29 | ಉತ್ಪಾದನಪತ್ಯಸ್ಯ | ... | ಉತ್ಪಾದನಮಪತ್ಯಸ್ಯ |
| ,, | 31 | ಗಚ್ಚತಿ | ... | ಗಚ್ಛತಿ |
| 144 | 24 | ಆತ್ಮನನಶ್ಚ | ... | ಆತ್ಮನಶ್ಚ |
| 147 | 21 | ಪರಪುಷುಷರ | .. | ಪರಪುರುಷರ |
| 156 | 23 | ಪರಸ್ತ್ರೀಯಾಃ | ... | ಪರಸ್ತ್ರಿಯಾಃ |
| 158 | 20 | ಸಾಧ್ವ್ಟೀ | ... | ಸಾಧ್ವೀ |
| 159 | 28 | ನಿಕ್ಷಿಪ್ಯಾಗ್ನೀಂ | .... | ನಿಕ್ಷಿಪ್ಯಾಗ್ನಿಂ |
| 164 | 26 | ಮುಕ್ಕ್ವತ್ತಾರೆ | .... | ಮುಕ್ಕುತ್ತಾರೆ |
| 174 | 25 | ಸ್ನಾನಪರಶ್ಯ | ... | ಸ್ನಾನಪರಸ್ಯ |
| 181 | 27 | ಪುತಿಪ್ರಣವಸಂಯುಕ್ತಾಂತ್ರಿರೆಯಂ | | ಪ್ರತಿಪ್ರಣವಸಂಯುಕ್ತಾಂ ತ್ರಿರೆಯಂ |
| 184 | 16 | ವಂತ್ರಾಚಮನ | ... | ಮಂತ್ರಾಚಮನ |
| 192 | 17 | ಮುಧ್ಯದಲ್ಲಿ | ... | ಮಧ್ಯದಲ್ಲಿ |
| 203 | 7 | ಕೆರೆದಿಟ್ಟ | .. | ಕರೆದಿಟ್ಟ |
| 204 | 7 | ಜಿತ್ತವೃತ್ತಿಯನ್ನು | .... | ಚಿತ್ತವೃತ್ತಿಯನ್ನು |
| 207 | 28 | ಮೇಲ್ಪಟ್ಟದ್ದು | .. | ಮೇಲ್ಮಟ್ಟದ್ದು |
| 210 | 17 | ಕೌಂಸ್ತುಭಾಧ್ಯಾಭರಣ | .... | ಕೌಂಸ್ತುಭಾದ್ಯಾಭರಣ |
| 216 | 17 | ಜೇನುತಪ್ಪ | .... | ಜೇನುತುಪ್ಪ |
| 218 | 19 | ಅಧವಾ | ... | ಅಥವಾ |
| ,, | 31 | borth | .... | broth |
| 219 | 7 | ಪದಾರ್ಥವನ್ನು | .... | ಪದಾರ್ಥವನ್ನು |